# ಕಲಾರಾಧನೆ

ತೆಲುಗು ಮೂಲ:

ಡಾ|| ಕೊಂಡೂರು ವೀರರಾಘವಾಚಾರ್ಯುಲು

ಅನುವಾದ:

ಸರಿತಾ ಜ್ಞಾನಾನಂದ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ರವೀಂದ್ರ ಕಲಾಕ್ಷೇತ್ರ, ಬೆಂಗಳೂರು

**KALARADHANE** a novel originally written by Dr. Konduru Veera Raghava Acharyulu in Telugu, Translated into Kannada by Smt Saritha Gnanananda, Published by Sri N. Marishamachar, Registrar, Karnataka ShilpaKala Academi, Ravindra Kalakshetra, Bangalore.

Pages : xvi + 88 Price Rs 25.00



*ಅಧ್ಯಕ್ಷರು:*

**ಶಿಲ್ಪಿ ಕೆ. ಶಾಮರಾಯ ಆಚಾರ್ಯ**

ರಿಜಿಸ್ಟ್ರಾರ್

**ಎನ್. ಮರಿಶಾಮಾಚಾರ್**

*ಸಂಪಾದಕರು:*

**ಜಿ. ಜ್ಞಾನಾನಂದ**

*ಸಲಹಾ ಸಮಿತಿ :*

**ಶ್ರೀಮತಿ ಕನಕಾ ಮೂರ್ತಿ**

**ಕೆ. ವಿ. ಸೋಮಶೇಖರ್**

**ಕೆ. ಕಾಶಿನಾಥ್**

ಬೆಲೆ : **ಇಪ್ಪತ್ತೈದು ರೂಪಾಯಿ**

*ಮುದ್ರಣ:*

**ಲಕ್ಷ್ಮೀ ಮುದ್ರಣಾಲಯ**

ಬೆಂಗಳೂರು - ೫೬೦ ೦೧೮

ದೂರವಾಣಿ : ೬೬೧೩೧೨೩, ೬೬೧೮೭೫೨

# ಅಧ್ಯಕ್ಷರ ಮಾತು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಕೃತಿಗಳ ಪ್ರಕಟಣೆಗಾಗಿ ಯೋಚಿಸಿದಾಗ ಕುತೂಹಲದಿಂದ ಜಕಣಾಚಾರ್ಯರಿಗೆ ಸಂಬಂಧಿಸಿದ ಕೃತಿಗಳೇನಾದರು ಪ್ರಕಟವಾಗಿವೆಯೇ ಎಂದು ವಿಚಾರಿಸಿದೆ. ಈ ಕುತೂಹಲದ ಹಿಂದೆ ಜಕಣಾಚಾರ್ಯ ಪ್ರಶಸ್ತಿ ಆಯ್ಕೆ ಸಮಿತಿಯ ಅಧ್ಯಕ್ಷ ಎಂಬುದು ಮಾತ್ರವಲ್ಲ ಜಕಣಾಚಾರ್ಯ ಪ್ರಶಸ್ತಿಯ ಬಗ್ಗೆ ಪರ ಮತ್ತು ವಿರೋಧವಾಗಿ ಎದ್ದ ವಾದೋಪವಾದಗಳ ನೆನಪೂ ನನ್ನಲ್ಲಿತ್ತು. ಆಗ ಈ ಸಮಸ್ಯೆಯ ವಿಶ್ಲೇಷಣೆಯನ್ನು ನಡೆಸಿದೆ. ಜಕಣಾಚಾರ್ಯ ಇದ್ದ ಎಂಬುದು ಹೇಗೆ ಒಂದು ನಂಬಿಕೆಯೋ ಅದೇ ರೀತಿಯಾಗಿ ಇಲ್ಲ ಎಂಬುದೂ ಕೆಲವರ ನಂಬಿಕೆ ಮಾತ್ರವೇ ಎಂಬುದು ಗೊತ್ತಾಯಿತು. ಜಕಣಾಚಾರ್ಯ ಇದ್ದ ಎಂಬುದನ್ನು ಶಿಲಾಲೇಖವಾಗಲಿ, ವಿಗ್ರಹಗಳ ಮೇಲಿನ ಹೆಸರುಗಳಾಗಲಿ ಹೇಳುವುದಿಲ್ಲ ಎಂಬುದೇ ಅವರ ಬಲವಾದ ವಾದ ಎಂಬುದು ಅರ್ಥವಾಯಿತು.

ನಂತರ ನಮ್ಮಲ್ಲಿ ಜಕಣಾಚಾರ್ಯರ ಇರುವಿಕೆಯ ಬಗ್ಗೆ ನಂಬಿಕೆ ಇರಿಸಿಕೊಂಡು ಆ ಬಗ್ಗೆ ಬರೆದಿರುವ ಸಾಹಿತ್ಯವೇನಾದರೂ ಉಂಟೇ ಎಂದು ಮರು ಪರಿಶೀಲನೆ ನಡೆಸಿದೆ. ನನಗೆ ದೊಡ್ಡ ಅಚ್ಚರಿಯೇ ಕಾದಿತ್ತು. ಶ್ರೀ ಸಿ.ಕೆ. ನಾಗರಾಜ ರಾಯರ ಬೃಹತ್ ಕಾದಂಬರಿ **ಪಟ್ಟಮಹಾದೇವಿ ಶಾನ್ತಲದೇವಿ** ಕಾದಂಬರಿಯು ಬಹು ಪ್ರಖ್ಯಾತವಾದದ್ದು. ಕನ್ನಡಕ್ಕೆ ಮೊದಲಬಾರಿಗೆ ಭಾರತೀಯ ಜ್ಞಾನಪೀಠದ ಮೂರ್ತಿದೇವಿ ಪ್ರಶಸ್ತಿಯನ್ನು ತಂದುಕೊಟ್ಟ ಕಾದಂಬರಿ. ಎರಡು ಸಾವಿರ ಪುಟಗಳಿಗೂ ಹೆಚ್ಚಾಗಿರುವ ಈ ಕಾದಂಬರಿಯಲ್ಲಿ ಬಹು ಸೊಗಸಾಗಿ ಜಕಣಾಚಾರ್ಯರ ಪಾತ್ರವನ್ನು ಲೇಖಕರು ಚಿತ್ರಿಸಿದ್ದಾರೆ. ಆ ಕಾಲದ ಶಿಲ್ಪಿಗಳ ವೈದುಷ್ಯ ಎಷ್ಟಿರಬೇಕೆಂಬುದನ್ನು ಸಹಜವಾಗಿ ಕಾದಂಬರಿಕಾರರು ರೂಪಿಸಿದ್ದಾರೆ. ಜಕಣಾಚಾರ್ಯರ ಪಾತ್ರವಂತು ಬಹು ಗಂಭೀರವಾಗಿ ಮೂಡಿದೆ. ಇತಿಹಾಸದ ಅನೇಕ ಅಂಶಗಳನ್ನು ಈ ಕಾದಂಬರಿ ಮೈಗೂಡಿಸಿಕೊಂಡಿದೆ. ಶ್ರೀ ಸಿ. ಕೆ. ನಾಗರಾಜರಾಯರು ಇತಿಹಾಸದ ಬಗ್ಗೆ ಬಹು ಶ್ರದ್ಧೆ , ನಿಷ್ಠೆ ಇರಿಸಿಕೊಂಡಿರುವ ಅಪರೂಪದ ಬರಹಗಾರರು. ಡಾ॥ ಕೆ. ಎಂ. ಮುನ್ಷಿ ಅವರು ತಮ್ಮ ಪೃಥ್ವೀವಲ್ಲಭ ಕಾದಂಬರಿಯಲ್ಲಿ ಚಾಲುಕ್ಯ ಚಕ್ರವರ್ತಿ ತೈಲಪ ಮತ್ತು ಚಾಲುಕ್ಯರ ಇತಿಹಾಸಕ್ಕೆ ಪರಂಪರೆಗೆ ಅನ್ಯಾಯವೆಸಗಿದ್ದಾರೆಂದು, ಕನ್ನಡದವರಿಗೆ ಅಪಮಾನ ಮಾಡಿದ್ದಾರೆಂದು 'ಶ್ರೀ ಪೃಥ್ವೀವಲ್ಲಭ' ಕಾದಂಬರಿಯನ್ನು ಬರೆದು ತಾವೇ ಪ್ರಕಟಿಸಿರುವವರು. 'ಜಕಣಾಚಾರ್ಯ' ಕೃತಿಗೆ ಅವರು ಬರೆದಿರುವ ಮೂಲ ಲೇಖಕರ ಮುನ್ನುಡಿಯಲ್ಲೂ ಸಾಕಷ್ಟು ವಿವರಗಳನ್ನು ಹೇಳಿದ್ದಾರೆ.

ನಾಡಿನ ಸಮಗ್ರ ಇತಿಹಾಸಕ್ಕೆ ಅಪಚಾರವೆಸಗದಂತೆ ಐತಿಹಾಸಿಕ ಕಾದಂಬರಿಗಳನ್ನು ರಚಿಸುವುದೇ ಗುರಿಯಾಗಿ ಸ್ವೀಕರಿಸಿರುವ ಶ್ರೀ ಸಿ.ಕೆ. ನಾಗರಾಜರಾಯರು ಚಿತ್ರಿಸಿರುವ 'ಜಕಣಾಚಾರ್ಯ'ನನ್ನು ಅವರ ಬೃಹತ್ ಕಾದಂಬರಿಯಿಂದ ಸಂಗ್ರಹಿಸಿ ರೂಪಿಸುವ ಕೆಲಸವನ್ನು

ಅವರ ಸೂಚನೆಯ ಮೇರೆಗೆ ಶ್ರೀಮತಿ ಸರಿತಾ ಜ್ಞಾನಾನಂದ ಅವರಿಗೆ ವಹಿಸಲಾಯಿತು. ಆ ಸಂಗ್ರಹವು ಈಗ ತಮ್ಮ ಮುಂದೆ ಇದೆ. ಸ್ವತಃ ಮೂಲ ಲೇಖಕರೇ ಮೆಚ್ಚಿರುವ ಸಂಗ್ರಹ ಎಂದ ಮೇಲೆ ಬೇರೆಯವರು ಇನ್ನೇನು  ತಾನೇ ಹೇಳುವುದಿದೆ?

ಈ ಕಾದಂಬರಿಯಲ್ಲಿ ಇತಿಹಾಸ ಸಂಶೋಧಕರೊಬ್ಬರ ಕಣ್ಣಲ್ಲಿ ಪ್ರಾಚೀನ ಸ್ಥಪತಿಯ ಜೀವನ ರೀತಿ ನೀತಿಗಳ ಚಿತ್ರಣ ದೊರೆಯುತ್ತದೆ.

ತೆಲುಗು ಸಾಹಿತ್ಯದಲ್ಲಿ ಡಾ|| ಕೊಂಡೂರು ವೀರರಾಘವಾಚಾರ್ಯುಲು ಅವರು ಶ್ರೇಷ್ಠ ಲೇಖಕರೆಂದು ಪ್ರಖ್ಯಾತರಾಗಿದ್ದಾರೆ. ಆಚಾರ್ಯರು ಶಾಸ್ತ್ರ ವೈದುಷ್ಯ ಮತ್ತು ಕಾವ್ಯ ಪ್ರತಿಭೆ ಎರಡನ್ನೂ ಮೈಗೂಡಿಸಿಕೊಂಡು ಅನೇಕ ವಿದ್ವತ್‌ಪೂರ್ಣ ಕೃತಿಗಳನ್ನು ರಚಿಸಿರುವವರು. 'ಕಳಾರಾಧನ' ಅವರ ಬಹು ಪ್ರಖ್ಯಾತಕೃತಿ. ಈಗಾಗಲೇ ದಕ್ಷಿಣ ಭಾರತದ ಹನ್ನೆರಡು ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯಪುಸ್ತಕವಾಗಿದ್ದ ಕೃತಿ. ಇದರಲ್ಲಿ ಇತಿಹಾಸಕ್ಕಿಂತಲೂ ಪ್ರಧಾನವಾದುದು ಸ್ಥಪತಿಯೊಬ್ಬನ ಶಾಸ್ತ್ರೋಕ್ತ ಬದುಕು. ಆತನ ವೈದುಷ್ಯ, ಸೇವಾ ಭಾವ ಮತ್ತು ಧರ್ಮ ಪರಾಯಣತೆ. ಈ ರೀತಿಯ ಸ್ಥಪತಿಗಳ ಬಗ್ಗೆ ನಾನು ಬಾಲ್ಯದಿಂದಲೂ ಕೇಳಿದ್ದೆ. ಈಗ ಆ ರೀತಿಯ ಚಿತ್ರಣವನ್ನು ಓದಿ ಸಂತೋಷಿಸಿದ್ದೇನೆ.

ಪ್ರಸ್ತುತ ಎರಡೂ ಕಾದಂಬರಿಗಳನ್ನು ಅಕಾಡೆಮಿಯು ಕಲಾಭಿಮಾನಿಗಳ ಮಡಿಲಿನಲ್ಲಿ ಇರಿಸುತ್ತಿದೆ. ಕೇವಲ ಏಕಮುಖದ ಚಿಂತನೆಯು ಸಮಗ್ರತೆಯನ್ನು ಕೊಡುವುದಿಲ್ಲ. ಸಮಸ್ಯೆಯ ಇನ್ನೊಂದು ಮುಖವನ್ನೂ ಅರ್ಥಮಾಡಿಕೊಂಡು ಸಂಸ್ಕೃತಿ, ಇತಿಹಾಸಗಳ ಸಮಗ್ರತೆಯತ್ತ ನಾವು ಗುರಿ ಇರಿಸಿಕೊಂಡಿರುವುದು ಒಳ್ಳೆಯದು ಎಂದು ಸೂಚಿಸಲು ಮಾತ್ರವೇ ಈ ಪ್ರಯತ್ನ. ಆರೋಗ್ಯಕಾರಿಯಾದ ಈ ರೀತಿಯ ಚಿಂತನೆಯಿಂದ ನಮ್ಮ ಕಲೆ ಮತ್ತು ಸಂಸ್ಕೃತಿಗಳ ಸಂವರ್ಧನೆಯು ಸಾಧ್ಯವಾಗುತ್ತದೆ. ಆ ದಿಶೆಯಲ್ಲಿ ಇದು ನಮ್ಮ ಪುಟ್ಟ ಹೆಜ್ಜೆ.

ನಮ್ಮ ಈ ಪ್ರಯತ್ನದಲ್ಲಿ ನೆರವಾಗಿರುವವರು ಶ್ರೀ ಸಿ. ಕೆ. ನಾಗರಾಜರಾಯರು, ಡಾ|| ಕೊಂಡೂರು ವೀರರಾಘವಾಚಾರ್ಯುಲು ಅವರ ಪುತ್ರರಾದ ಶ್ರೀ ಆನಂದವರ್ಧನ ಮತ್ತು ಶ್ರೀಮತಿ ಸರಿತಾಜ್ಞಾನಾನಂದ ಅವರು ಇವರೆಲ್ಲರಿಗೂ ಅಕಾಡೆಮಿಯು ಕೃತಜ್ಞವಾಗಿದೆ. ಈ ಕೃತಿಗಳನ್ನು ಸಂಪಾದಿಸಿ, ಕರಡು ತಿದ್ದಿ ಪ್ರಸ್ತುತ ರೂಪಕ್ಕೆ ಬರಲು ಶ್ರಮಿಸಿದವರು. ಸಂಪಾದಕರಾದ ಶ್ರೀ ಜಿ. ಜ್ಞಾನಾನಂದ ಅವರು. ಈ ಪ್ರಕಟಣೆಗಳಿಗೆ ಒತ್ತಾಸೆಯಾಗಿ ನಿಂತವರು ಅಕಾಡೆಮಿಯ ಪ್ರಕಟಣಾ ಸಮಿತಿಯವರು, ಕಾರ್ಯಕಾರಿ ಸಮಿತಿಯವರು ಮತ್ತು ರಿಜಿಸ್ಟ್ರಾರ್ ಅವರು. ಸುಂದರವಾದ ಮುದ್ರಣ ಮಾಡಿಕೊಟ್ಟಿರುವವರು ಲಕ್ಷ್ಮಿ ಮುದ್ರಣಾಲಯದವರು. ಇವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

**ಶಿಲ್ಪಿ ಕೆ. ಶಾಮರಾಯ ಆಚಾರ್ಯ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಅನುವಾದಕರ ಮಾತು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ರಿಜಿಸ್ಟ್ರಾರ್ ಅವರು ಜಕಣಾಚಾರ್ಯರ ಬಗ್ಗೆ ಶ್ರೀ ಸಿ.ಕೆ. ನಾಗರಾಜರಾವ್ ಅವರ 'ಪಟ್ಟಮಹಾದೇವಿ ಶಾನ್ತಲದೇವಿ' ಬೃಹತ್ ಕಾದಂಬರಿಯಿಂದ ಕಥಾ ಭಾಗವನ್ನು ಸಂಗ್ರಹಿಸಬೇಕೆಂದು, ಡಾ|| ಕೊಂಡೂರು ವೀರರಾಘವಾಚಾರ್ಯುಲು ಅವರ ತೆಲುಗು ಕಾದಂಬರಿ 'ಕಲಾರಾಧನೆ' ಕನ್ನಡಕ್ಕೆ ಅನುವಾದ ಮಾಡಿಕೊಡಬೇಕೆಂದು ಕೋರಿದಾಗ ನನಗೆ ಸಂತೋಷವಾಯಿತು. ಈ ಎರಡೂ ಕಾದಂಬರಿಗಳನ್ನು ನಾನು ಬಹು ಹಿಂದೆಯೇ ಓದಿದ್ದೆ ; ಮೆಚ್ಚಿಕೊಂಡಿದ್ದೆ.

೧೯೭೯ರಲ್ಲಿ ಪ್ರೊ || ಎಲ್.ಎಸ್. ಶೇಷಗಿರಿರಾಯರು ರಾಷ್ಟ್ರೋತ್ಥಾನ ಪರಿಷತ್ತಿನವರ 'ಭಾರತ - ಭಾರತಿ' ಮಕ್ಕಳ ಪುಸ್ತಕ ಮಾಲೆಯ ಸಂಪಾದಕರಾಗಿದ್ದಾಗ ನನ್ನನ್ನು 'ಜಕಣಾಚಾರ್ಯ'ರ ಬಗ್ಗೆ ಒಂದು ಹೊತ್ತಿಗೆಯನ್ನು ಬರೆದು ಕೊಡಬೇಕೆಂದು ಕೋರಿದ್ದರು. ಆ ಸಂದರ್ಭದಲ್ಲಿ ಇತರ ಆಕರ ಗ್ರಂಥಗಳೊಂದಿಗೆ ನಾನು ಓದಿದ ಹಲವು ಕೃತಿಗಳಲ್ಲಿ ಪೂರ್ವೋಕ್ತ ಎರಡೂ ಕೃತಿಗಳೂ ಇದ್ದವು. ಸಂಪಾದಕರು ಬಯಸಿದಂತೆ ಈ ಬಗ್ಗೆ ಒಂದು ಲೇಖನವನ್ನು ಬರೆದು ಕೊಟ್ಟೆ.

ನಂತರದ ಎರಡು ತಿಂಗಳುಗಳಲ್ಲಿ ರಾಷ್ಟ್ರೋತ್ಥಾನ ಪರಿಷತ್ತಿನ ಜನರಲ್ ಮೇನೇಜರ್ ಆಗಿದ್ದ ಶ್ರೀ ಮೈ.ಚ. ಜಯದೇವ ಅವರೇ ನನ್ನ ಮನೆಗೆ ಖುದ್ದಾಗಿ ಬಂದು ಬಹು ವಿನಯದಿಂದ 'ಜಕ್ಕಣಾಚಾರ್ಯ' ಕೃತಿಯನ್ನು ಪ್ರಕಟಿಸಲು ಸಾಧ್ಯವಾಗುತ್ತಿಲ್ಲ ಎಂದು ತಿಳಿಸಿದರು. ಇದಕ್ಕೆ ಕಾರಣ 'ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ವಿಶ್ವಕೋಶದಲ್ಲಿ ಸ್ಪಷ್ಟವಾಗಿ ಜಕಣಾಚಾರ್ಯ ಇರಲಿಲ್ಲ ಎಂದು ಬರೆದಿದ್ದಾರೆ. ಆದ್ದರಿಂದ ಈ ಕೃತಿಯ ಪ್ರಕಟಣೆ ಸಾಧ್ಯವಿಲ್ಲ.' ನಾವು ಈ ಕೃತಿಯ ಪ್ರಕಟಣೆಯನ್ನು ಮಾಡಬೇಕೆಂದುಕೊಂಡಿದ್ದಾಗ ಈ ಅಂಶ ನಮಗೆ ಗೊತ್ತಿರಲಿಲ್ಲ, ಎಂದು ಬಹು ವ್ಯಾಕುಲದಿಂದ ಹೇಳಿದರು. ಪುಸ್ತಕದ ರಾಯಧನವನ್ನು ಕೊಡಲು ತಾವು ಸಿದ್ಧವಾಗಿದ್ದೇವೆ ಎಂಬುದನ್ನು ತಿಳಿಸಿದರು. ಆದರೆ ನಾನು ಮಾತ್ರ ಇತಿಹಾಸವನ್ನು ಬದಲಿಸಬಹುದಾದರೆ ಎಷ್ಟು ಸುಲಭದ ಕೆಲಸ ಎಂದು ಯೋಚಿಸುತ್ತಿದ್ದೆ. ಒಂದು ವಿಶ್ವವಿದ್ಯಾನಿಲಯದಲ್ಲಿ ಸೇರಿ ಅಲ್ಲಿ ಬೇಕಾದ ರೀತಿಯ ಬರಹವನ್ನು ಪ್ರಕಟಪಡಿಸಿದರೆ ಸಾಕಲ್ಲವೆ ಎನಿಸಿತು. ನನ್ನ ಆಗಿನ ಬರಹವು ಪ್ರಕಟವಾಗಲಿಲ್ಲ ಎಂಬುದಕ್ಕಿಂತ ಪ್ರಕಟಣೆಯನ್ನು ಕೈಬಿಟ್ಟ ಕಾರಣವು ಬಹು ದೊಡ್ಡದು ಎನಿಸಿತು.

೧೯೫೦ಕ್ಕೆ ಮೊದಲು ಜಕಣಾಚಾರ್ಯನ ಕತೆ ಎಲ್ಲಾ ಪಠ್ಯ ಪುಸ್ತಕಗಳಲ್ಲೂ ಇದ್ದು ಆ ಬಗ್ಗೆ ಎಲ್ಲರೂ ಮೌನ ಅಂಗೀಕಾರವನ್ನು ಸೂಚಿಸಿದ್ದರು. ಜನರು ಕರ್ನಾಟಕದ ಯಾವ ಭಾಗದಲ್ಲಿಯ ದೇವಾಲಯವನ್ನಾದರೂ ಸರಿಯೇ ಅದು ಹೊಯ್ಸಳ ಶೈಲಿಯಲ್ಲಿದ್ದರೆ ಜಕಣಾಚಾರ್ಯನ ನಿರ್ಮಾಣ ಎಂದು ಹೇಳುತ್ತಿದ್ದರು. ಡಾ|| ಎಂ. ಶೇಷಾದ್ರಿಯವರು ಪ್ರಾಚ್ಯಸಂಶೋಧನಾ ಇಲಾಖೆಯ ಡೈರೆಕ್ಟರ್ ಆಗಿದ್ದಾಗ ಮೊದಲ ಬಾರಿಗೆ ಜಕಣಾಚಾರ್ಯನ ಅಸ್ತಿತ್ವವನ್ನು ಪ್ರಶ್ನಿಸಿದರು. ಇದಕ್ಕೆ ಅವರ ಮನಸ್ಸಿನಲ್ಲಿದ್ದ ಕಾರಣ ಇಷ್ಟೇ- ಹೊಯ್ಸಳರ ಕಾಲದ ಶಿಲ್ಪಿಗಳು ತಮ್ಮ ಕೃತಿಗಳ ಕೆಳಗೆ ತಮ್ಮ ಹೆಸರುಗಳನ್ನು ಕೆತ್ತಿರುವುದು ಮತ್ತು ಆ ಹೆಸರುಗಳಲ್ಲಿ ಜಕಣಾಚಾರ್ಯನ ಹೆಸರು ಕಂಡು ಬರದೆ ಇರುವುದು. ಆದ್ದರಿಂದ ಜಕಣಾಚಾರ್ಯ ಇದ್ದ ಎಂಬುದಕ್ಕೆ ದಾಖಲೆ ದೊರೆಯದು. ಇಲ್ಲಿ ನಾವು ಗಮನಿಸಬೇಕಾದದ್ದು

ಆ ಕಾಲಕ್ಕೆ ಮೊದಲು, ಇಂದಿಗೂ ಮತ್ತು ಅನಂತರವೂ, ಶಿಲ್ಪಿಗಳು ತಮ್ಮ ಹೆಸರನ್ನು ತಾವು ಕಂಡರಿಸಿದ ಕೃತಿಗಳ ಮೇಲೆ ಕೆತ್ತಿಲ್ಲ. ಬೇಲೂರು-ಹಳೇಬೀಡು ಇತ್ಯಾದಿ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿ ದೊರೆಯುವುದು ಒಂದು ವಿಶೇಷ ಅಷ್ಟೆ. ಇದನ್ನು ವಿನಾಯತಿ ಎಂದು ಕರೆದರೂ ತಪ್ಪಲ್ಲ. ಡಾ॥ ಎಂ. ಶೇಷಾದ್ರಿಯವರು ಜಕಣಾಚಾರ್ಯನ ಇರುವು ಅನುಮಾನ ಎಂದು ಹೇಳಿದರೇ ಹೊರತು ಆತ ಇರಲೇ ಇಲ್ಲ ಎಂದಲ್ಲ. ಆದರೆ ನಂತರದವರು ಇದನ್ನೇ ಪ್ರಧಾನ ಅಂಶವಾಗಿ ಪರಿಗಣಿಸಿ ಈ ಅಂಶವನ್ನು ಇತಿಹಾಸದಿಂದ ತೆಗೆಯಬೇಕೆಂದು ಬಹುವಾಗಿ ಶ್ರಮಿಸಿದರು. ನಂತರ ಕಪ್ಪೆ ಚೆನ್ನಿಗರಾಯನ ಕಥೆ ದಂತಕಥೆ ನಂಬಲು ಸಾಧ್ಯವಿಲ್ಲ ಎಂದರು. ಹೀಗೆ ವ್ಯವಸ್ಥಿತವಾಗಿ ಜಕಣಾಚಾರ್ಯನನ್ನು ಇಲ್ಲದಂತೆ ಮಾಡಿದರು. ಕೊನೆಗೆ ಈಗ ಬೇಲೂರು-ಹಳೇಬೀಡುಗಳಲ್ಲಿ ಯಾತ್ರಿಕರಿಗೆ ಗೈಡ್‌ಗಳಾಗಿ ವ್ಯವಹರಿಸುವವರು ಏನನ್ನು ಹೇಳುವುದನ್ನು ಮರೆತರೂ. 'ಇವೆಲ್ಲ ದೇವಾಲಯಗಳನ್ನು ಜಕಣಾಚಾರ್ಯ ಕಟ್ಟಿಲ್ಲ' ಎಂಬುದನ್ನು ಖಚಿತವಾಗಿ ಮರೆಯದೆ ಹೇಳುತ್ತಾರೆ. ಆದರೆ ಬೇರೆಯ ಸ್ಥಳದಲ್ಲಿ ಈ ದೇವಾಲಯವನ್ನು ಕಟ್ಟಿದ ಶಿಲ್ಪಿ ಇಂತಹವನು ಎಂದು ಇದುವರೆವಿಗೂ ಯಾರೂ ಎಲ್ಲೂ ಹೇಳಿದ್ದನ್ನು ನಾನು ಕೇಳಿಲ್ಲ. ಇದರಿಂದ ವ್ಯವಸ್ಥಿತವಾಗಿ ಕೆಲವರು ಜಕಣಾಚಾರ್ಯನ ವಿರೋಧಿಗಳಾಗಿದ್ದಾರೆ ಎಂಬ ಅನುಮಾನ ಯಾರಲ್ಲಿಯಾದರೂ ಮೂಡಿದರೆ ತಪ್ಪಿಲ್ಲ.

ಮೊದಲಿಗೆ ಜಕ್ಕಣಾಚಾರ್ಯ ತನ್ನ ಹೆಸರನ್ನು ಏಕೆ ಕೊರೆದಿಲ್ಲ ಎಂಬುದನ್ನು ವಿಶ್ಲೇಷಿಸೋಣ. ಪೂಜಾಮೂರ್ತಿಗಳನ್ನು ಕಂಡರಿಸುವ ಪರಂಪರಾನುಗತ ಶಿಲ್ಪಿಯು ತನ್ನ ಹೆಸರನ್ನು ಕಂಡರಿಸುವುದಿಲ್ಲ. ಕಾರಣ ಅದು ಎಲ್ಲರಿಂದಲೂ ಪೂಜೆ ಕೈಗೊಳ್ಳುವ ಪವಿತ್ರ ಮೂರ್ತಿ ಎಂಬ ಭಾವನೆಯಿಂದ. ಈಗ ಹೊಯ್ಸಳ ಕಾಲದ ದೇವಾಲಯಗಳನ್ನು ಶಿಲ್ಪಿಗಳ ಹೆಸರುಗಳು ದೊರೆತಿರುವುದು ಅಲಂಕಾರ ವಿಗ್ರಹಗಳ ಅಡಿಯಲ್ಲಿ ಮಾತ್ರವೇ ಪೂಜಾ ವಿಗ್ರಹಗಳಲ್ಲಲ್ಲ. ದೇವಾಲಯದ ನಿರ್ಮಾಣವನ್ನು ನಡೆಸುವ ಶಾಸ್ತ್ರೋಕ್ತ ಪದ್ಧತಿಯನ್ನು ನಾವು ಕಲ್ಪಿಸಿಕೊಳ್ಳಬೇಕು. ದೇವಾಲಯವನ್ನು ನಿರ್ಮಾಣ ಮಾಡಬೇಕೆಂದು ಕೊಂಡಿರುವ ರಾಜ ಅಥವ ದಾನಿಯು ಮೊದಲಿಗೆ ಸೂಕ್ತವಾದ ಸ್ಥಪತಿಯನ್ನು ಆಯ್ಕೆ ಮಾಡಿಕೊಳ್ಳಬೇಕು. ರಾಜ, ದಾನಿ ಮತ್ತು ಸ್ಥಪತಿ ಇವರ ಮುವ್ವರ ಜನ್ಮ ನಕ್ಷತ್ರಗಳಿಂದ ಆಯಾದಿಗಳನ್ನು ಲೆಕ್ಕಿಸಿ, ಶುಭವಾದ ಅಳತೆಗಳನ್ನು ಲೆಕ್ಕಿಸಿ, ನಿರ್ಣಯಿಸಿ ದೇವಾಲಯ ನಿರ್ಮಾಣ ಮಾಡಲಿರುವ ಭೂಮಿಯನ್ನು ಶುದ್ಧಿಗೊಳಿಸಿ ಅಲ್ಲಿ ಹೋಮಾದಿಗಳನ್ನು ನಡೆಸಿ ನಿರ್ಮಾಣಕ್ಕೆ ಶಂಕು ಸ್ಥಾಪನೆಯನ್ನು ನಡೆಸಬೇಕು. ನಂತರ ಶಿಲಾಸಂಗ್ರಹಣ ನಡೆಸಬೇಕು. ಸ್ಥಪತಿಯಾದವನು ಸಂಪೂರ್ಣ ದೇವಾಲಯದ ಜವಾಬ್ದಾರಿ ಹೊತ್ತಿರುತ್ತಾನೆ. ದೇವಾಲಯದ ನಕ್ಷೆ, ವಿನ್ಯಾಸ ಎಲ್ಲಾ ಆತನದೇ. ಆತನ ನೆರವಿಗೆ ನೂರಾರು ಮಂದಿ ಶಿಲ್ಪಿಗಳಿರುತ್ತಾರೆ. ಅವರಲ್ಲಿ ಮೂರ್ತಿಶಿಲ್ಪದ ವಿಶೇಷಜ್ಞರೂ, ಆಲಯ ನಿರ್ಮಾಣತಜ್ಞರೂ ಇರುತ್ತಾರೆ. ದೇವಾಲಯವು ಶಿಲ್ಪಶಾಸ್ತ್ರದ ಉಕ್ತಿಯನ್ನು ಅನುಸರಿಸಿ ನಿರ್ಮಾಣವಾಗಬೇಕಾದುದು ಬಹುಮುಖ್ಯವಾದುದರಿಂದ ಶಿಲ್ಪಿಯಾದವನೂ ಕೂಡ ಯಜಮಾನನಂತೆಯೇ ಕಂಕಣವನ್ನು ಧರಿಸಿ ಶಾಸ್ತ್ರೋಕ್ತವಾಗಿ ಆಲಯ ನಿರ್ಮಾಣದಲ್ಲಿ ತೊಡಗುತ್ತಾನೆ. ನಿರ್ಮಾಣವು ಸಾವಿರಾರು ಮಂದಿಯ ಶ್ರಮವೇ ಆಗಿದ್ದರೂ ಆ ಶ್ರಮ ಎಂತಹುದು, ಯಾರು ಯಾವ ರೀತಿಯ ಕೆಲಸ ಮಾಡಬೇಕು, ದೇವಾಲಯದಲ್ಲಿ ಎಲ್ಲಿ ಯಾವ ಅಲಂಕಾರ ಇರಬೇಕು ಇತ್ಯಾದಿಗಳ ನಿರ್ಣಯವನ್ನು ಮಾಡಿ ಎಲ್ಲವನ್ನೂ ಒಂದೇ ಕಟ್ಟಿಗೆ ಬರುವಂತೆ ಮಾಡಿ ದೇವಾಲಯವನ್ನು ಸಿದ್ಧಪಡಿಸಿಕೊಡುವವನು ಸ್ಥಪತಿ. ಅಲ್ಲಿ ದುಡಿಯುವವರ ಎಲ್ಲರ ಕೆಲಸವೂ

ಆತನ ನಿರ್ದೇಶನದಲ್ಲಿಯೇ ಆತನು ಬಯಸಿದ ರೀತಿಯಲ್ಲಿ ನಡೆಯುತ್ತದೆ. ಒಳತಿಗೆ ಹೇಗೆ ಆತನ ಕಾರಣನೋ ಅಲ್ಲಿಯ ಎಲ್ಲಾ ದೋಷಗಳಿಗೂ ಅವನೇ ಕಾರಣನಾಗಿರುತ್ತಾನೆ. ಇಂತಹ ಸ್ಥಪತಿಯು ಸಾಧಾರಣವಾಗಿ ದೇವಾಲಯದ ಮೂಲ ವಿಗ್ರಹವನ್ನು ಮಾತ್ರವೇ ಕೆತ್ತುತ್ತಾನೆ. ದೇವಾಲಯದ ಶಂಕು ಸ್ಥಾಪನೆಯಿಂದ ದೇವಾಲಯದ ವಿಗ್ರಹ ಪ್ರತಿಷ್ಠಾಪನೆ, ವಿಮಾನದಲ್ಲಿ ಅಮೃತಕಲಶ ಸ್ಥಾಪನೆಯ ತನಕ ದೇವಾಲಯದ ಕೆಲಸ ಮುಗಿಯಿತು ಎಂದು ಭಾವಿಸುವುದಿಲ್ಲ. ಇಂತಹ ಸ್ಥಪತಿ ತನ್ನ ಹೆಸರನ್ನು ಎಲ್ಲಿ ಕೆತ್ತಬೇಕು ? ಶಿಷ್ಯರಾದವರು ತಮ್ಮ ಕೃತಿಗಳನ್ನು ಗುರ್ತಿಸಲು ಹೆಸರನ್ನು ಕೆತ್ತಬಹುದು. ಈ ಹೆಸರಿನ ನೂರುಪಟ್ಟು ಖ್ಯಾತಿ ಇರುವ ಸ್ಥಪತಿಗೆ ಈ ರೀತಿಯ ಖ್ಯಾತಿಯು ಸಣ್ಣದು ಎನಿಸುವುದಿಲ್ಲವೇ ? ಈ ಹೆಸರಿನ ಪರದಾಟ ಕೇವಲ ಹೊಯ್ಸಳರ ಕಾಲಕ್ಕೆ ಮಾತ್ರವೇ ಸೀಮಿತವಾದುದು. ಇತರ ಶಿಲ್ಪಿಗಳ ಹೆಸರುಗಳು ನಮಗೆ ಗೊತ್ತಾಗುವುದು ಶಾಸನಗಳಿಂದ. ಅದರಲ್ಲೂ ಬಹುಪಾಲು ಶಾಸನಗಳನ್ನು ಕಂಡರಿಸುವ ವೃತ್ತಿಯುಳ್ಳವರು. ಯಾರಾದರೂ ಸರಿಯೇ ಶಾಸನಗಳಲ್ಲಿ ಹೇಳಲ್ಪಟ್ಟಿರುವಷ್ಟೇ ಶಿಲ್ಪಿಗಳು ಇದ್ದರು ಎಂದು ಖಚಿತವಾಗಿ ಹೇಳಬಲ್ಲರೇ ? ಶಾಸನಗಳಲ್ಲಿ ಉಕ್ತವಾಗದೆಯೇ ಇತಿಹಾಸದಲ್ಲಿ ಇರುವವರು ಇಲ್ಲವೇ ? ಇಂದಿಗೂ ಕೂಡ ಶಿಲ್ಪಿಗಳೂ ತಮ್ಮ ಹೆಸರುಗಳನ್ನು ಪೂಜಾಮೂರ್ತಿಗಳ ಮೇಲೆ ಕೆತ್ತುವುದಿಲ್ಲ. ಆದ್ದರಿಂದ ಅವರ್‍ಯಾರೂ ಇಲ್ಲವೆಂದೇ ಇತಿಹಾಸಕಾರರು ಹೇಳುತ್ತಾರೆಯೇ ? ಸರ್ಕಾರವು ಪ್ರತಿ ವರ್ಷವು ಕೆಲವು ಮಂದಿ ಶಿಲ್ಪಿಗಳನ್ನು ಬೇರೆಬೇರೆಯ ವೇದಿಕೆಗಳಿಂದ ಗೌರವಿಸುತ್ತಲೇ ಇದೆ. ಅವರಲ್ಲಿ ಎಷ್ಟು ಮಂದಿಯ ಹೆಸರುಗಳು ಅವರವೇ ಕೃತಿಗಳ ಮೇಲೆ ಕೆತ್ತಲಾಗಿದೆ ? ಒಂದೆರಡು ಮಂದಿ ಎಂದೂ ಕೂಡ ಉತ್ತರ ಸಿಗುವುದಿಲ್ಲ. ಆ ರೀತಿ ಹೆಸರುಗಳನ್ನು ಕೆತ್ತುವುದು ಶಿಲ್ಪಿಗಳಿಗೆ ಅಭ್ಯಾಸವೇ ಆಗಿಲ್ಲ. ಆ ರೀತಿಯ ಚರಿತ್ರೆಯನ್ನು ಚಿರಂತನತೆಯನ್ನು ಶಿಲ್ಪಿಯು ಇಂದಿಗೂ ಬಯಸಿಲ್ಲ; ಅದನ್ನು ಕಲ್ಪಿಸಿಕೊಂಡೂ ಇಲ್ಲ.

ಇನ್ನು 'ಕಪ್ಪೆ ಚೆನ್ನಿಗರಾಯನ' ಉದಂತ. ಶಿಲೆಗಳಲ್ಲಿ ಕಪ್ಪೆ ಇರುವುದು ಅಸಾಧ್ಯ ಎಂದು ಹೇಳುವವರು ಇದ್ದಾರೆ. ಇದೇ ಬಲವಾದ ವಿರೋಧವಾಗಿ ಕಾಣಿಸುತ್ತದೆ. ಭೂಗರ್ಭಶಾಸ್ತ್ರದಲ್ಲಿ ಕಪ್ಪೆಗಳು ಕಲ್ಲಿನಲ್ಲಿರುತ್ತವೆ ಎಂದು ಹೇಳಿರುವುದು ನನಗೆ ಗೊತ್ತಿಲ್ಲ. ಆದರೆ ಶಿಲ್ಪಶಾಸ್ತ್ರಗಳಲ್ಲಿ ನಿಖರವಾಗಿ ಶಿಲಾಪರೀಕ್ಷಣದ ಸಂದರ್ಭದಲ್ಲಿ ಗರ್ಭಿಣಿಶಿಲೆಯ ಲಕ್ಷಣಗಳನ್ನು ಹೇಳಿದ್ದಾರೆ. ಅದರ ಉಲ್ಲೇಖದ ವಿವರಗಳು 'ಕಲಾರಾಧನೆ'ಯಲ್ಲಿ ತಾವು ಓದಬಹುದು. ಇದಲ್ಲದೆ ಈ ರೀತಿಯ ಘಟನೆಗಳು 'ವಿಚಿತ್ರ ಸತ್ಯ' ಗಳೆಂದು ಹಲವು ಬಾರಿ ವಾರ್ತಾಪತ್ರಿಕೆಗಳಲ್ಲೂ ವರದಿಯಾಗಿರುವುದನ್ನು ನಾನು ಓದಿದ್ದೇನೆ. ಕನಕದಾಸರು ತಮ್ಮ ಹಾಡುಗಳಲ್ಲಿ 'ಕಲ್ಲಲ್ಲಿ ಹುಟ್ಟಿಕೂಗುವ ಕಪ್ಪೆಗಳಿಗೆ ಅಲ್ಲಲ್ಲಿ ಆಹಾರವನ್ನು ಇತ್ತವನದಾರೋ ?' ಎಂದು ಹಾಡಿದ್ದಾರೆ. ಈ ಮಾತು ಹೇಳುತ್ತಲೇ ಈ ಭ್ರಮೆ ಕನಕದಾಸರ ಕಾಲಕ್ಕೂ ಇತ್ತು ಎನ್ನುವವರೂ ಇದ್ದಾರೆ. ಈಗ ಬೇಲೂರಿನಲ್ಲಿ ಕಪ್ಪೆ ಚೆನ್ನಿಗರಾಯ ಮೂರ್ತಿಯೇ ಇದೆಯಲ್ಲ. ಅದನ್ನು ನೋಡಿದಾಗಲಾದರೂ ಈ ಉದಂತಕ್ಕೆ ಒಂದು ಆಧಾರ ಇದೆ ಎನಿಸುವುದಿಲ್ಲವೇ ? ಜಕ್ಕಣಾಚಾರ್ಯ ತನ್ನ ಮಾತಿನಂತೆ ಕೈಕತ್ತರಿಸಿಕೊಂಡ. ಆದರೆ 'ಕೈದಾಳ' ದಲ್ಲಿಯ ದೇವಾಲಯದ ನಿರ್ಮಾಣದ ಸಂದರ್ಭದಲ್ಲಿ ಆತನ ಕೈ-ದಳವು (ಹಸ್ತವು) ಮತ್ತೆ ಚಿಗುರಿತು ಎಂಬುದು ಜಕಣನ ಕಥೆಯಲ್ಲಿ ಒಂದು ಅಂಶ. ಇದು ಅಸಾಧ್ಯ ಎಂದು ಎಲ್ಲರೂ ಅಂಗೀಕರಿಸಬೇಕು. ಆದರೆ ಈ ಕಥೆಯ ಹಿಂದೆ ಇರುವ ಜನರ ಆಶೋತ್ತರವನ್ನು ನಾವು ಅರ್ಥಮಾಡಿಕೊಳ್ಳಬೇಕು. ಶಾಸ್ತ್ರದ ದೃಷ್ಟಿಯಿಂದ ಶಿಲ್ಪಿಯಾದವನು ಸರ್ವಾಂಗ ಸುಂದರನಾಗಿರಬೇಕು. ಅವನು ಅಂಗವಿಕಲವನಾಗಿರ

ಕೂಡದು. ಕೈ ಕಳೆದುಕೊಂಡ ಜಕಣಾಚಾರ್ಯ ಜೀವಂತನಾಗಿದ್ದರೂ ಶಿಲ್ಪವನ್ನು ನಡೆಸುವುದು ಸಾಧ್ಯವಿಲ್ಲ. ಅದು ಶಾಸ್ತ್ರ ನಿಷಿದ್ಧ ಕರ್ಮ. ಆದರೆ ಜನರ ಪಾಲಿಗೆ ಆ ಅಮರಶಿಲ್ಪಿ ನಿರಂತರವಾಗಿ ಸುಂದರ ಸೃಷ್ಟಿಯನ್ನು ನಡೆಸುತ್ತಲೇ ಇರಬೇಕು. ಆದ್ದರಿಂದ ಆತನು ಅಂಗವಿಕಲನಲ್ಲ ಎಂದು ಹೇಳಬೇಕು. ಈ ಕಾರಣಕ್ಕಾಗಿ ಆತನ ಹಸ್ತವು ಮತ್ತೆ ಮೂಡಿತು ಎಂದು ಹೇಳಿ ಜನ ಆತನನ್ನು ಎಲ್ಲಾ ದೇವಾಲಯಗಳ ಸೃಷ್ಟಿಕರ್ತನೆಂದು ಹೇಳತೊಡಗಿದರು. ಶಿಲ್ಪಿಯ ಬಗ್ಗೆ ಜನರು ಇರಿಸಿಕೊಂಡಿದ್ದ ಅನುರಾಗ ಪ್ರೇಮಗಳನ್ನು ನಾವು ಹೀಗೆ ಗ್ರಹಿಸಬೇಕು. ಈ ಉದಂತದ ವೈಜ್ಞಾನಿಕ ಸಾಧ್ಯಾಸಾಧ್ಯತೆಗಳನ್ನು ಅಲ್ಲ.

ಎಲ್ಲಕ್ಕಿಂತಲೂ ಮಿಗಿಲಾಗಿ ಜಕಣ ಎಂಬ ಪದವು ಶುದ್ಧವಾಗಿ ದ್ರಾವಿಡಪದ. ಯಕ್ಷ ಎಂಬುದರಿಂದ ರೂಪುಗೊಂಡಿರುವ ಪದ. ಇದು ಕನ್ನಡ ನೆಲಕ್ಕೆ ಸೇರಿದ ಹೆಸರು. ಈ ಬಗ್ಗೆ ಯಾರ ತಕರಾರೂ ಇರಕೂಡದು. ಈ ರೀತಿಯ ಹೆಸರಿನ ಜನರು ಇದ್ದ ಕಾಲ ಹೊಯ್ಸಳರ ಕಾಲ, ಮತ್ತು ಅದಕ್ಕೂ ಮೊದಲಿನ ಕಾಲ. ಶ್ರೀ ಕೆ. ಎಸ್. ಧರಣೇಂದ್ರಯ್ಯ ಅವರು ತಮ್ಮ ಒಂದು ಲೇಖನದಲ್ಲಿ ಜಕ್ಕಣ ಎಂಬ ಹೆಸರಿನ ಶಿಲ್ಪಿ ಇರುವುದಕ್ಕೆ ಶಾಸನ ಆಧಾರವನ್ನು ಉಲ್ಲೇಖಿಸುತ್ತಾರೆ. ಆದರೆ ಈ ಶಿಲ್ಪಿ ನಾವು ಕೇಳುತ್ತಿರುವ ಜಕಣಾಚಾರ್ಯರಷ್ಟು ಪ್ರಸಿದ್ಧನಲ್ಲ ಎಂದು ಹೇಳಿ ಜಕಣಚಾರ್ಯ ಇಲ್ಲ ಎನ್ನುವವರು ತಳ್ಳಿ ಹಾಕುತ್ತಾರೆ.

ಇಷ್ಟೆಲ್ಲಾ ವಿವರ ಹೇಳಿದ ಕಾರಣವೇನೆಂದರೆ ಜಕಣಾಚಾರ್ಯರ ಬಗ್ಗೆ ನಮ್ಮ ಸಂಶೋಧಕರು ಬಹು ಕಟ್ಟುನಿಟ್ಟಾದ ಪಾಶ್ಚಾತ್ಯಮಾನಗಳನ್ನು ಅನ್ವಯಿಸಿ ಆತನನ್ನು ಇಲ್ಲ ಎಂದು ನಿಖರವಾಗಿ ಹೇಳ ಹೊರಟಿದ್ದಾರೆ ಎಂಬುದನ್ನು ಸ್ಪಷ್ಟಪಡಿಸಲು ಮಾತ್ರವೇ. ಸತ್ಯವನ್ನು ಕಾಣಬೇಕೆನ್ನುವವರು ಪಾಶ್ಚಾತ್ಯರ ಕಠಿಣಮಾನಗಳೊಂದಿಗೆ ತಾವು ಅನ್ವೇಷಿಸುತ್ತಿರುವ ನೆಲದ ಗುಣವನ್ನು, ಮೌಲ್ಯಗಳನ್ನು ಅರಿತು ತೀರ್ಮಾನ ಕೈಗೊಳ್ಳಬೇಕು. ಭಾರತದ ಅನೇಕ ಮಹನೀಯರ ಇತಿಹಾಸದ ಬಗ್ಗೆ ನಾವು ಖಚಿತವಾಗಿ ಏನನ್ನೂ ಹೇಳಲಾರದ ಸ್ಥಿತಿಯಲ್ಲಿ ಇಂದಿಗೂ ಇದ್ದೇವೆ.

ಆಚಾರ್ಯ ಶಂಕರರ ಬಗ್ಗೆ ಇತಿಹಾಸ ಏನು ಹೇಳಬಲ್ಲದು ? ಆಚಾರ್ಯರು ಮತ ಪ್ರವರ್ತಕರು. ಭಾರತದಲ್ಲೆಲ್ಲಾ ತಮ್ಮ ಪ್ರಭಾವವನ್ನು ಬೀರಿದವರು. ತಮ್ಮ ಪರಂಪರೆಯ ಪೀಠಗಳನ್ನು ಸ್ಥಾಪಿಸಿ ಇತಿಹಾಸವನ್ನು ಭದ್ರಗೊಳಿಸಿದರು. ಆಚಾರ್ಯರ ನಂತರ ಪೀಠಾಧಿಪತಿಗಳಾದವರ ಪಟ್ಟಿಯು ಇಂದಿಗೂ ಖಚಿತವಾಗಿ ದೊರೆಯುತ್ತದೆ. ಹಾಗಿದ್ದರೂ ಅವರ ಕಾಲದ ಬಗ್ಗೆ ಇದುವರೆವಿಗೂ ಖಚಿತವಾದ ತೀರ್ಮಾನವಾಗಿಲ್ಲ. ಶಂಕರ ಎಂಬ ಆಚಾರ್ಯರು ಇಬ್ಬರು ಇರಬಹುದು ಎಂದು ಅನುಮಾನಿಸುತ್ತಾರೆ- ಆದಿಶಂಕರಾಚಾರ್ಯ ಮತ್ತು ಶಂಕರಾಚಾರ್ಯರು. ಇವರು ಸ್ಥಾಪಿಸಿರುವ ಆಮ್ನಾಯ ಪೀಠಗಳಲ್ಲಿಯೇ ಶಂಕರಾಚಾರ್ಯರ ಕಾಲದ ಬಗ್ಗೆ ಏಕವಾಕ್ಯತೆ ಇಲ್ಲ ಎನ್ನುತ್ತಾರೆ. ಕೊನೆಗೆ ಭಾಷ್ಯಾಚಾರ್ಯ ಶಂಕರರು ಬೇರೆ, ಮತಸ್ಥಾಪಕ ಶಂಕರಾಚಾರ್ಯರು ಬೇರೆ ಎಂದು ಅನುಮಾನಿಸುತ್ತಾರೆ. ಇಷ್ಟೆಲ್ಲ ಅನುಮಾನಗಳು 'ಶಂಕರ ವಿಜಯ'ಗಳೆಂಬ ಗ್ರಂಥಗಳು ಇದ್ದೂ ಉಳಿದುಕೊಂಡು ಬಂದಿವೆ. ರೂಢಿಯಲ್ಲಿರುವ ಶಂಕರಾಚಾರ್ಯರ ಚರಿತ್ರೆಯನ್ನು 'ಕಲ್ಪಿತ' ಎಂದೂ ಹೇಳುತ್ತಾರೆ. ಆದರೂ ಶಂಕರಾಚಾರ್ಯರ ಬಗ್ಗೆ, ಅವರ ಚಿಂತನೆಗಳ ಬಗ್ಗೆ ಇತಿಹಾಸಜ್ಞರು ವಿರೋಧ ಹೇಳಿ ಪ್ರಚಾರ ಮಾಡಿಲ್ಲ. ಬದಲಿಗೆ ಅವರ ಕಥೆಯನ್ನು ಹೇಳಿಕೊಂಡೇ ಬರುತ್ತಿದ್ದಾರೆ.

ಇದಕ್ಕಿಂತಲೂ ಸ್ವಾರಸ್ಯಕರವಾದ ಇನ್ನೊಂದು ವಿಷಯವಿದೆ. ಮೀರಾಬಾಯಿ ಭಾರತೀಯ ಭಕ್ತಪಂಥದಲ್ಲಿ ವಿಶೇಷವಾದ ಸ್ಥಾನವನ್ನು ಗಳಿಸಿರುವ ಭಕ್ತೆ. ಆಕೆಯ ಭಜನೆಗಳಿಗೆ 'ಮೀರಾಭಜನ್'

ಎಂದು ಪ್ರತ್ಯೇಕ ಹಾಡುಗಾರಿಕೆಯ ಸಂಪ್ರದಾಯವೇ ರೂಪುಗೊಂಡಿದೆ. ಉತ್ತರ - ದಕ್ಷಿಣ ಎಂಬ ಅಂತರವಿಲ್ಲದೆ ಜನಪ್ರಿಯವಾಗಿರುವ ಸಂಗೀತವಿದು. ಬಹುಶಃ ಮೀರಾಬಾಯಿ ಎನ್ನುತ್ತಲೇ ಆಕೆಯ ಇರುವನ್ನು ಅನುಮಾನಿಸುವ ಅವಕಾಶವೇ ಬರುವುದಿಲ್ಲ ಎನಿಸುತ್ತದೆ. ಏಕೆಂದರೆ ಆಕೆಯೇ ಹಾಡುತ್ತಿದ್ದಳು ಎನ್ನಲಾಗುವ ಅನೇಕ ಗೀತೆಗಳು ಇಂದೂ ಜನರ ಬಾಯಲ್ಲಿ ಉಳಿದು ಬಂದಿವೆ.

ಮೈಖಲ್ ಟಾಡ್ ಅವರು ಮೊದಲಬಾರಿಗೆ ರಾಜಸ್ಥಾನದ ಇತಿಹಾಸವನ್ನು ಸಂಗ್ರಹಿಸಿ ಬಹು ಹಿಂದೆಯೇ ಪ್ರಕಟಿಸಿದ್ದಾರೆ. ರಾಜಾಸ್ಥಾನದ ಅರಸು ಮನೆತನಗಳೂ ತಮ್ಮ ವಂಶದ ಬಗ್ಗೆ ಬಹುವಾದ ನಂಬಿಕೆ ಇರಿಸಿಕೊಂಡು ಅದರ ಪರಿಶುದ್ಧತೆಯನ್ನು ಕಾಪಾಡಿಕೊಂಡು ಬರಲು ಇಚ್ಛಿಸಿದ್ದವರು. ಅವರ ಮನೆತನದ ಎಲ್ಲಾ ವಿವರಗಳೂ ದೊರೆಯುತ್ತವೆ. ಕೊನೆಗೆ ರಾಜರ ಜನಾನದಲ್ಲಿದ್ದ ಔರಸ ಸ್ತ್ರೀಯರ ಪಟ್ಟಿಗಳು, ಅವರ ಮಕ್ಕಳ ವಿವರಗಳೂ ದೊರೆಯುತ್ತವೆ. ಪಟ್ಟಿಗಳಲ್ಲಿ ಇಂದು 'ಮೀರಾಬಾಯಿ'ಯ ಹೆಸರು ದೊರೆಯುವುದಿಲ್ಲ. ಮೀಥಾಬಾಯಿ ಹೆಸರೇ ರಾಜಾಸ್ಥಾನದ ರಾಜ ಪರಿವಾರಗಳಲ್ಲಿ ಕಂಡು ಬರುವುದಿಲ್ಲ. ರಾಜಪರಿವಾರಗಳಲ್ಲಿ ಈ ರೀತಿಯ ದಾಖಲಾತಿಯು ಮೀರಾಬಾಯಿ ಇದ್ದಳೆಂದು ಅನುಮಾನಿಸುವ ಕಾಲಕ್ಕೂ ಮೊಧಲಿನಿಂದಲೇ ಪ್ರಾರಂಭವಾಗಿದ್ದು ನಂತರದ ಬಹುಕಾಲದ ತನಕ ಮುಂದುವರಿದಿದೆ. ಈ ದಾಖಲಾತಿಗಳು ಅರಮನೆಗಳಲ್ಲಿ ಭದ್ರವಾಗಿ ಇರಿಸಿಕೊಂಡಿದ್ದವು. ಆದ್ದರಿಂದ ಇತಿಹಾಸದ ಪ್ರಕಾರ ಮೀರಾಬಾಯಿಯು ರಜಪೂತ ವಂಶದಲ್ಲಿ ಹುಟ್ಟಿದ್ದಾಗಲಿ, ರಾಜಕುಮಾರಿಯಾಗಿ ಇದ್ದುದಾಗಲಿ ಆಕೆಯ ಮದುವೆಯಾದ ವಿವರಗಳಾಗಲಿ ದೊರೆಯುವುದಿಲ್ಲ. ಆಕೆಯ ತಂದೆ ತಾಯಿಗಳೆಂದು ಉಲ್ಲೇಖಿತರಾಗಿರುವವರ ಹೆಸರುಗಳು ದೊರೆಯುತ್ತವೆ. ಕೊನೆಗೆ ಮೀರಾಬಾಯಿಯ ಗಂಡ ಎಂದು ಹೇಳಲಾಗುವ ವ್ಯಕ್ತಿಯ ಹೆಸರೂ ಇದೆ. ಮೀರಾ ಎಂಬ ಹೆಸರು ಮಾತ್ರ ಇಲ್ಲ.

ಇನ್ನೂ ವಿಚಿತ್ರವಾದ ಸಂಗತಿ ಎಂದರೆ 'ಮೀರಾ' ಎಂಬುದು ಸಂಸ್ಕೃತ ಪದವಲ್ಲ. ಈ ರೀತಿಯ ಹೆಸರು ರಜಪೂತರಲ್ಲಿ ಬಳಕೆಯಲ್ಲಿ ಇದ್ದ ಹೆಸರಲ್ಲ. ಇದು ಅರಬ್ಬಿ ಅಥವ ಪಾರ್ಸಿ ಮೂಲದ ಹೆಸರೆಂದು ಅನುಮಾನಿಸುತ್ತಾರೆ. ಎಂದರೆ ರಜಪೂತರು ಮೊಗಲರನ್ನು ವಿರೋಧಿಸಿ ಅವರ ವಿರುದ್ಧ ಹೋರಾಡುತ್ತಾ ಅವರ ಭಾಷೆಯ ಹೆಸರನ್ನು ತಮ್ಮ ಮಕ್ಕಳಿಗೆ ಇರಿಸಿದ್ದರು ಎಂಬುದನ್ನು ನಂಬಲು ಸಾಧ್ಯವೇ ? ಆದ್ದರಿಂದ ಮೀರಾಬಾಯಿ ರಜಪೂತ ಸ್ತ್ರೀ ಎಂದು ಅಂಗೀಕರಿಸುವುದೇ ಸಾಧ್ಯವಿಲ್ಲ.

ಈ ರೀತಿಯಾಗಿ ಇತಿಹಾಸದ ಕಣ್ಣಲ್ಲಿ ಮೀರಾಬಾಯಿ ಇಲ್ಲ. ಆದರೆ ಮೀರಾ ಬಾಯಿಯ ಗಂಡ ಆಕೆಯ ಪೂಜೆಗಾಗಿ ಅರಮನೆಯ ಆವರಣದಲ್ಲಿ ಕಟ್ಟಿಸಿಕೊಟ್ಟನೆಂದು ಹೇಳಲಾಗುವ ಕೃಷ್ಣಮಂದಿರ ಇಂದೂ ಇದೆ. ಇಲ್ಲಿ ಮೀರಾಬಾಯಿಯ ಅಭಿಮಾನಿಗಳು ಇಂದೂ ಸೇರಿ ಮೀರಾಭಜನ್ ಹಾಡುತ್ತಾರೆ. ಭಕ್ತಿ ಪಂಥದವರು ಮೀರಾಬಾಯಿಗೆ ವಿಶೇಷ ಸ್ಥಾನವನ್ನು ಕೊಡುತ್ತಾರೆ. ಅವರ್‍ಯಾರೂ ಇತಿಹಾಸವನ್ನು ಪರಿಗಣಿಸುವುದೇ ಇಲ್ಲ. ಇತಿಹಾಸಜ್ಞರು ಅವಶ್ಯಕ ಸಂದರ್ಭದಲ್ಲಿ ಮಾತ್ರವೇ ಮೀರಾ ಬಾಯಿ ಇದ್ದಳು ಎಂದು ಈ ಕಾರಣದಿಂದ ಖಚಿತವಾಗಿ ಹೇಳಲು ಸಾಧ್ಯವಾಗುತ್ತಿಲ್ಲ ಎಂದು ತೀರಾ ಮೆಲುದನಿಯಲ್ಲಿ ಹೇಳುತ್ತಾರೆ. ಆದರೆ ಮೀರಾಬಾಯಿಯ ಬಗ್ಗೆ ವಿಪುಲವಾದ ಸಾಹಿತ್ಯ ಹಿಂದಿಯಲ್ಲಿ ಹಾಗೂ ಇತರ ಭಾಷೆಗಳಲ್ಲಿ ದೊರೆಯುತ್ತದೆ. ಎಲ್ಲೂ ಈ ರೀತಿಯ ಅನುಮಾನಗಳ ಪ್ರಸ್ತಾಪನೆಯೇ ಇಲ್ಲ.

ಇದು ಉತ್ತರ ಭಾರತದ್ದಾಯಿತು. ದಕ್ಷಿಣ ಭಾರತದ ಇನ್ನೊಂದು ಸಂಗತಿಯನ್ನು ಹೇಳುತ್ತೇನೆ.

ವೇಮನ ತೆಲುಗಿನಲ್ಲಿ ಬಹು ಜನಪ್ರಿಯನಾದ ಮಹಾನುಭಾವ. ಆಟವೇಲದಿ ಎಂಬ ಛಂದಸ್ಸಿನಲ್ಲಿ ಸಾವಿರಾರು ಪದ್ಯಗಳನ್ನು ಹೇಳಿ ಜನರ ಮನಸ್ಸನ್ನು ಸೂರೆಗೊಂಡವ. ಇಂತಹ ವ್ಯಕ್ತಿ ಆಂಧ್ರ ಸಾಹಿತ್ಯ ಚರಿತ್ರೆಯಲ್ಲಿ ಕಳೆದ ಐವತ್ತು ವರ್ಷಗಳ ತನಕ ಕವಿ ಎಂಬ ಉಲ್ಲೇಖವನ್ನೂ ಪಡೆದಿರಲಿಲ್ಲ. ವೀರೇಶಲಿಂಗಂ ಪಂತುಲು ಅವರಂತಹ ಕ್ರಾಂತಿಕಾರಿಗಳೂ ಕೂಡ ವೇಮನನ್ನು ಕವಿ ಎಂದು ಪರಿಗಣಿಸದೆ ಕೈಬಿಟ್ಟಿದ್ದರು. ವೇಮನನ ಪದ್ಯಗಳಲ್ಲಿ ಮಹತ್ತ್ವವನ್ನು ಕಂಡವರು ಚಾರ್ಲ್ಸ್ ಫಿಲಿಪ್ ಬ್ರೌನ್. ಮಚಲೀಪಟ್ಟಣದಲ್ಲಿ ಜಿಲ್ಲಾ ಕಲೆಕ್ಟರ್ ಆಗಿದ್ದಾಗ ವೇಮನನ ಬಗ್ಗೆ ಈತನಿಗೆ ಆಸಕ್ತಿ ಮೂಡಿತು. ಈತ ವೇಮನನ ಐದುನೂರು ಪದ್ಯಗಳನ್ನು ಸಂಗ್ರಹಿಸಿ ಅವನ್ನು ಇಂಗ್ಲೀಷಿಗೆ ಅನುವಾದಿಸಿ ಮದರಾಸು ವಿಶ್ವವಿದ್ಯಾಲಯದಿಂದ ಪ್ರಕಟಪಡಿಸಿದ. ಆಗ ಕೇವಲ ಐದುನೂರು ಪ್ರತಿಗಳನ್ನು ಮಾತ್ರವೇ ಅಚ್ಚು ಹಾಕಲಾಗಿತ್ತು. ಸಿ.ಪಿ. ಬ್ರೌನ್ ಅವರು ತಮ್ಮ ಗೆಳೆಯರಿಗೆ ಕೊಟ್ಟಿದ್ದ ೧೫-೨೦ ಪ್ರತಿಗಳ ವಿನಾ ಉಳಿದೆಲ್ಲ ಪ್ರತಿಗಳನ್ನು ವಿಶ್ವವಿದ್ಯಾನಿಲಯದ ಪುಸ್ತಕ ಮಳಿಗೆಯಲ್ಲಿಯೇ ಸುಟ್ಟು ಹಾಕಲಾಯಿತು ಎಂಬುದನ್ನು ನಾರ್ಲ ವೆಂಕಟೇಶ್ವರ ರಾವ್ ಅವರು ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ 'ವೇಮನ' ಕೃತಿಯಲ್ಲಿ ಹೇಳುತ್ತಾರೆ. ಇದಕ್ಕೆ ಕಾರಣ ವೇಮನ ಶೂದ್ರಕವಿ ಎಂಬುದು ಒಂದಾಗಿದ್ದರೆ, ವೇಮನ ವೇದ-ಪುರಾಣಗಳನ್ನು, ಬ್ರಾಹ್ಮಣಾದಿ ವರ್ಣಗಳವರನ್ನು ನೇರವಾಗಿ ಖಂಡಿಸಿದ್ದ ಎಂಬುದು ಇನ್ನೊಂದು. ಇಂದಿಗೂ ವೇಮನನ ಬಗ್ಗೆ ಯಾವ ರೀತಿಯಾದ ಐತಿಹಾಸಿಕ ದಾಖಲೆಗಳಾಗಲಿ, ಪುರಾವೆಗಳಾಗಲಿ ದೊರೆಯುವುದಿಲ್ಲ. ವೇಮನನ ಜೀವನ ಚರಿತ್ರೆಯು ಜನರ ನಾಲಿಗೆಯ ಮೇಲೆಯೇ ಉಳಿದಿದೆ. ಅದನ್ನು ಇತಿಹಾಸಜ್ಞರು ಒಪ್ಪುವುದಿಲ್ಲ. ರೆಡ್ಡಿ ರಾಜರ ಮನೆತನಕ್ಕೆ ಸೇರಿದ ಈತ ಆ ಪರಂಪರೆಯಲ್ಲಿ ಯಾರೂ ಎಂಬುದು ಇದುವರೆವಿಗೂ ಗೊತ್ತಾಗಿಲ್ಲ. ಕೊನೆಗೆ ವೇಮನ ಎಂಬುದೇ ವಿಚಿತ್ರವಾದ ಹೆಸರು ಎಂದು ಗುರ್ತಿಸಲಾಗಿದೆ. ಎಂದರೆ ಇಲ್ಲೂ ವೇಮನ ಇದ್ದ ಎಂಬುದಕ್ಕೆ ಇತಿಹಾಸಕ್ಕೆ ಯಾವ ದಾಖಲೆಗಳೂ ದೊರೆತಿಲ್ಲ. ಆದರೆ ಇಂದಿಗೂ ವೇಮನನ ಭಕ್ತರು ಇದ್ದಾರೆ. ತೆಲುಗು ಸಾಹಿತ್ಯದಲ್ಲಿ ಈಗ ವೇಮನನ್ನು ಮಹಾಕವಿ ಎಂದು ಹೆಸರಿಸುತ್ತಾರೆ. ವೇಮನನ ಬಗ್ಗೆ ಇಂದು ಅನೇಕ ಪಿಎಚ್‌ಡಿ ಸಂಶೋಧನೆ ಸಂಪ್ರಬಂಧಗಳು ಪ್ರಕಟವಾಗಿವೆ. ಈ ಬಗ್ಗೆ ಸಾಹಿತ್ಯಕ್ಕೆ ಕೊರತೆ ಈಗ ಇಲ್ಲ.

ಇದರಿಂದ ನಮಗೆ ಸ್ಪಷ್ಟವಾಗುವ ಅಂಶವೆಂದರೆ ಭಾರತದಲ್ಲಿ ಇತಿಹಾಸವನ್ನು ಐರೋಪ್ಯರ ಕಣ್ಣಿನಲ್ಲಿ ನೋಡಿದರೆ ಇತಿಹಾಸವೆಲ್ಲಾ ಕೇವಲ ಅನುಮಾನವಾಗಿ ಕೊನೆಗೆ ನಮಗೆ ಇತಿಹಾಸವೇ ಇಲ್ಲವಾಗುತ್ತದೆ. ಇಲ್ಲಿಯ ಜನರು ತಮ್ಮ ಆದರ್ಶಗಳಿಗೆ, ಸಾಧನೆಗಳಿಗೆ ಮುಡುಪಾಗಿಸಿಕೊಂಡಿದ್ದರೇ ವಿನಾ ಇತಿಹಾಸದಲ್ಲಿ ತಮ್ಮ ಹೆಜ್ಜೆಯನ್ನು ಮೂಡಿಸಿ, ಮುಂದಿನವರ ನೆನಪಿನಲ್ಲಿ ಖಚಿತವಾಗಿ ನಿಲ್ಲಲು ಪ್ರಯತ್ನಿಸಿದವರಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ಪೂರ್ವಜನರು ಇತಿಹಾಸದಲ್ಲಿ ತಾವು ಉಳಿಯಲು ತಮ್ಮ ಜೀವನವನ್ನು ಆದರ್ಶವಾಗಿ ರೂಪಿಸಿಕೊಂಡರೆ ಸಾಕು ಎಂಬುದನ್ನು ಮಾತ್ರವೇ ತಿಳಿದಿದ್ದರು. ಈ ರೀತಿಯ ಪುರಾವೆಗಳನ್ನು ಮುಂದಿನ ಪೀಳಿಗೆಗೆ ದೊರೆಯುವಂತೆ ಮಾಡಬೇಕು ಎಂಬುದು ಅವರ ಗುರಿಯಾಗಿರಲಿಲ್ಲ. ಆಗ ಬಹುಮಂದಿಗೆ ಅದು ಬೇಕಾಗಿದೆ ಎನಿಸಿರಲಿಲ್ಲ.

ಜಕಣಾಚಾರ್ಯ ಇರಲಿಲ್ಲ ಎಂದು ಹೇಳುವುದು ಹೇಗೆ ಸುಲಭವಲ್ಲವೋ ಅದೇ ರೀತಿಯಾಗಿ ಇದ್ದ ಎಂದು ಹೇಳುವುದು ಸುಲಭವಲ್ಲ. ಆದರೆ ನಮ್ಮವರು ಅನೇಕ ಶತಮಾನಗಳಿಂದ ಜಕಣಾಚಾರ್ಯ ಇದ್ದ ಎಂದು ನಂಬಿದ್ದಾರೆ. ಆತನ ಜೀವನ ಕಥೆಯನ್ನು ಹೇಳಿ ಆತನ ಗುಣವನ್ನು, ಶಿಲ್ಪಶಾಸ್ತ್ರದ

ಪಾಂಡಿತ್ಯವನ್ನು, ಕಲಾ ಕೌಶಲ್ಯವನ್ನು, ಸತ್ಯಪ್ರಿಯತೆಯನ್ನು ಬಾಯ್ತುಂಬ ಸ್ತುತಿಸಿದ್ದಾರೆ. ಎಲ್ಲಿ ಶಿಲ್ಪಸೌಂದರ್ಯ ಕಂಡರೆ ಅದು ಜಕಣಶಿಲ್ಪವೆಂದು ಹೇಳಿ ಸಂತೋಷಿಸಿದ್ದಾರೆ. ಕೊನೆಗೆ ಆತನು ಕಾಲ, ದೇಶಗಳನ್ನು ಮೀರಿದ ಸೀಮಾತೀತ ವ್ಯಕ್ತಿಯಾಗಿದ್ದಾನೆ. ಹೊಯ್ಸಳ ಶೈಲಿಯನ್ನು ಇಂದಿಗೂ ಜಕ್ಕಣ ಸಂಪ್ರದಾಯ ಶಿಲ್ಪ ಎಂದು ಹೇಳುವವರು ಇದ್ದಾರೆ. ಸಾಹಿತ್ಯ ವಿಭಜನೆಯಲ್ಲಿ ಪ್ರಭಾವಶಾಲಿ ಕವಿಯ ಹೆಸರಿಂದ ಆಕಾಲವನ್ನು ಕರೆಯುವುದು ಸರಿ ಎನ್ನುವವರು ಶಿಲ್ಪದಲ್ಲೂ ಆ ಕಾಲದ ಮತ್ತು ನಂತರದ ಎಲ್ಲಾ ಶಿಲ್ಪಗಳ ಮೇಲೂ ಪ್ರಭಾವ ಬೀರಿದ ಶಿಲ್ಪಿಯ ಹೆಸರಿನಿಂದ ಆ ಶೈಲಿಯನ್ನು ಕರೆಯುವುದು ಸೂಕ್ತವಾಗಿಯೇ ಇದೆ ಎಂದು ಒಪ್ಪುತ್ತಾರೆ ಎಂದುಕೊಂಡಿದ್ದೇನೆ.

ಜಕ್ಕಣ ಶಿಲ್ಪ ಸಂಪ್ರದಾಯವು ಸಾಧಾರಣವಾದುದಲ್ಲ. ಈ ಸಂಪ್ರದಾಯದ ಪ್ರಭಾವವು ಮಧ್ಯಭಾರತದ ತನಕ ಹರಡಿದೆ. ಯಾವುದೇ ಕಾಲದಲ್ಲಾದರೂ ಸರಿಯೇ ಲಲಿತಕಲೆಯಲ್ಲಾಗಲಿ, ಸಾಹಿತ್ಯದಲ್ಲಾಗಲಿ ತನ್ನ ಕಾಲದ ಸೃಷ್ಟಿಗಳ ಮೇಲೆ ಮತ್ತು ನಂತರದ ಸೃಷ್ಟಿಗಳ ಮೇಲೆ ತನ್ನ ಛಾಪನ್ನು ಒತ್ತುವಂತಹ ನೂತನ ಮಾರ್ಗಪ್ರವರ್ತಕನಾದ ಕಲೆಗಾರ ಅಥವ ಕವಿಯು ಕೇವಲ ಆ ನೆಲದ ಪೂರ್ವ ಸಂಚಿತ ಪುಣ್ಯದ ಫಲಶೃತಿಯೇ ಆಗಿರುತ್ತಾನೆ. ಅಂತಹ ಮಹನೀಯನನ್ನು ಎಲ್ಲಾ ಕಾಲಗಳಲ್ಲೂ ಸ್ಮರಿಸುವುದು ಆ ನೆಲದಲ್ಲಿ ಜೀವಿಸುವ ಜನರ ಕರ್ತವ್ಯ. ಇದರಿಂದ ಅವರಿಗೆ ಇನ್ನೂ ಹೆಚ್ಚಿನ ಸಾಧನೆಗೆ, ಸಿದ್ಧಿಗೆ ಅವಕಾಶವಾಗುತ್ತದೆ. ಜಕಣಾಚಾರ್ಯ ಎಂಬ ವ್ಯಕ್ತಿ ಇತಿಹಾಸದ ಕಣ್ಣಿನವರಿಗೆ ಅನುಮಾನವೇ ಆಗಿದ್ದರೂ ಅಂತಹ ಒಬ್ಬ ವ್ಯಕ್ತಿ ಇಲ್ಲ ಎಂಬುದನ್ನು ಖಚಿತವಾಗಿ ಹೇಳಲು ಅವರಿಗೂ ಸಾಧ್ಯವಿಲ್ಲ ಎಂಬುದು ಖಚಿತ ಇರಬಹುದು ಎಂದು ಅವರವರ ನಂಬಿಕೆಗೆ ಬಿಡಬೇಕಾದದ್ದು. ಈ ವಿಷಯವು ಮಹತ್ವವಾದುದಾಗಿದ್ದಾಗ ಇತರರ ವಿಷಯದಲ್ಲಿ ಹೇಗೆ ಇತಿಹಾಸ ವಿಸ್ಮೃತವಾಗಿದೆಯೋ ಅದೇ ರೀತಿಯಾಗಿ ವಿಸ್ಮರಿಸಬೇಕು. ಅಥವ ನಿಷ್ಠೂರವಾಗಿದ್ದರೆ ಇತಿಹಾಸ ಅನುಮಾನವನ್ನು ಸೂಚಿಸಬಹುದು. ಅಷ್ಟೇ. ಶಾಸ್ತ್ರೀಯ ಪರಂಪರೆಯಲ್ಲಿಯ ದಕ್ಷಿಣಭಾರತದ ಬಹು ದೊಡ್ಡ ಭಾಗವನ್ನೇ ತನ್ನ ನವೀನವಾದ ಶೈಲಿಯಿಂದ ಪ್ರಭಾವಿತಗೊಳಿಸಿ, ಜನರಿಂದಲೇ 'ಅಮರ ಶಿಲ್ಪಿ' ಎಂಬ ಬಿರುದನ್ನು ಗಳಿಸಿರುವ ಶಿಲ್ಪಾಚಾರ್ಯ ಕನ್ನಡ ನಾಡಿನವನು ಎಂದು ನಾವು ಹೆಮ್ಮೆಪಡಬೇಕು. ಜಕ್ಕಣ ಶಿಲ್ಪ ಶೈಲಿಯನ್ನು ಅನುಸರಿಸಿ ಪ್ರಚಾರಪಡಿಸಿರುವ ನೂರಾರು ಶಿಲ್ಪಿಗಳ ಹೆಸರುಗಳು ನಮಗೆ ಗೊತ್ತಿರುವುದು ನಮ್ಮ ಪುಣ್ಯದ ವಿಶೇಷ. ಕನ್ನಡ ನಾಡಿನ ಈ ಶಿಲ್ಪ ಶೈಲಿಯು ನಮ್ಮೆಲ್ಲರ ಹೆಮ್ಮೆಯ ಸಂಗತಿಯಾಗಬೇಕು. ಇದನ್ನು ನಾವು ಗ್ರಹಿಸದೆಯೇ ನಮ್ಮೆಲ್ಲಾ ಶಕ್ತಿಯನ್ನು 'ಜಕಣಾಚಾರ್ಯ ಇರಲಿಲ್ಲ. ಇದೆಲ್ಲಾ ಕಟ್ಟು ಕಥೆ' ಎಂದು ಹೇಳುವುದರಲ್ಲಿ ವ್ಯಯ ಮಾಡಿದ್ದೇವೆ. ಈ ಉತ್ಸಾಹದಲ್ಲಿ ಈ ಶಿಲ್ಪ ಸಂಪತ್ತಿನ ರೂವಾರಿ ಕನ್ನಡದ ಶಿಲ್ಪರ್ಷಿಯೊಬ್ಬ ಇದ್ದ, ಅವನ್ಯಾರು ಎಂಬುದನ್ನು ವಿಚಾರಿಸುವುದನ್ನೂ ಮರೆತಿದ್ದೇವೆ.

ಜಕ್ಕಣ ಇತಿಹಾಸದಲ್ಲಿ ಇರಲಿ, ಬಿಡಲಿ ಜನತೆಯ ಹೃನ್ಮನಗಳನ್ನು ಗೆದ್ದಿದ್ದಾನೆ; ಇಂದಿಗೂ ಆವರಿಸಿ ನಿಂತಿದ್ದಾನೆ. ಜಕ್ಕಣ ಪರಂಪರೆಯ ಶಿಲ್ಪಿಗಳು, ಶಿಲ್ಪಗಳು ಇಂದೂ ಅರಳುತ್ತಲೇ ಇವೆ. ನಿಜವಾಗಿಯೂ ತಮ್ಮ ಸಂಸ್ಕೃತಿ- ಪರಂಪರೆಯನ್ನು ನಿಖರವಾಗಿ ಅರಿತು ಅದನ್ನು ಬೆಳಸಬೇಕಾದವರು ವಿದ್ವಾಂಸರು. ಅವರೆಂದೂ ತಾತ್ಕಾಲಿಕವಾದ ಆಮಿಷಗಳಿಗೆ, ಲಾಭಗಳಿಗೆ ಸೋಲಬಾರದು. ಜನಸಾಮಾನ್ಯರ ನಂಬಿಕೆಗಳನ್ನು ಸಾರಾ ಸಗಟಾಗಿ ಸುಳ್ಳಿನ ಕಂತೆ ಎಂದು ತಳ್ಳಿಹಾಕಬಾರದು. ಹಾಗೆ ಮಾಡಿದರೆ ಇತಿಹಾಸಕ್ಕೆ ಅಪಚಾರವಾಗುತ್ತದೆ. ಕರ್ನಾಟಕದ ಸಾಂಸ್ಕೃತಿಕ ಸಾಧನೆಗಳೆಂದು

ಇಂದಿಗೂ ಬೇಲೂರು, ಹಳೇಬೀಡು, ಸೋಮನಾಥಪುರಗಳನ್ನು ಎಲ್ಲರೂ ಹೆಸರಿಸುತ್ತಾರೆ. ಹೊಯ್ಸಳರ ಕಾಲವು ಸಾಹಿತ್ಯ, ಸಂಸ್ಕೃತಿಗಳಿಗೆ ವಸಂತಕಾಲ ಎಂದು ಹೇಳುತ್ತಾರೆ. ಶಾಸ್ತ್ರೀಯ ಶಿಲ್ಪದಲ್ಲಿ ಈ ಪರಿವರ್ತನೆಯನ್ನು, ಹೊಸ ಅಲೆಯನ್ನು ಮೂಡಿಸಿದವನು ಜಕ್ಕಣ ಅಥವ ಈ ಹೊಸ ಅಲೆಯನ್ನೇ 'ಜಕ್ಕಣ ಶಿಲ್ಪ' ಎಂದು ಗುರ್ತಿಸಿದರೆ ಯಾವ ತಪ್ಪೂ ಇಲ್ಲ.

ಇತ್ತೀಚೆಗೆ ಸರ್ಕಾರವು ಕರ್ನಾಟಕದ ಶಿಲ್ಪಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸೇವೆ ಸಲ್ಲಿಸಿರುವ ಶಿಲ್ಪಿಗೆ 'ಜಕಣಾಚಾರ್ಯ ಪ್ರಶಸ್ತಿ' ಕೊಡಲು ತೀರ್ಮಾನಿಸಿದಾಗ ಬಂದ ಪ್ರತಿಕ್ರಿಯೆ ಬಹುಪಾಲು ಏಕಪಕ್ಷೀಯವಾಗಿ ಮತ್ಸರಾಗ್ರಸ್ತವಾಗಿಯೇ ತೋರಿಬಂದದ್ದು ಕನ್ನಡಿಗರ ದೌರ್ಭಾಗ್ಯ. ತಮ್ಮ ಸಂಸ್ಕೃತಿಯ ಸಂಪತ್ತನ್ನು ಗುರ್ತಿಸುವ ಔದಾರ್ಯವೂ ಇಲ್ಲದ ಕೃಪಣರು ಎಂದು ನನಗೆ ಭಾಸವಾಯಿತು.

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಜಕಣಾಚಾರ್ಯರ ಬಗ್ಗೆ ಕಾದಂಬರಿಗಳನ್ನು ಬೆಳಕಿಗೆ ತರುವುದರಿಂದ ಆ ಕಾಲದ ಶಿಲ್ಪಿಗಳ ಜೀವನ ರೀತಿ ನೀತಿಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಸುವ ಮಹತ್ತರವಾದ ಕೆಲಸವನ್ನೂ ಮಾಡಿದೆ. ಸ್ಥಪತಿಗಳ, ಶಿಲ್ಪಗಳ ಜೀವನದ ಚಿತ್ರಣ ನೀಡಿದೆ.

ಪ್ರಸ್ತುತ 'ಕಲಾರಾಧನೆ'ಯು ಡಾ|| ಕೊಂಡೂರು ವೀರರಾಘವಾಚಾರ್ಯುಲು ಅವರ ತೆಲುಗು ಕಾದಂಬರಿಯ ಅನುವಾದ. ತೆಲುಗು ಭಾಷೆಯಲ್ಲಿ ಕಲಾರಾಧನೆಯು ಬಹು ಜನಪ್ರಿಯವಾಗಿರುವ ಕೃತಿ. ಈ ಕೃತಿ ದಕ್ಷಿಣ ಭಾರತದ ಹನ್ನೆರಡು ವಿಶ್ವವಿದ್ಯಾನಿಲಯಗಳಲ್ಲಿ (ಮೈಸೂರು, ಬೆಂಗಳೂರು ವಿಶ್ವವಿದ್ಯಾನಿಲಯಗಳು ಸೇರಿದಂತೆ) ಪಠ್ಯಗ್ರಂಥವಾಗಿದ್ದು ಒಂದೂವರೆ ಲಕ್ಷಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗಿದೆ. ಇದರಲ್ಲಿ ಅನೇಕ ಶಾಸ್ತ್ರೀಯ ಸಾಂಪ್ರದಾಯಿಕ ವಿಷಯಗಳನ್ನು ಹೇಳಲಾಗಿದೆ. ಲೇಖಕರು ಮಹಾ ವಿದ್ವಾಂಸರು. ಆದ್ದರಿಂದ ಅವಕಾಶ ದೊರೆತಾಗಲೆಲ್ಲಾ ಅನೇಕ ಐತಿಹಾಸಿಕ, ಸಂಗೀತ, ನೃತ್ಯ, ಶಿಲ್ಪ, ವೇದಾಂತ, ತತ್ತ್ವರಹಸ್ಯಗಳನ್ನು ಓದುಗರಿಗೆ ತಿಳಿಸಬೇಕೆಂದು ತುಡಿಯುವುದರಿಂದ ಕಾದಂಬರಿಯ ಉದ್ದಕ್ಕೂ ಆ ರೀತಿಯ ವಿವರಣೆಗಳು ದೊರೆಯುತ್ತವೆ. ತಾವು ಬಹುಕಾಲದ ಅನ್ವೇಷಣೆ, ಅಧ್ಯಯನಗಳಿಂದ ಅರಿತುಕೊಂಡಿರುವ ಸತ್ಯಗಳನ್ನು ಈ ಕಾದಂಬರಿಯ ಮುಖಾಂತರ ಓದುಗರಿಗೆ ಉಣಬಡಿಸಿದ್ದಾರೆ. ಬಲ್ಜಾಕ್ ಮತ್ತು ಜೋಲಾ ಅವರೂ ತಮ್ಮ ಫ್ರೆಂಚ್ ನಾಗರೀಕತೆಯನ್ನು ಇದೇ ರೀತಿಯಾಗಿ ತಮ್ಮ ಕೃತಿಗಳಲ್ಲಿ ವರ್ಣಿಸಿದ್ದಾರೆ. ಆದ್ದರಿಂದ ಈ ಶಾಸ್ತ್ರೀಯ ವಿಷಯಗಳು ಈ ಕಾದಂಬರಿಯ ವಿಶೇಷ ಸಾಧನೆಯೇ ಆಗಿದೆ. ಪ್ರೊ|| ತೂಮಾಟಿ ದೋಣಪ್ಪ ಅವರು 'ಎಲ್ಲರೂ ಬರೆಯುವಂತಹ ಸಾಮಾನ್ಯ ಕೃತಿಗಳನ್ನು ಆಚಾರ್ಯರು ಬರೆಯುವುದಿಲ್ಲ. ಆಚಾರ್ಯರು ಬರೆಯುವಂತಹ ಕೃತಿಗಳನ್ನು ಬೇರೆ ಯಾರೂ ಬರೆಯಲು ಸಾಧ್ಯವಿಲ್ಲ. ಅವರ ಪುಸ್ತಕಗಳಲ್ಲಿ ಯಾವುದೋ ಒಂದು ವೈಶಿಷ್ಟ್ಯ ಇದ್ದೇ ಇರುತ್ತದೆ. ತೆಲುಗಿನ ವಿಶಿಷ್ಟ ಲೇಖಕರು ಆಚಾರ್ಯರು' ಎಂದು ಹೇಳಿದ್ದಾರೆ.

ಈ ಕಾದಂಬರಿಯು ತೆಲುಗು ಸಾಹಿತ್ಯದ ದಿಗ್ಗಜಗಳಿಂದಲೂ, ಅತಿರಥ, ಮಹಾರಥ ಗಳಿಂದಲೂ ಮೆಚ್ಚಿನ ನುಡಿಗಳನ್ನು ಗಳಿಸಿದೆ. ೧೯೬೧ರಲ್ಲಿ ಮೊದಲ ಬಾರಿಗೆ ಪ್ರಕಟವಾದ ನಂತರ ಅನೇಕ ಮುದ್ರಣಗಳನ್ನು ಕಂಡಿದೆ.

ಡಾ|| ಕೊಂಡೂರು ವೀರರಾಘವಾಚಾರ್ಯುಲು ಗುಂಟೂರು ಜಿಲ್ಲೆಯ ತೆನಾಲಿಯಲ್ಲಿ

ಸೆಪ್ಟೆಂಬರ್ ೨೬, ೧೯೧೨ರಲ್ಲಿ ಹುಟ್ಟಿದರು. ವೃತ್ತಿಯಿಂದ ತೆಲುಗು ಪಂಡಿತರಾಗಿ ನಂತರ ತೆಲುಗು ಪ್ರಾಧ್ಯಾಪಕರಾಗಿ ನಿವೃತ್ತರಾದರು. ತಮ್ಮ ಕೊನೆಯ ಘಳಿಗೆಯತನಕ ಲೇಖನ ವ್ಯವಸಾಯವನ್ನು ನಿರಂತರವಾಗಿ ನಡೆಸುತ್ತಾ ಇದ್ದರು. 'ತತ್ವಾನಂದ ಸ್ವಾಮಿ' ಎಂಬ ಹೆಸರನ್ನು ಧರಿಸಿ ಸಂನ್ಯಾಸವನ್ನು ಸ್ವೀಕರಿಸಿದ್ದರು. ಜನವರಿ ೧೬, ೧೯೯೫ರಂದು ತಮ್ಮ ಇಹಲೋಕ ವ್ಯವಹಾರವನ್ನು ತ್ಯಜಿಸಿದರು. ಎಂಬತ್ತೂರು ವರ್ಷಗಳ ತಮ್ಮ ಬದುಕಿನಲ್ಲಿ ಆಚಾರ್ಯರು ನಲವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.

ಆಚಾರ್ಯರು ತಮ್ಮ ಬಾಲ್ಯದಲ್ಲಿಯೇ ಇಂತು ಬೇಡಿದ್ದರು:

ಶಿಲ್ಪ ಸಾಹಿತ್ಯಗಳೆನ್ನ ಜೀವನಾಡಿ
ಉಪನಿಷದ್ವೇದಾರಣ್ಯ ವಿಹಾರ ಮಾಡಿ
ಚರಾಚರ ಜಗ ಸೇವಾ ವ್ರತ ಪಿಡಿದು
ನಡೆಸೆನ್ನ ಜೀವನ ಲೀಲಾ ನಾಟಕ

(ಶಿಲ್ಪ ಸಾಹಿತ್ಯಮುಲು ನಾಕು ಜೀವಗರ್ಱಿಲು/ ಔಪನಿಷದವಲು ವಿಹಾರ ವೀಥುಲು/ ಈ ಚರಾಚರಾತ್ಮಕ ಜಗದ್ಧಿತಮು  ವ್ರತಮು/ ನಡಪುಮಿಟು ನಾದು ಜೀವನ ನಾಟಕಂಬು)

ಅವರಿಗೆ ಶಿಲ್ಪ, ಸಾಹಿತ್ಯ, ಯೋಗ, ವೇದ, ವೇದಾಂತ, ದರ್ಶನ, ಆಗಮಾದಿಗಳ ತಿಳಿವು ತಾಯಿಯ ಹಾಲಿನೊಂದಿಗೇ ದೊರೆತಿದೆ. ಸಂಸ್ಕೃತ, ತೆಲುಗು ಎರಡೂ ಭಾಷೆಗಳಲ್ಲೂ ವಿಶೇಷ ಪಾಂಡಿತ್ಯವನ್ನು ಗಳಿಸಿ ಆಂಧ್ರಪ್ರದೇಶದ ಪ್ರಮುಖ ಪಂಡಿತರಲ್ಲಿ ಗಣ್ಯರೆಂದು ಪರಿಗಣಿಸಲ್ಪಟ್ಟಿದ್ದಾರೆ. ಆಚಾರ್ಯರ ಸಂಸ್ಕೃತ ಭಾಷಾ ಪಾಂಡಿತ್ಯವನ್ನು ಮೆಚ್ಚಿ ಅಯೋಧ್ಯೆಯ ಸಂಸ್ಕೃತ ಭಾಷಾ ಪರಿಷತ್ತಿನವರು ೧೯೩೮ರಲ್ಲಿ **ವಿದ್ಯಾಧುರೀಣ** ಎಂಬ ಬಿರುದನ್ನು, ಬೆಂಗಳೂರಿನ ಸಾಹಿತ್ಯ ಪ್ರೇಮಿಗಳು **ವಿದ್ಯಾಭೂಷಣ** ಎಂಬ ಬಿರುದನ್ನು, ೧೯೪೮ರಲ್ಲಿ ಮದರಾಸು ನಗರದ ಪಂಡಿತ ಪರಿಷತ್ತು **ದರ್ಶನಾಚಾರ್ಯ** ಎಂಬ ಬಿರುದನ್ನು ನೀಡಿ ಗೌರವಿಸಿವೆ. ೧೯೭೨ರಲ್ಲಿ ಆಂಧ್ರ ವಿಶ್ವವಿದ್ಯಾನಿಲಯವು ಗೌರವ ಡಾಕ್ಟರೇಟ್ ಪ್ರಶಸ್ತಿಯಿಂದ ಆಚಾರ್ಯರನ್ನು ಸನ್ಮಾನಿಸಿದೆ.

ಡಾಕ್ಟರ್ ಕೊಂಡೂರು ವೀರರಾಘವಾಚಾರ್ಯುಲು ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಮಹಾಕವಿಗಳು, ವಿಮರ್ಶಕರು. ತೆಲುಗಿನಲ್ಲಿ ಗದ್ಯ, ಪದ್ಯ, ವಿಮರ್ಶೆ, ಕಾವ್ಯ, ನಾಟಕ ಹೀಗೆ ಎಲ್ಲಾ ಪ್ರಕಾರಗಳಲ್ಲೂ ಸಿದ್ಧಹಸ್ತರಾಗಿದ್ದರು. ವಿಜಯವಾಡ ಆಕಾಶವಾಣಿಯು ಪ್ರಾರಂಭವಾದಾಗಿನಿಂದಲೂ ತೆಲುಗು ಮತ್ತು ಸಂಸ್ಕೃತ ಭಾಷೆಯಲ್ಲಿ ಪ್ರಸಾರವಾಗಿರುವ ಆಚಾರ್ಯರ ಭಾಷಣಗಳ ಸಂಖ್ಯೆಯು ನೂರಾರು. ತೆಲುಗಿನ ಪತ್ರಿಕೆಗಳಿಗೆ ಅವರ ಲೇಖನ, ವಿಮರ್ಶೆಗಳು ಬಹು ಅಮೂಲ್ಯವಾದುವೆಂದು ಪರಿಗಣಿತವಾಗಿದ್ದವು.

ಶಿಲ್ಪಶಾಸ್ತ್ರದ ಬಗ್ಗೆ ಅವರ ಅರ್ಥವ್ಯಾಪ್ತಿ, ಇತಿಹಾಸ, ಪರಂಪರೆ ಇತ್ಯಾದಿಗಳ ಬಗ್ಗೆ ಸಮಗ್ರ ಪರಿಚಯವನ್ನು ನೀಡುವ ಕೃತಿ ಶಿಲ್ಪ ದರ್ಶನಮು, ಋಗ್ವೇದದ ತಿರುಳನ್ನು ತಿಳಿಸುವ ಕೃತಿಗಳು ಋಗ್ವೇದ ದಿಗ್ದರ್ಶನಮು (ಮೂರು ಭಾಗಗಳು), ಋಗ್ವೇದ ರಹಸ್ಯಾಲು (ಒಂದು ಭಾಗ). ಯಜುರ್ವೇದ ದರ್ಶನಮು, ಅಥವ ವೇದ ದರ್ಶನಮು  ಎಂದು ಆಚಾರ್ಯರು ನಾಲ್ಕು ವೇದಗಳನ್ನು ಪರಿಚಯಿಸಿಕೊಟ್ಟು ವಿದ್ವಾಂಸರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಆಚಾರ್ಯರ 'ಯೋಗದರ್ಶನಮು', 'ಆತ್ಮದರ್ಶನಮು' ಕೃತಿಗಳು ಶ್ರೀ ಬಿ.ಡಿ. ಜತ್ತಿ ಮತ್ತು ಡಾ॥ ಶಂಕರ ದಯಾಳ್ ಶರ್ಮ ಅವರ ಮೆಚ್ಚುಗೆಯನ್ನು ಪಡೆದಿವೆ.

ಶ್ರೀ ಜೆ.ಜೀವಿತರಾಜು ಅವರು ಆಚಾರ್ಯರ ಸಾಹಿತ್ಯ ಗ್ರಂಥಗಳ ಬಗ್ಗೆ ಸಂಶೋಧನೆ ನಡೆಸಿ ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ. ಶ್ರೀ ಕೆ. ಸತ್ಯನಾರಾಯಣ ಪ್ರಸಾದ್ ಅವರು ಆಚಾರ್ಯರ ಲೇಪಾಕ್ಷಿ, ಕಲಾರಾಧನ, ಮೋಹನಾಂಗಿ ಈ ಮೂರು ಕಾದಂಬರಿಗಳ ಬಗ್ಗೆ ಸಂಶೋಧನೆ ನಡೆಸಿ ಎಂ. ಫಿಲ್., ಪದವಿಯನ್ನು ಪಡೆದಿದ್ದಾರೆ.

ಡಾಕ್ಟರ್ ಕೊಂಡೂರು ಅವರು ಭಾರತೀಯ ಸಂಸ್ಕೃತಿ, ವೇದ- ಸಾಹಿತ್ಯಗಳ ಖನಿ. ಅವರ ಕೃತಿಗಳು ಹಿಂದಿ ಭಾಷೆಗೆ ಅನುವಾದಿತವಾಗಿವೆ. ಲೇಪಾಕ್ಷಿ, ಗ್ರಾಯತ್ರಿ-ವಿಶ್ವಕರ್ಮ ಮತ್ತು ಋಗ್ವೇದ ರಹಸ್ಯಾಲು ಈಗಾಗಲೇ ಕನ್ನಡಕ್ಕೆ ಅನುವಾದವಾಗಿ ಪ್ರಕಟವಾಗಿವೆ.

ಪ್ರಸ್ತುತ ಕಾದಂಬರಿ 'ಕಲಾರಾಧನೆ'ಯನ್ನು ಆಚಾರ್ಯರು ರಚಿಸಲು ಒಂದು ಪ್ರೇರಣೆ ಇದೆ. ೧೯೩೮ರಲ್ಲಿ ಆಚಾರ್ಯರು ಕರ್ನಾಟಕದ (ಆಗಿನ ಮೈಸೂರು ರಾಜ್ಯ) ಪರ್ಯಟನೆಗೆ ಬಂದರು. ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಇವರು ಮೂರು ತಿಂಗಳುಗಳ ಕಾಲ ಶಿಲ್ಪದ ಬಗ್ಗೆ ಉಪನ್ಯಾಸಗಳನ್ನು ಮಾಡಿದರು. ಆ ಉಪನ್ಯಾಸಗಳ ಸಂಗ್ರಹವೇ 'ಶಿಲ್ಪದರ್ಶನ' ಕೃತಿ. ಇಪ್ಪತ್ತೇಳರ ತಾರುಣ್ಯದಲ್ಲಿದ್ದ ಇವರ ಉಪನ್ಯಾಸಗಳನ್ನು ಅನೇಕ ವಿದ್ವಾಂಸರು ಮೆಚ್ಚಿದರು. ಅಂತಹವರಲ್ಲಿ ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ಒಬ್ಬರು. ಆಚಾರ್ಯರು ಅವರ ಅಧ್ಯಕ್ಷತೆಯಲ್ಲಿಯೇ ಹಲವು ಉಪನ್ಯಾಸಗಳನ್ನು ಮಾಡಿದರು. ಅದೇ ಸಂದರ್ಭದಲ್ಲಿ ಬೇಲೂರು, ಹಳೇಬೀಡು, ಸೋಮನಾಥಪುರಗಳನ್ನು ದರ್ಶಿಸಿದರು. ಅವರು ಆ ಸಂದರ್ಭಗಳಲ್ಲಿ ಮತ್ತು ತರುವಾಯ ಜಕಣಾಚಾರ್ಯರ ಕತೆಯನ್ನು ಸಂಗ್ರಹಿಸಿದರು. ಶಾಸ್ತ್ರದ ಆವರಣದಲ್ಲಿ ಒಬ್ಬ ಸ್ಥಪತಿಯು ಹೇಗೆ ಜೀವಿಸಬಹುದು ಎಂಬುದನ್ನು ಕಲ್ಪಿಸಿಕೊಂಡು ಆದರ್ಶ ಶಿಲ್ಪಿಯ ಜೀವನವನ್ನು ಚಿತ್ರಿಸಿದರು. ಅರಸರಿಗೆ ಗುರುಗಳಾಗಿದ್ದು ಶಿಲ್ಪಯೋಗವನ್ನು ನಿರ್ವಹಿಸುತ್ತಿರುವ ಶಿಲ್ಪಗುರು ಪರಂಪರೆಯು ಇತಿಹಾಸಕ್ಕೆ ಹೊಸದಾದುದಲ್ಲ. ಆ ರೀತಿಯ ಚೌಕಟ್ಟಿನಲ್ಲಿ ಜಕಣಾಚಾರ್ಯನನ್ನು ಕಲ್ಪಿಸಿಕೊಂಡು ಆತನ ಜೀವನ ವೃತ್ತಾಂತವನ್ನು ಚಿತ್ರಿಸಿದ್ದಾರೆ. ಆದ್ದರಿಂದ ಇದು ಶಾಸ್ತ್ರೀಯ ದೃಷ್ಟಿಕೋನ. ಈ ರೀತಿಯ ಶಿಲ್ಪಿಗಳು ಭಾರತದ ಇತಿಹಾಸದಲ್ಲಿ ಅನೇಕರು ಇರಬೇಕು. ಆದರೆ ನಮ್ಮ ತನಕ ಅವರ ಉದಂತಗಳು ಉಳಿದು ಬಂದಿಲ್ಲ.

ಈ ದೃಷ್ಟಿಯಿಂದ ಕಲಾರಾಧನೆ ಕನ್ನಡ ಕಾದಂಬರಿ ಪ್ರಪಂಚದಲ್ಲಿ ಒಂದು ವಿಶಿಷ್ಟವಾದ ಕೃತಿ. ನಮ್ಮ ಪ್ರಾಚೀನ ಸ್ಥಪತಿಗಳ ಜೀವನ ದೃಷ್ಟಿ, ಅವರ ಧರ್ಮ ಮತ್ತು ಶಾಸ್ತ್ರಗಳ ಸೂಕ್ಷ್ಮ ತಿಳಿವು ಅವರ ನಿಸ್ವಾರ್ಥ ಸೇವಾಭಾವ, ಸರ್ವಸಮಭಾವಗಳನ್ನು ಬಹು ಚೆನ್ನಾಗಿ ಸ್ಪಷ್ಟವಾಗಿ ಈ ಕಾದಂಬರಿಯು ಚಿತ್ರಿಸುತ್ತದೆ.

ಈ ಕಾದಂಬರಿಯನ್ನು ತಮ್ಮ ಪ್ರಕಟಣೆಗಳಲ್ಲಿ ಸೇರಿಸಿಕೊಂಡು ನಾನು ಅನುವಾದಿಸಿಕೊಡಲು ಅವಕಾಶ ಮಾಡಿಕೊಟ್ಟ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷರಾದ ಶಿಲ್ಪಿ ಶ್ರೀ ಕೆ. ಶಾಮರಾಯ ಆಚಾರ್ಯ ಅವರಿಗೆ, ರಿಜಿಸ್ಟ್ರಾರ್ ಶ್ರೀ ಎನ್. ಮರಿಶಾಮಾಚಾರ್ಯ ಅವರಿಗೆ, ಕಾರ್ಯಸಮಿತಿಯ ಸದಸ್ಯರಿಗೆ ನಾನು ಆಭಾರಿಯಾಗಿದ್ದೇನೆ. ಕಾದಂಬರಿಯನ್ನು ಸುಂದರವಾಗಿ ಅಚ್ಚು ಮಾಡಿರುವ ಲಕ್ಷ್ಮಿ ಮುದ್ರಣಾಲಯದವರಿಗೆ ವಂದನೆಗಳು.

-ಸರಿತಾ ಜ್ಞಾನಾನಂದ

ಜ್ಞಾನ ಭಂಡಾರ, ಭಾರತ್ ನಗರ
ಬಿ.ಇ.ಎಂಎಲ್ ನಗರ ಅಂಚೆ
ಕೆಜಿಎಫ್ ೫೬೩ ೧೧೫



ಶಿಲ್ಪ: ರು. ಕಾಳಾಚಾರ್ಯ, ಎನ್.ಜಿ. ಹಳ್ಳಿ

# ಕಳಾರಾಧನೆ

# ಕಲಾರಾಧನೆ

## ೧

ವಿಶಾಲವಾದ ಉದ್ಯಾನವನ. ಅದರ ಮಧ್ಯೆ ಒಂದು ದೊಡ್ಡ ಭವನ. ಅದರ ನಾಲ್ಕೂಕಡೆ ಚಾವಡಿಗಳಿವೆ. ಅಲ್ಲಿ ಶಿಲ್ಪ ನಿರ್ಮಾಣ ಕಾರ್ಯ ನಡೆಯತ್ತಿದೆ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತಿದೆ. ಆ ಭವನಕ್ಕೆ ಸ್ವಲ್ಪ ದೂರದಲ್ಲಿ ಪೂರ್ವದಿಕ್ಕಿನಲ್ಲಿ ಒಂದು ಮಂಟಪವಿದೆ. ಅದರಲ್ಲಿ ಸುಂದರವಾದ ಒಂದು ಪ್ರತಿಮೆ ಇದೆ. ಐದು ತಲೆಗಳಿವೆ. ಹತ್ತು ತೋಳುಗಳಿವೆ. ನಾಲ್ಕು ದಿಕ್ಕುಗಳಿಗೂ ನಾಲ್ಕು ಮುಖಗಳು. ಮಧ್ಯದಲ್ಲಿ ಐದನೆಯಮುಖವು ಈಶಾನ್ಯ ದಿಕ್ಕಿನತ್ತ ನೋಡುತ್ತಿದೆ. ಎರಡು ಹಸ್ತಗಳಲ್ಲಿ ವರದ-ಅಭಯ ಮುದ್ರೆಗಳು. ಇನ್ನು ಉಳಿದವುಗಳಲ್ಲಿ ಹಲವಾರು ಆಯುಧ ಪರಿಕರಗಳಿವೆ. ಆ ಮೂರ್ತಿಯು ವಿಶ್ವಸೃಷ್ಟಿಯ ಯಾವುದೋ ಅದ್ಭುತ ರಹಸ್ಯವನ್ನು ಬಹಿರಂಗ ಗೊಳಿಸುತ್ತಿರುವಂತೆ ತೋರುತ್ತಿದೆ. ಆ ಮೂರ್ತಿಗೆ ಎಡಭಾಗದಲ್ಲಿ ಇನ್ನೊಂದು ಸ್ತ್ರೀದೇವತಾ ಮೂರ್ತಿ ಇದೆ. ಐದು ಶಿರಸ್ಸುಗಳು ಇದ್ದು ಮೂರು ಲೋಕಗಳಲ್ಲೂ ಅತ್ಯಂತ ಮನೋಹರವಾದುದಾಗಿರುವಂತೆ ಭಾಸವಾಗುತ್ತಿದೆ.

ಆ ದೇವ ಮಂಟಪಕ್ಕೆ ಒಂದು ನೂರು ಹೆಜ್ಜೆಗಳ ದೂರದಲ್ಲಿದ್ದ ಚಿತ್ರ ಶಾಲೆಯಲ್ಲಿ ಸುಂದರಾಂಗನಾದ ತರುಣನೊಬ್ಬ ದೀಕ್ಷಾಬದ್ಧನಾಗಿ ಚಿತ್ರವೊಂದಕ್ಕೆ ಬಣ್ಣವನ್ನು ತುಂಬುತ್ತಾ ಇದ್ದಾನೆ. ಆತನ ಕೈಯಲ್ಲಿ ಕುಂಚವು ಹಲವು ಬಣ್ಣಗಳನ್ನು ಚಿತ್ರಪಟದ ಮೇಲೆ ತುಂಬುತ್ತಾ ಬಂದಂತೆಲ್ಲಾ ಒಂದು ಮನುಷ್ಯಾಕೃತಿ ರೂಪುಗೊಂಡಿತು.

ಅದೇ ಸಮಯಕ್ಕೆ ರಾಜದೂತನೊಬ್ಬನು ಅಲ್ಲಿಗೆ ಬಂದು ನಮಸ್ಕರಿಸಿ "ಮಹಾಚಾರ್ಯವರ್ಯಾ, ಈ ದಿನದ ಜಯಂತಿ ಸಮಾರಂಭಕ್ಕೆ ಹೊಯ್ಸಳೇಶ್ವರರು ತಮಗೆ ಕಾಣಿಕೆಗಳನ್ನು ಕಳುಹಿಸಿದ್ದಾರೆ. ಕೃಪೆಯಿಂದ ಸ್ವೀಕರಿಸಬೇಕು" ಎಂದು ಅರಿಕೆ ಮಾಡಿಕೊಂಡು. ಅವನ ಹಿಂದೆ ವಿನಯದಿಂದ ನಿಂತಿದ್ದ ಸೇವಕರು ತಮ್ಮ ಕೈಗಳಲ್ಲಿ ಹಿಡಿದಿದ್ದ ಪೆಟ್ಟಿಗೆಗಳ ಮುಚ್ಚಳಗಳನ್ನು ತೆಗೆದು ತೋರಿಸಿದರು. ಅವುಗಳಲ್ಲಿ ಮುತ್ತಿನ ಸರ, ಪಚ್ಚೆಯ ಪದಕ, ವಜ್ರದಹಾರ, ಬಂಗಾರದ ಗೊಲಸು, ಚಂದ್ರಹಾರ, ಕಂಠೀಹಾರ ಹೀಗೆ ಅನೇಕ ಆಭರಣಗಳು ದೇದೀಪ್ಯಮಾನವಾಗಿ ಬೆಳಗುತ್ತಿದ್ದವು. ಇದರ ನಂತರ ಆ ಭಟನು ಬೆಳ್ಳಿಯ ಭರಣಿಯೊಂದನ್ನು ತೆರೆದಿರಿಸುತ್ತಾ "ಸ್ವಾಮೀ, ಮಹಾರಾಣಿ ಶಾಂತಲಾ ದೇವಿಯವರು ಗಾಯತ್ರೀ ದೇವಿಗೆ ರತ್ನಖಚಿತ ಕಿರೀಟವನ್ನು ತಮ್ಮ ಸೇವೆಯಾಗಿ ಅರ್ಪಿಸಿದ್ದಾರೆ" ಎಂದು ಅದನ್ನು ಆಚಾರ್ಯನ ಮುಂದಿರಿಸಿದ. ನಂತರ "ಇದನ್ನು ಕೀರ್ತಿಮತಿ ದೇವಿಯವರು ತಮಗೆ ಉಡುಗೊರೆಯಾಗಿ ಕಳುಹಿಸಿದ್ದಾರೆ. ಇವು ಮಹಾಮಂತ್ರಿಗಳು ಕಳುಹಿಸಿರುವ ಕಾಣಿಕೆಗಳು. ರಾಜ್ಯೋದ್ಯೋಗಿಗಳು ಅರ್ಪಿಸಿರುವ ಉಪಾಯನ...." ಎಂದು ಹೇಳುತ್ತಾ ಒಂದೊಂದಾಗಿ ಅವನ್ನು

ಶಿಲ್ಪಾಚಾರ್ಯನ ಮುಂದಿರಿಸುತ್ತಿದ್ದ. "ಇಷ್ಟೇ ಅಲ್ಲದೆ ಪೀತಾಂಬರಗಳು, ರೇಶಿಮೆಯ ವಸ್ತ್ರಗಳು, ಚೀನಾಂಬರಗಳು, ಶಾಲುಗಳು, ಸೀರೆಗಳು, ಉತ್ತರೀಯಗಳು, ಮುಂತಾದುವನ್ನು ಆನೆಗಳ ಮೇಲೆ ಕಳುಹಿಸಿದ್ದಾರೆ. ಅವನ್ನು ಇಳಿಸಿ ತಮಗೆ ಸಮರ್ಪಿಸಲು ತಮ್ಮ ಅಪ್ಪಣೆಯನ್ನು ಕೋರುತ್ತೇನೆ" ಎಂದು ವಿನಂತಿಸಿಕೊಂಡ.

ಅಷ್ಟರಲ್ಲಿ ದೇವೋಜ ಶಿಲ್ಪಾಚಾರ್ಯನು ಅಲ್ಲಿಗೆ ಬಂದ. ಅದನ್ನು ಗಮನಿಸಿದ ಜಕ್ಕಣಾಚಾರ್ಯನು "ದೇವೋಜಾ, ಜಯಂತಿ ಉತ್ಸವ ಸಮಾರಂಭಕ್ಕೆ ಅರಸರು ಉಡುಗೊರೆಗಳನ್ನು ಕಳುಹಿಸಿದ್ದಾರೆ. ನಿನ್ನೆ ಚೋಳ ಮಹಾರಾಜರು ಕಳುಹಿಸಿದ್ದ ಉಡುಗೊರೆಗಳೊಂದಿಗೇ ಇವನ್ನೂ ಇರಿಸುವ ವ್ಯವಸ್ಥೆ ಮಾಡು." ಎಂದು ಹೇಳಿದ.

"ಅಪ್ಪಣೆ. ಇನ್ನೊಂದು ವಿಷಯವನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ನಿನ್ನೆ ಸಂಜೆ ತಾವು ಇಲ್ಲದೆ ಇದ್ದಾಗ ಪಾಂಡ್ಯ ಅರಸರು ಕಾಣಿಕೆಗಳನ್ನು ಕಳುಹಿಸಿದ್ದರು. ಅವನ್ನು ಅನಂತ ಕೀರ್ತಿ ಸ್ಥಪತಿಯು ಭವನದಲ್ಲಿ ಭದ್ರವಾಗಿರಿಸಿದ್ದಾನೆ. ಇವನ್ನೂ ಅವುಗಳೊಂದಿಗೆ ಇರಿಸಿ, ಬೇಕಾದಾಗ ಕೂಡಲೇ ಕಳುಹಿಸಿಕೊಡುವ ವ್ಯವಸ್ಥೆ ಮಾಡುತ್ತೇನೆ" ಎಂದ ದೇವೋಜ.

"ಸರಿ..." ಎಂದು ಹೇಳುತ್ತಾ ತನ್ನ ಕೆಲಸದಲ್ಲಿ ಮಗ್ನನಾದ ಜಕ್ಕಣ. ಹೀಗೆಯೇ ಒಂದು ಘಳಿಗೆ ಮುಗಿಯಿತು. ಅಲ್ಲಿಗೆ ಸುಮಾರು ಎಪ್ಪತ್ತು ವರ್ಷಗಳ ವೃದ್ಧನೊಬ್ಬ ಬಂದು "ಮಗೂ, ಹಗಲಿನ ಎರಡನೆಯ ಜಾವ ಮುಗಿಯುತ್ತಾ ಬಂತು. ಈಗ ನೀನು ಪೂಜೆಯನ್ನು ಪ್ರಾರಂಭಿಸದೆ ಇದ್ದರೆ ಮೂರನೆಯ ಜಾವದ ಕಾರ್ಯ ಕಲಾಪಗಳು ಮುಗಿಯುವುದಿಲ್ಲ.... ಇದೇನು ಈಗ ಯಾವುದೋ ಚಿತ್ರ ಬರೆಯುತ್ತಿರುವೆಯಲ್ಲಾ ?!" ಎಂದು ಕೇಳಿದ.

"ತಂದೆಯವರೇ, ನಮ್ಮ ಪರಮಪೂಜ್ಯ ಗುರುವರ್ಯರಾದ ಬಮ್ಮೋಜ ಶಿಲ್ಪಾಚಾರ್ಯರ ಭಾವಚಿತ್ರವಿದು. ಅವರನ್ನು ಚಿತ್ರಿಸಬೇಕೆಂದು ನಿನ್ನೆ ತಾನೇ ಪ್ರಾರಂಭಿಸಿದೆ. ಈ ದಿನ ಚಿತ್ರಣವನ್ನು ಮುಗಿಸಬೇಕೆಂದು ತೀರ್ಮಾನಿಸಿದ್ದೇನೆ. ವಿಶ್ವಕರ್ಮ ಭಗವಂತನೊಂದಿಗೆ ಈ ಕಲಿಯುಗ ವಿಶ್ವಕರ್ಮನಿಗೂ ನಮ್ಮ ಪ್ರಣಾಮಗಳನ್ನು ಅರ್ಪಿಸಿ ನಾನೂ, ನನ್ನ ಶಿಷ್ಯಗಣ ಕೃತಕೃತ್ಯರಾಗಬೇಕೆಂದು ಕೊಂಡಿದ್ದೇವೆ" ಎಂದು ಜಕ್ಕಣಾಚಾರ್ಯನು ತನ್ನ ಚಿತ್ರರಚನೆಯ ಉದ್ದೇಶವನ್ನು ತಂದೆಗೆ ವಿವರಿಸಿದ.

ಮಗನ ಈ ಮಾತು ನಾಗಲಿಂಗ ಸ್ಥಪತಿಯನ್ನು ಬಹುವಾಗಿ ಸಂತೋಷ ಪಡಿಸಿತು. ಪ್ರಾಚೀನ ಶಿಲ್ಪಾಚಾರ್ಯರ ಬಗ್ಗೆ ಜಕ್ಕಣಾಚಾರ್ಯನಿಗೆ ಇರುವ ಗೌರವ, ಆದರ ಭಾವಗಳಿಂದ ಆತನು ಪುಲಕಿತನಾಗಿದ್ದ. ಇದರಿಂದ ಸ್ಥಪತಿಯ ಕಣ್ಣುಗಳು ಆರ್ದ್ರಗೊಂಡವು. ಮಗನನ್ನು ಸಮೀಪಿಸಿ ಅವನ ತಲೆಯ ಮೇಲೆ ಕೈಯ್ಯಾಡಿಸಿದ. ಆತನ ಅರಿವಿಲ್ಲದೆಯೇ ಎರಡು ಆನಂದ ಭಾಷ್ಪಗಳು ಜಕ್ಕಣಾಚಾರ್ಯನ ತಲೆಯ ಮೇಲುದುರಿದವು.

ಜಕ್ಕಣಾಚಾರ್ಯನು ನಾಗಲಿಂಗ ಸ್ಥಪತಿಯ ಏಕೈಕ ಪುತ್ರ. ಆತನಿಗೆ ವಿಶ್ವಕರ್ಮಸ್ಥಪತಿ ಎಂದು ತಂದೆ ತಾಯಿಗಳು ಹೆಸರಿರಿಸಿದ್ದರು. ಕರ್ನಾಟಕದಲ್ಲಿ ಬಹು ಪ್ರಸಿದ್ಧವಾದ ಶಿಲ್ಪಿಬ್ರಾಹ್ಮಣರ ಕುಟುಂಬ ಇವರದು. ವೇದ ಪ್ರಸಿದ್ಧನಾದ ಪ್ರತ್ನ ಬ್ರಹ್ಮರ್ಷಿ ಇವರ ಗೋತ್ರ ಕರ್ತನು. ಈ ಮನೆತನದವರು ಮಂತ್ರ ಶಾಸ್ತ್ರದಲ್ಲಿ ಬಹು ಪ್ರಖ್ಯಾತರಾಗಿದ್ದರು. ಮಂತ್ರಶಾಸ್ತ್ರದಲ್ಲಿ ವಾಮಾಚಾರ

ಮತ್ತು ದಕ್ಷಿಣಾಚಾರ ಎಂಬ ಎರಡು ಸಂಪ್ರದಾಯಗಳಿವೆ. ಅದರಲ್ಲಿ ದಕ್ಷಿಣಾಚಾರಕ್ಕೆ ಇವರ ಮನೆತನ ಬಹುಪ್ರಸಿದ್ಧವಾಗಿತ್ತು. ಆದ್ದರಿಂದ ಇವರನ್ನು ದಕ್ಷಿಣಾಚಾರ್ಯರೆಂದೇ ಕರೆಯುತ್ತಿದ್ದರು. ಈ ವಂಶದ ಪ್ರತಿಶಿಲ್ಪಿಯನ್ನೂ ದಕ್ಷಿಣಾಚಾರ್ಯರು ಎಂದು ಕರೆಯುವುದು ವಾಡಿಕೆಯಲ್ಲಿತ್ತು. ವಿಶ್ವಕರ್ಮ ಸ್ಥಪತಿಯು ತನ್ನ ಹತ್ತನೆಯ ವಯಸ್ಸಿಗೇ ಬಾಲಾ ತ್ರಿಪುರ ಸುಂದರೀ ದೇವಿಯನ್ನು ಉಪಾಸಿಸಿ ಆ ದೇವಿಯನ್ನು ಸಾಕ್ಷಾತ್ಕಾರಗೊಳಿಸಿಕೊಂಡು ಶ್ರೀ ವಿದ್ಯಾ ಸಿದ್ಧಿಯನ್ನು ಮಾಡಿಕೊಂಡಿದ್ದ. ಆದ್ದರಿಂದ ವಿಶ್ವಕರ್ಮ ಸ್ಥಪತಿ ಎಂಬ ಹೆಸರಿಗಿಂತಲೂ ಮಂತ್ರೋಪಾಸನ ಮಹಿಮೆಯಿಂದ ದಕ್ಷಿಣಾಚಾರ್ಯ ಎಂಬ ಹೆಸರೇ ಹೆಚ್ಚು ಬಳಕೆಯಲ್ಲಿತ್ತು. ದಕ್ಷಿಣಾಚಾರ್ಯ ಎಂಬುದು ಸಾಧಾರಣ ಜನರ ನಾಲಿಗೆಯ ಮೇಲೆ ಜಕ್ಕಣಾಚಾರ್ಯ ಎಂಬುದಾಗಿ ಆಯಿತು.

ಜಕ್ಕಣಾಚಾರ್ಯನು ಬಹು ಮೇಧಾಶಾಲಿ. ಎಳೆಯ ಪ್ರಾಯದಲ್ಲಿ ಆಟವಾಡುತ್ತಿರುವಾಗಲೇ ತಂದೆಯ ಶಿಲ್ಪವಿದ್ಯಾ ಗುರುಕುಲದಲ್ಲಿ ವೇದ ವಿದ್ಯೆಯನ್ನು ಕಲಿತಿದ್ದ. ಶಿಲಾ ಶಿಲ್ಪ, ಚಿತ್ರ ಕಲೆ, ವಾಸ್ತುವಿದ್ಯೆ, ಆಲಯ ನಿರ್ಮಾಣದ ತಂತ್ರಜ್ಞಾನಗಳನ್ನು ಬಾಲ್ಯದಲ್ಲಿಯೇ ಅರಿತಿದ್ದ. ಅವನಿಗೆ ಗೊತ್ತಿಲ್ಲದೆ ಇದ್ದ ವಿದ್ಯೆಯೇ ಇರಲಿಲ್ಲ. ಆತನು ರೂಢಿಸಿಕೊಳ್ಳದೆ ಇದ್ದ ಶಿಲ್ಪವು ಇರಲಿಲ್ಲ. ಅರವತ್ನಾಲ್ಕು ಕಲೆಗಳನ್ನೂ ಬಲ್ಲ ಬಹುಮುಖ ಪ್ರತಿಭಾಶಾಲಿ. ಮಂತ್ರ ಶಾಸ್ತ್ರದಲ್ಲಿ ಸಿದ್ಧನಾಗಿದ್ದಂತೆಯೇ ಜ್ಯೋತಿಷ್ಯಶಾಸ್ತ್ರದಲ್ಲಿ ಪರಿಣತನಾಗಿದ್ದ. ಭರತನಾಟ್ಯ, ಸಂಗೀತ ಶಾಸ್ತ್ರಗಳು ಆತನ ಅಭಿಮಾನದ ಶಾಸ್ತ್ರಗಳಾಗಿದ್ದವು. ಇವೆಲ್ಲವೂ ಕರ್ಮ ಸಿದ್ಧಿಗಳಾಗಿದ್ದವು. ಇವುಗಳೊಂದಿಗೆ ಸಕಲ ಸುಗುಣಗಳು ಆತನನ್ನು ವರಿಸಿದ್ದವು. ಪಿತೃ ಭಕ್ತಿಯಲ್ಲಿ ಶ್ರೀರಾಮಚಂದ್ರನೋ, ಭೀಷ್ಮನೋ ಎಂಬುದಾಗಿ ಆತನನ್ನು ಬಲ್ಲವರು ಅನುಮಾನಿಸುತ್ತಿದ್ದರು. ಅನೇಕ ಕಲೆಗಳಲ್ಲಿ ಸಿದ್ಧಹಸ್ತನಾಗಿದ್ದರೂ, ಅನೇಕ ಶಾಸ್ತ್ರಗಳಲ್ಲಿ ಪ್ರವೀಣನಾಗಿದ್ದರೂ ಆತನನ್ನು ಗರ್ವ ಎಂಬುದು ಸ್ಪರ್ಶಿಸಿರಲಿಲ್ಲ. ಇಪ್ಪತ್ತೈದು ವಸಂತಗಳನ್ನು ಪೂರೈಸದ ಮಹಾ ಮನೀಷಿಯನ್ನು ಕಂಡು ಯಾವ ತಂದೆಯ ಹೃದಯವು ತುಂಬಿಬರದೆ ಇರಬಲ್ಲದು?

ಈ ಎಲ್ಲಾ ಸಂಪತ್ತುಗಳಿಗೆ ಅನುವಾಗಿಯೇ ಆತನಿಗೆ ಯೋಗ್ಯಳಾದ ಹೆಂಡತಿ ದೊರೆತಿದ್ದಳು. ಸೌಪರ್ಣೀ ದೇವಿ ಹೈಂದವ ಸತೀಮಣಿಯಾಗಿ ಆದರ್ಶರೆಂದು ಪ್ರಖ್ಯಾತರಾಗಿರುವ ಸೀತೆ, ಸಾವಿತ್ರಿ, ಚಂದ್ರಮತಿಗಳನ್ನು ಗುಣದಲ್ಲಿ ಹೋಲುತ್ತಿದ್ದಳು. ವಿದ್ಯೆ, ಬುದ್ಧಿ, ಶೀಲ, ಮಾತು ಯಾವುದರಲ್ಲೂ ಆಕೆಯಲ್ಲಿ ದೋಷವನ್ನು ತೋರುವುದು ಅಸಾಧ್ಯವಾಗಿತ್ತು. ಆ ದಂಪತಿಗಳ ಬಾಳು ಹೂ-ಪರಿಮಳಂತೆ, ಹಾಲು-ಜೇನಿನಂತೆ ಮಧುರವಾಗಿತ್ತು.

ಯುವ ದಂಪತಿಗಳು ದಾಂಪತ್ಯಧರ್ಮ ನಿರ್ವಹಣೆ ನಡೆಸುತ್ತಿರುವುದು ವೃದ್ಧಾಚಾರ್ಯವರ್ಯನ ಕಣ್ಣುಗಳಿಗೆ ಹಬ್ಬವಾಗಿತ್ತು. ಆದರೆ ಇಂತಹ ಮಗನನ್ನು ಹೆತ್ತು-ಸಲಹಿ ಕಿರಿಯ ವಯಸ್ಸಿನಲ್ಲಿಯೇ ಕಣ್ಮುಚ್ಚಿದ್ದ ತನ್ನ ಹೆಂಡತಿಯ ನೆನಪಾಗುತ್ತಿತ್ತು. ಆಕೆಯ ಮುಖ ವೃದ್ಧ ಸ್ಥಪತಿಯ ಕಣ್ಮುಂದೆ ಮೂಡುತ್ತಲೇ ಕಣ್ಣು ತೇವಗೊಂಡು ಮಂಜಾಗುತ್ತಿತ್ತು.

ಇಂದು ಚೈತ್ರ ಪೂರ್ಣಿಮ. ಭಾನುವಾರ. ಚಿತ್ತಾ ನಕ್ಷತ್ರವು ಪೌರ್ಣಮಿಯಂದು ಬರುವುದರಿಂದಲೇ ಅದನ್ನು ಚೈತ್ರ ಮಾಸವೆಂದು ಕರೆಯಲಾಗುತ್ತದೆ. ಚಿತ್ತಾ ನಕ್ಷತ್ರ ದೇವ ವಿಶ್ವಕರ್ಮನು. ಆದ್ದರಿಂದಲೇ ಚೈತ್ರ ಪೌರ್ಣಮಿಯಂದು ವಿಶ್ವಕರ್ಮ ಪೂಜೆಯನ್ನು ಮಾಡುತ್ತಾರೆ

ಆ ಪೌರ್ಣಮಿಯು ಸೂರ್ಯನನ್ನು ಅಧಿದೇವತೆಯನ್ನಾಗಿ ಪಡೆದಿರುವ ಭಾನುವಾರದಂದು ಬಂದಿದ್ದುದರಿಂದ ಆ ದಿನದ ಪ್ರಾಶಸ್ತ್ಯವು ಇನ್ನೂ ಅಧಿಕವಾಗಿತ್ತು. ಆ ದಿನ ಕರ್ನಾಟಕದಲ್ಲಿ ಮಾತ್ರವೇ ಅಲ್ಲ ಆಂಧ್ರ, ಕಳಿಂಗ, ಚೋಳ, ಚೇರ, ಪಾಂಡ್ಯ ರಾಜ್ಯಗಳಲ್ಲಿಯೂ ಉತ್ತರ ಭಾರತದಲ್ಲೂ ವಿಶ್ವಕರ್ಮ ಪೂಜಾ ಮಹೋತ್ಸವವನ್ನು ಬಹು ವೈಭವದಿಂದ ನಡೆಸಲಾಗುತ್ತಿತ್ತು. ರಾಜ್ಯದ ಎಲ್ಲಾ ಮೂಲೆಗಳಲ್ಲೂ ಶಿಲ್ಪಾಚಾರ್ಯರು, ಚಿತ್ರಕಲಾವಿದರು, ಕಾಂಸ್ಯಕಾರರು, ಕರ್ಮಾರರು, ಸ್ವರ್ಣ-ರಜತ ಶಿಲ್ಪಿಗಳೂ ವಿಶ್ವಶಿಲ್ಪಿಯಾದ ವಿಶ್ವಕರ್ಮ ಭಗವಂತನನ್ನು ಆರಾಧಿಸಿ ತಮ್ಮ ಶಿಲ್ಪಕಲಾ ಪ್ರಾವೀಣ್ಯತೆಯು ವೃದ್ಧಿಸಿ ತಮ್ಮ ಜನ್ಮ ಸಾರ್ಥಕವಾಗಬೇಕೆಂದು ಪಾರ್ಥನೆಯನ್ನು ಸಲ್ಲಿಸುತ್ತಿದ್ದರು.

ಶಿಲ್ಪ ಕಲಾರಾಧಕರಿಗೂ, ಕುಶಲಕಲಾ ನಿಪುಣರಿಗೂ ತೌರಾಗಿದ್ದ ಹೊಯ್ಸಳ ಸಾಮ್ರಾಜ್ಯದಲ್ಲಿ ವಿಶ್ವಕರ್ಮ ಪೂಜಾ ಮಹೋತ್ಸವದ ವೈಭವವು ವರ್ಣಿಸಲು ಅಸಾಧ್ಯವಾಗಿತ್ತು. ಪಟ್ಟಣ-ನಗರ, ಗುಡಿಸಲು-ಪ್ರಾಸಾದ, ಅರಮನೆ-ಗುರುಮನೆಗಳೆಂಬ ಭೇದವಿಲ್ಲದೆ ಈ ಪೂಜಾ ಮಹೋತ್ಸವವು ನಡೆಯುತ್ತಿತ್ತು. ಕಲಾವಿದರು ವಿಶ್ವಕರ್ಮ ಭಗವಾನನು ಕಲಾಧಿದೇವನೆಂದು ಪೂಜಿಸುತ್ತಿದ್ದರೆ ಭಕ್ತರು, ಉಪಾಸಕರು, ಸಾಧಕರು, ವೇದಾಂತಿಗಳು ಸೃಷ್ಟಿ ರಹಸ್ಯವನ್ನು ತಿಳಿಸಬಲ್ಲ ಏಕೈಕ ಭುವನ ಶಿಲ್ಪಿಯೆಂದು, ಮೋಕ್ಷ ಪ್ರದಾಯಕನೆಂದು ಆರಾಧಿಸಿ ಮುಕ್ತರಾಗುತ್ತಿದ್ದರು. ಇಂತು ವಿಶ್ವಕರ್ಮ ಪೂಜಾ ಮಹೋತ್ಸವವು ಸಕಲರಿಗೂ ಆಚರಣೀಯವಾದ ಬಹುದೊಡ್ಡ ಪರ್ವವಾಗಿ ರೂಪುಗೊಂಡಿತ್ತು. ಶೈವ್ಯ, ವೈಷ್ಣವ, ಹೈಂದವ ಮತ ಶಾಖೀಯರು ಮಾತ್ರವೇ ಅಲ್ಲದೆ ಜೈನ, ಬೌದ್ಧರೂ ಈ ಉತ್ಸವದಲ್ಲಿ ಪಾಲ್ಗೊಂಡು ಧನ್ಯರಾಗುತ್ತಿದ್ದರು. ಯಾವ ಸೃಷ್ಟಿಕರ್ತನ ಸಂತಾನವಾಗಿ ಯಾವ ಜೀವರಾಶಿಯು ಈ ಭೂಮಿಯ ಮೇಲೆ ಅವತರಿಸಿತೋ ಆ ಜಗದಾಧಿಪತಿಯನ್ನು ಆರಾಧಿಸಲು ಮತಾದಿಗಳ ಮೌಢ್ಯದ ಆವರಣವನ್ನು ಕಲ್ಪಿಸಿಕೊಳ್ಳುವುದು ಅಜ್ಞಾನ ತಾನೇ ? ಆದ್ದರಿಂದ ವಿಶ್ವಕರ್ಮೋತ್ಸವವು ಆಬಾಲವೃದ್ಧರಾದಿಯಾಗಿ ಪಾಲ್ಗೊಳ್ಳುತ್ತಿದ್ದ ಬಹುದೊಡ್ಡ ಉತ್ಸವವಾಗಿತ್ತು.

ಹದಿನೈದು ಘಳಿಗೆಗಳ ಹೊತ್ತು ಏರಿದ್ದಾಗ ಭಗವಂತನಾರಾಧನೆಯು ಪ್ರಾರಂಭವಾಯಿತು. ಅನಂತಕೀರ್ತಿ ಸ್ಥಪತಿಯು ಪ್ರಧಾನಾಚಾರ್ಯನಾಗಿದ್ದ. ಆ ದೇವಾಲಯದಲ್ಲಿ ಗಾಯತ್ರೀ-ವಿಶ್ವಕರ್ಮರ ಪೂಜೆಯನ್ನು **ಗಾರ್ಗೇಯ ಆಗಮ** ವಿಧಿಯಂತೆ ನಡೆಸಲಾಗುತ್ತಿತ್ತು.

ಶಾಂತಲಾ ದೇವಿಯು ಕಳುಹಿಸಿದ್ದ ನವರತ್ನ ಖಚಿತ ಮಕುಟವು ಗಾಯತ್ರೀ ದೇವಿಯ ಶಿರಸ್ಸನ್ನು ಅಲಂಕರಿಸಿತ್ತು. ಪಾಂಡ್ಯಭೂಪಾಲನು ಕಳುಹಿಸಿದ್ದ ಸ್ವರ್ಣ ಪಾದುಕೆಗಳಿಂದ ವಿಶ್ವಕರ್ಮೇಶ್ವರನ ಪಾದಗಳನ್ನು ಅಲಂಕರಿಸಲಾಗಿತ್ತು. ರತ್ನಹಾರ, ಕಂಠೀಹಾರ, ರೇಷ್ಮೆ ವಸ್ತ್ರಗಳು, ಪೀತಾಂಬರಗಳಿಂದ ದೇವತಾ ಮೂರ್ತಿಗಳನ್ನು ಅಲಂಕರಿಸಲಾಗಿತ್ತು. ಹೋಮಗಳು, ಜಪಗಳು, ಸಹಸ್ರನಾಮ ಅರ್ಚನೆಗಳು, ಷೋಡಶೋಪಚಾರ ಪೂಜೆಗಳು ನಡೆದವು. ಮಂತ್ರಪುಷ್ಪಾನಂತರ ಸೌಪರ್ಣೀ ದೇವಿ ಮತ್ತು ಜಕಣಾಚಾರ್ಯ ಇಬ್ಬರೂ ನಾಗಲಿಂಗ ಸ್ಥಪತಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದರು.

ಆ ವೃದ್ಧ ಸ್ಥಪತಿಯು ತನ್ನ ಮನದಾಸೆಯನ್ನು ಹೊರಹಾಕುತ್ತಿರುವಂತೆ 'ಸುಪುತ್ರಾ ಪ್ರಾಪ್ತಿರಸ್ತು' ಎಂದು ಆಶೀರ್ವದಿಸಿದ. ಈ ಆಶೀರ್ವಾದಕ್ಕೆ ಸೌಪರ್ಣೀ ದೇವಿಯ ತುಂಬು ಗಲ್ಲದ ಮೇಲೆ

ನಾಚಿಕೆಯ ನೆರಳಾಡಿತು. ಇದುವರೆವಿಗೂ ತನಗೆ 'ವಿದ್ಯಾಭಿವೃದ್ಧಿರಸ್ತು' ಎಂದು ಆಶೀರ್ವದಿಸುತ್ತಿದ್ದ ತಂದೆಯು ತನ್ನನ್ನು ಪುತ್ರವಂತನಾಗು ಎಂದು ಆಶೀರ್ವದಿಸಿದ್ದನ್ನು ಜಕ್ಕಣಾಚಾರ್ಯನು ಗಮನಿಸಿ ಆ ಪಿತೃ ಹೃದಯವನ್ನು ಗುರ್ತಿಸಿದ್ದ. ಆತನ ಮುಖದಲ್ಲಿ ಮೃದು ಮಂದಹಾಸವು ಅರೆಕ್ಷಣ ಸುಳಿದು ಮಾಯವಾದರೂ ಆತನ ಮುಖದಲ್ಲಿದ್ದ ಗಾಂಭೀರ್ಯವನ್ನು ಅದು ಸಡಿಲಗೊಳಿಸುವುದರಲ್ಲಿ ಸೋತಿದ್ದಿತು.

ನಂತರ ಇತರ ಶಿಷ್ಯರು ವೃದ್ಧಾಚಾರ್ಯರಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದುಕೊಂಡರು.

ತಂದೆಯ ಆಣತಿಯಂತೆ ಜಕ್ಕಣಾಚಾರ್ಯನು ತನ್ನ ವಿದ್ಯಾರ್ಥಿಗಳಿಗೆ ಮತ್ತು ಅಲ್ಲಿ ನೆರೆದಿದ್ದ ಶಿಲ್ಪಿಗಳಿಗೆ ಮತ್ತು ಶಿಲ್ಪಕಲಾ ಪ್ರೇಮಿಗಳಿಗೆ ಈ ಸಂದೇಶವನ್ನು ಹೇಳಿದ :

"ಸೋದರರೇ, ಶಿಲ್ಪದ ಮತ್ತು ಶಿಲ್ಪಿಯ ಪವಿತ್ರ ಗುರಿಯನ್ನು ನೀವು ಎಂದಿಗೂ ಮರೆಯಬಾರದು. ಈ ವಿಶ್ವಕರ್ಮ ಪೂಜಾ ಮಹೋತ್ಸವವನ್ನು ಆಚರಿಸುವುದು ನಾವು ಇನ್ನೂ ಹೆಚ್ಚು ಹೆಚ್ಚಾಗಿ ಸ್ವಧರ್ಮ ಪಾರಾಯಣರಾಗಿ ರೂಪುಗೊಳ್ಳುವುದು ಸಾಧ್ಯವಾಗಲಿ ಎಂದೇ. ಜಗದ ಸೃಷ್ಟಿಕರ್ತೃನಾದ ವಿಶ್ವಕರ್ಮನು ಹೇಗೆ ಈ ವಿಶ್ವಶಿಲ್ಪವನ್ನು ನಿಸ್ವಾರ್ಥನಾಗಿ ಸೃಷ್ಟಿಸುತ್ತಾ ನಿರ್ವಹಿಸುತ್ತಿರುವನೋ ಅದೇ ರೀತಿಯಾಗಿ ಆತನ ಮಕ್ಕಳಾದ ನಾವು ಲೋಕ ಕಲ್ಯಾಣಕ್ಕಾಗಿ ಪ್ರಜೆಗಳಹಿತ ಸಂರಕ್ಷಣೆಯ ದೃಷ್ಟಿಯಿಂದ ಶಿಲ್ಪಯೋಗವನ್ನು ನಿರ್ವಹಿಸಬೇಕು. ಶಿಲ್ಪಿಯು ಎಂತಹುದೇ ಪರಿಸ್ಥಿತಿಯಲ್ಲೂ ಭೋಗಲಾಲಸೆಗೆ ಒಳಗಾಗಬಾರದು; ಸ್ವಾರ್ಥಿಯಾಗಿ ವರ್ತಿಸಲೇ ಬಾರದು. ಕುಲ-ಮತ ಭೇದಗಳಿಗೆ ಅತೀತನಾಗಿ, ರಾಗದ್ವೇಷಗಳಿಂದ ದೂರನಾಗಿ, ಧರ್ಮ ಪಾರಾಯಣನಾಗಿ ವರ್ತಿಸಬೇಕು. ಜಗಚ್ಛಿಲ್ಪಿಯೂ, ತತ್ವಜ್ಞನೂ ಆದ ವಿಶ್ವಕರ್ಮ ಪರಾತ್ಪರನ ಆರಾಧಕನಾಗಿರುವ ಶಿಲ್ಪಿಯ ದೃಷ್ಟಿಯು ಬಹುವಿಶಾಲವಾದದ್ದು. ಪ್ರಪಂಚದಲ್ಲಿ ಎಷ್ಟು ಮತಗಳು ಉದ್ಭವಿಸಿದರೂ ಅವೆಲ್ಲವೂ ಆ ವಿಶ್ವಕರ್ಮ ತತ್ವದಲ್ಲಿ ಸೇರಿಕೊಂಡಿರಬೇಕಾದದ್ದು ಅನಿವಾರ್ಯ. ಶಿಲ್ಪ ತತ್ವಜ್ಞನಿಗೆ ಯಾವ ಮತದೊಂದಿಗೂ ದ್ವೇಷ, ವಿರೋಧಗಳು ಇರುವುದಿಲ್ಲ. ಶಿಲ್ಪ ವೇತ್ತನು ಆ ಎಲ್ಲಾ ಮತಗಳೂ ತನ್ನವೇ ಎಂದು ಗೌರವಿಸಿ ಆರೈಕೆ ನಡೆಸುತ್ತಾನೆ. ಈ ವಿಷಯದಲ್ಲಿ ನಮ್ಮ ಪರಮ ಗುರುಗಳಾದ ಬಮ್ಮೋಜ ಶಿಲ್ಪಾಚಾರ್ಯರೇ ನಮಗೆ ಆದರ್ಶಪ್ರಾಯರು. ಅವರು ಜೈನ, ಬೌದ್ಧ, ವೈದಿಕ ಶಿಲ್ಪಗಳನ್ನು ರೂಪಿಸಿಕೊಟ್ಟಿದ್ದಾರೆ. ಆಯಾ ರಾಜ-ಮಹಾರಾಜರಿಂದ ಗೌರವಿಸಲ್ಪಟ್ಟಿದ್ದಾರೆ. ಕೊನೆಗೆ ತಾವೇ ನಿರ್ಮಿಸಿದ ದೇವತಾ ಮೂರ್ತಿಗೆ ನೇತ್ರೋನ್ಮೀಲನ ಸಂಸ್ಕಾರವನ್ನು ಮಾಡುತ್ತಾ ಸಮಾಧಿ ಸ್ಥಿತಿಯಲ್ಲಿ ದೈವದ ಸಾಕ್ಷಾತ್ಕಾರವನ್ನು ಮಾಡಿಕೊಂಡು ಮೋಕ್ಷವನ್ನು ಗಳಿಸಿಕೊಂಡರು ಎಂಬ ವಿಷಯವು ತಮಗೆಲ್ಲಾ ಗೊತ್ತಿರುವ ಸಂಗತಿಯೇ.

"ನಮ್ಮ ಈ ಶಿಲ್ಪಕಲೆಯು ಕೇವಲ ಬಾಹ್ಯೇಂದ್ರಿಯಗಳಿಗೆ ಮಾತ್ರವೇ ಸಂತೃಪ್ತಿಯನ್ನು ಗಳಿಸಿಕೊಡುವುದು ಆಗಬಾರದು. ಬಾಹ್ಯೇಂದ್ರಿಯ ಸಂತರ್ಪಣೆಯೊಂದಿಗೆ ಮಾನವನ ಮಾನಸಿಕ ಅಭಿರುಚಿ, ಸಂಸ್ಕಾರಗಳನ್ನು ವೃದ್ಧಿಗೊಳಿಸಿ ಮೇಲಕ್ಕೇರಿಸುತ್ತಾ ಅವು ಪರಮಾತ್ಮ ಸಾಕ್ಷಾತ್ಕಾರಕ್ಕೆ ಸಾಧನವಾದಾಗ ಶಿಲ್ಪಿಗೆ, ಶಿಲ್ಪಕ್ಕೆ, ಶಾಸ್ತ್ರಕ್ಕೆ, ಲೋಕಕ್ಕೆ ಕೃತಕೃತ್ಯತೆಯು ಲಭಿಸುತ್ತದೆ.

"ಆದ್ದರಿಂದ ವಿಶಾಲವಾದ ಶಿಲ್ಪ ಹೃದಯವನ್ನು ನೀವು ಅರ್ಥಮಾಡಿಕೊಳ್ಳಲು ನಿರಂತರವಾದ ಪ್ರಯತ್ನ ಮಾಡಬೇಕು. ಇಂದಿನ ವಿವಿಧ ಮತಗಳ, ರಾಜಕೀಯ ಬದಲಾವಣೆಗಳ, ಸಾಮಾಜಿಕ

ಏರಿಳಿತಗಳ ಪರಿಣಾಮಗಳಿಗೂ ಶ್ರೀ ಸಾಮಾನ್ಯನ ಸಾಮ್ಯವೈಷಮ್ಯಗಳಿಗೂ ಒಳಗಾಗದೆ, ಧೀರರಾದ ಪ್ರತಿಯೊಬ್ಬರೂ ಮೇರು ಸದೃಶ ವ್ಯಕ್ತಿಗಳಾಗಿ ನಿಮ್ಮನ್ನು ನೀವು ರೂಪಿಸಿಕೊಳ್ಳುತ್ತಾ, ನಿಮ್ಮ ನಿಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾ ಧನ್ಯರಾಗಬೇಕೆಂಬುದು ನನ್ನ ಆಶಯ. ನಮ್ಮ ನಾಡಿನಲ್ಲಿ ಶಿಲ್ಪಕಲೆ, ಇತರ ಎಲ್ಲಾ ಕರಕುಶಲ ಕಲೆಗಳೂ ಎಲ್ಲಾ ಜನರಿಗೂ ಲಭಿಸುವಂತೆ ಅಭಿವೃದ್ಧಿಗೊಂಡಾಗ ಮಾತ್ರವೇ ಶ್ರೀ ಸಾಮಾನ್ಯನ ಕುಟುಂಬವು ಸಂವೃದ್ಧವಾಗಿರಬಲ್ಲುದು. ಹಾಗಾದ ನಂತರವೇ ನಾಡು ಸುಭಿಕ್ಷವಾಗಿದೆ ಎನ್ನಲಾಗುತ್ತದೆ"

ಜಕ್ಕಣಾಚಾರ್ಯ ರಾಜರುಗಳು ಕಳುಹಿಸಿದ್ದ ವಸ್ತ್ರಾಭರಣಗಳನ್ನೂ, ಪೂಜೆಯಲ್ಲಿ ಉಳಿದಿದ್ದ, ಫಲ-ಪುಷ್ಪಾದಿಗಳನ್ನೂ ಭಕ್ತವೃಂದಕ್ಕೆ ದಾನವಾಗಿ ನೀಡಿದ.

ನಾಗಲಿಂಗ ಸ್ಥಪತಿಯವರದು ಬಹುದೊಡ್ಡದಾದ ಶಿಲ್ಪ ವಿದ್ಯಾ ಗುರುಕುಲ. ಬೊಮ್ಮೋಜ ಶಿಲ್ಪಾಚಾರ್ಯನ ಗುರುವಾದ ಪದ್ಮೋಜ ಸ್ಥಪತಿಯ ಕಾಲದಿಂದಲೂ ಅದು ಬಹು ಪ್ರಸಿದ್ಧಿಪಡೆದಿತ್ತು. ನಾಗಲಿಂಗ ಸ್ಥಪತಿಯ ಹುಟ್ಟೂರು ರಾಜಧಾನಿಗೆ ತುಂಬಾ ದೂರವಾಗಿದ್ದುದರಿಂದ ಜಕ್ಕಣಾಚಾರ್ಯನು ಹುಟ್ಟಿದ ನಂತರ ತನ್ನ ಶಿಲ್ಪ ಗುರುಕುಲದೊಂದಿಗೆ ತನ್ನ ನಿವಾಸವನ್ನು ಕ್ರೀಡಾಪುರಕ್ಕೆ ಬದಲಿಸಿದ್ದ. ಆ ಸ್ಥಪತಿಯು ತನ್ನ ಕಾಲದ ರಾಜಾಸ್ಥಾನಗಳಲ್ಲಿ ತನ್ನ ಶಿಲ್ಪಕಲಾ ಕೌಶಲ್ಯಕ್ಕೆ ಪ್ರತಿಯಾಗಿ ಗಳಿಸಿದ ಧನರಾಶಿ, ಭೂಮಿ, ಅಗ್ರಹಾರಗಳು ಅನೇಕವಾಗಿದ್ದವು. ಆತನ ಗುರುಕುಲದಲ್ಲಿ ಸದಾ ನೂರಾರು ಮಂದಿ ಶಿಷ್ಯರು ಶಿಲ್ಪಕಲಾಭ್ಯಾಸವನ್ನು ನಡೆಸುತ್ತಿದ್ದರು. ಅಲ್ಲಿ ಶಿಲಾ ಶಿಲ್ಪ ಮಾತ್ರವೇ ಅಲ್ಲ ಅಯಸ್ಸು (ಕಬ್ಬಿಣ), ದಾರು (ಮರ), ಕಾಂಸ್ಯ (ಕಂಚು) ಸ್ವರ್ಣಾದಿ ಪಂಚ ಶಿಲ್ಪಗಳನ್ನೂ ಬೋಧಿಸುತ್ತಿದ್ದರು. ಚಿತ್ರಕರ್ಮ, ರಥಶಿಲ್ಪ, ರತ್ನಪರೀಕ್ಷೆ, ಗಣಿತ, ಜ್ಯೋತಿಷ್ಯ, ನೃತ್ಯ, ಸಂಗೀತ ಇತ್ಯಾದಿ ಉಪಾಂಗ ವಿದ್ಯೆಗಳ ಪಾಠವೂ ನಡೆಯುತ್ತಿತ್ತು. ಶಿಲ್ಪ ವಿದ್ಯಾಲಯದಲ್ಲಿ ವಿಷಯಗಳನ್ನು ವಿಭಜಿಸಿ ವಿದ್ಯಾರ್ಥಿಗಳಿಗೆ ಬೋಧಿಸಲಾಗುತ್ತಿತ್ತು. ಈ ಕಲಾ ಶಾಲೆಯ ಅಭಿವೃದ್ಧಿಗೆ ಮತ್ತು ಯಶಸ್ವೀ ನಿರ್ವಹಣೆಗೆ ರಾಜರು, ಧನವಂತರು, ಪ್ರಜೆಗಳು ನೆರವಾಗುತ್ತಿದ್ದರು.

ಇಂತಹ ಸಂಪನ್ನ ಕುಟುಂಬದಲ್ಲಿ ಜನಿಸಿದ ಜಕ್ಕಣಾಚಾರ್ಯನಿಗೆ ಯಾವುದರ ಕೊರತೆ ತಾನೇ ಇರಲು ಸಾಧ್ಯ ? ಇದಕ್ಕೆ ಮಿಗಿಲಾಗಿ ಆತನಿಗೆ ಲವಲೇಶವೂ ಧನದ ಆಸೆ ಇರಲಿಲ್ಲ. ತನ್ನ ವಿದ್ಯೆ, ಶಿಲ್ಪ ಕೌಶಲ್ಯ, ಗಳಿಕೆ ಎಲ್ಲವನ್ನೂ ಲೋಕಾರಾಧನೆಗೆ ಮುಡುಪಾಗಿ ಸಲ್ಲಿಸಿ ಪ್ರಜಾಕ್ಷೇಮವನ್ನು ಗಳಿಸುವುದೇ ಆತನ ಬದುಕಿನ ದೊಡ್ಡ ಆಸೆಯಾಗಿತ್ತು. ಆತನ ಆಸೆಯನ್ನು ದೃಢಗೊಳಿಸುವಂತಹ ಸತೀಮಣಿ ಆತನಿಗೆ ದೊರೆತಿದ್ದಳು. ರತಿ ಮನ್ಮಥರನ್ನು ಹೋಲುತ್ತಿದ್ದ ಆ ದಂಪತಿಗಳ ನಡೆ-ನುಡಿ, ಸೌಶೀಲ್ಯ, ಪ್ರಜಾಸೇವಾನುರಕ್ತಿ ಸುಗುಣಗಳು, ಭೂತದಯೆ, ಧರ್ಮ ಭೀರುತ್ವ, ವೈದುಷ್ಯ ಜನರ ಮೆಚ್ಚುಗೆಯ ಸಂಗತಿಗಳಾಗಿ ಸದಾ ಅವರ ನಾಲಿಗೆಗಳ ಮೇಲೆ ಕುಣಿಯುತ್ತಿದ್ದವು. ಯಾರಿಗೇ ಆಗಲಿ ಯಾವುದಾದರೂ ಸಂಶಯ ಪರಿಹಾರವಾಗ ಬೇಕಾಗಿದ್ದರೂ, ಯಾರಿಗೇ ಶುಭ ಮುಹೂರ್ತಗಳನ್ನು ನಿರ್ಣಯಿಸಿ ಕೊಡಬೇಕಾಗಿದ್ದರೂ, ಯಾರಿಗೇ ಯಾವ ನೆರವು, ಉಪಕಾರಗಳು ಬೇಕಾಗಿದ್ದರೂ ಜಕ್ಕಣಾಚಾರ್ಯರ ಮನೆಯು ಅವರಿಗೆ ಶರಣು ನೀಡುತ್ತಿತ್ತು. ವೈದ್ಯ, ಜ್ಯೋತಿಷ್ಯ, ವಾಸ್ತು, ಶಿಲ್ಪ, ಧರ್ಮ ಸೂತ್ರಗಳ ವಿಶ್ಲೇಷಣೆ, ಗೃಹ್ಯ ನೀತಿ, ವೇದ ಜಿಜ್ಞಾಸೆ ಮುಂತಾದ ಅನೇಕ ಸಂಗತಿಗಳ ಆಡುಂಬೊಲವಾಗಿತ್ತು ಆಚಾರ್ಯರ ಮನೆ. ಗಳಿಸಿದ ಸಂಪತ್ತನ್ನು ಬಡ-ಬಗ್ಗರಿಗೆ ಕೊಡುಗೈಯಲ್ಲಿ ದಾನ ಮಾಡುತ್ತಿದ್ದುದರಿಂದ ಆ ಭವನವು ಆಶ್ರಿತರ ಪಾಲಿಗೆ ಕಲ್ಪವೃಕ್ಷ ವೆನಿಸಿತ್ತು.

ಈ ವಂಶದವರಿಗೆ ಇದ್ದ ಪ್ರಖ್ಯಾತಿ, ಜಕ್ಕಣಾಚಾರ್ಯನ ಕಲಾಪ್ರತಿಭೆ ಇವುಗಳನ್ನು ಅರಿತಿದ್ದ ಹಲವು ಭೂಪಾಲರು ತಮ್ಮ ಆಸ್ಥಾನಗಳಲ್ಲಿ ಶಿಲ್ಪಾಚಾರ್ಯನನ್ನಾಗಿ ಮಾಡಿಕೊಳ್ಳಬೇಕೆಂದು ತವಕಿಸುತ್ತಿದ್ದರು. ಆದರೆ ಆ ರೀತಿಯ ಪಟ್ಟ ಆತನಿಗೆ ಇಷ್ಟವಿರಲಿಲ್ಲ. ಹೊಯ್ಸಳ ರಾಜ್ಯದ ರಾಜಧಾನಿಗೆ ಸ್ವಲ್ಪ ದೂರದಲ್ಲಿದ್ದ ಗ್ರಾಮ ಕ್ರೀಡಾಪುರ ಆದ್ದರಿಂದ ತನ್ನ ಊರಿನಲ್ಲಿಯೇ ಶಿಲ್ಪ ವಿದ್ಯಾ ಗುರುಕುಲವನ್ನು ನಡೆಸುತ್ತಿದ್ದ. ಇಂತಹುದರಲ್ಲಿ ತನ್ನ ನಾಡಿನ ರಾಜನನ್ನು ಅಲ್ಲದೆ ಬೇರೆಯವರನ್ನು ಆತನು ಹೇಗೆ ತಾನೇ ಆಶ್ರಯಿಸಲು ಇಷ್ಟ ಪಡುತ್ತಾನೆ ? ಒಬ್ಬ ಅರಸನ ಆಸ್ಥಾನವನ್ನು ಸೇರಿದರೆ ತನ್ನ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗುತ್ತದೆ ಎಂಬುದನ್ನು ಆತ ಗುರುತಿಸಿದ್ದ. ಸ್ವತಂತ್ರನಾಗಿದ್ದು ಯಾರಿಗೆ ಯಾವ ಕೆಲಸಗಳನ್ನು ಬೇಕಾದರೂ ತಾನು ಮಾಡಿಕೊಡುವಂತೆ ಇರಬೇಕು ಎಂಬುದು ಆತನ ಬಯಕೆ. ಜಕ್ಕಣಾಚಾರ್ಯನ ಈ ವಾಂಛೆಗೆ ತಕ್ಕಂತೆಯೇ ಆ ಕಾಲದ ರಾಜಕೀಯ ವಾತಾವರಣವೂ ಇತ್ತು. ಚೋಳ ಮಂಡಲದಲ್ಲಿ ಶೈವ ವೈಷ್ಣವ ಮುಂತಾದ ಮತಗಳಿದ್ದವು. ಕರ್ನಾಟಕದಲ್ಲಿ ವೀರಶೈವ, ಜೈನ, ಬೌದ್ಧ ಮತಗಳು ಪ್ರಜೆಗಳ ಆದರಣೆಯನ್ನು ರಾಜರ ಪ್ರೇಮವನ್ನು ಗಳಿಸಿಕೊಂಡಿದ್ದವು. ಇಂತಹ ಪರಿಸ್ಥಿತಿಯಲ್ಲಿ ಯಾವುದೇ ಪಕ್ಷವನ್ನೂ ವಹಿಸದೆಯೇ ತನ್ನ ಕುಲದ ಕೂಟಸ್ಥನಾದ ವಿಶ್ವಕರ್ಮ ಪರಮೇಶ್ವರನಂತೆಯೇ ತಾನೂ ಅವರಿಗೆ ಸಮನ್ವಯ ಮಾರ್ಗವನ್ನು ತೋರಿಸುವುದೇ ಶಿಲ್ಪಿಯಾದವನ ಕರ್ತವ್ಯವೆಂದು ಭಾವಿಸಿದ್ದ.

ಜಗತ್ಪೂಜ್ಯವಾಗಿರುವ ಶಿಲ್ಪವು ಯಾವ ಕಾಲದಲ್ಲೂ ಯಾವುದೇ ಒಂದು ಮತವನ್ನು, ಪಕ್ಷವನ್ನು ಅನುಸರಿಸಿಲ್ಲ. ಎಲ್ಲ ಮತಗಳೂ ಅವರಿಗೆ ಪೂಜ್ಯವಾಗಿಯೇ ಇದ್ದವು. ಸನಾತನ ಶಿಲ್ಪಯೋಗಿಗಳು ಶಿಲ್ಪವನ್ನು ಪೂಜಿಸುತ್ತಾ ಬಂದಿದ್ದರು. ಅವರ ಆದರ್ಶ ಸಂಪ್ರದಾಯವನ್ನು ಈ ಆದರ್ಶ ಶಿಲ್ಪಾಚಾರ್ಯನು ಹೇಗೆ ತಾನೆ ಬಿಟ್ಟು ದೂರ ಸರಿಯಬಲ್ಲ ? ಇದಕ್ಕೆ ತಕ್ಕಂತೆಯೇ ವೀರಬಲ್ಲಾಳ ಭೂಪತಿಯು ಮತ ದುರಭಿಮಾನವನ್ನು ದೂರಮಾಡಿ ಶಿಲ್ಪವನ್ನೇ ದೈವವನ್ನಾಗಿ ಆರಾಧಿಸಲು ತೊಡಗಿದ್ದ. ಇಂತಹವರಿಗೆ ತಾನು ನೆರವಾಗಿ ನಿಲ್ಲುವುದೇ ತನ್ನ ಕರ್ತವ್ಯವೆಂದು ಜಕ್ಕಣಾಚಾರ್ಯ ಭಾವಿಸಿದ್ದ.

# ೨

ಹಿಂದೂ ದೇಶದಲ್ಲಿ ಪ್ರಾರಂಭವಾಗಿ ವಿಕಸಿಸಿದ ಮತಗಳಲ್ಲಿ ವೇದ ಮತದ ತರುವಾಯ ಜೈನ ಬೌದ್ಧಮತಗಳು ಬಹುವಾಗಿ ಪ್ರಸಿದ್ಧಿಗಳಿಸಿದ್ದವು. ಜೈನ ಮತವನ್ನು ಇಪ್ಪತ್ನಾಲ್ಕು ತೀರ್ಥಂಕರರು ಪ್ರಚಾರ ಮಾಡಿದರು. ಇವರಲ್ಲಿ ಮೊದಲನೆಯ ತೀರ್ಥಂಕರ ವೃಷಭದೇವ. ಈತ ಕೋಟ್ಯಾಂತರ ವರ್ಷಗಳ ಕಾಲ ಜೀವಿಸಿದ್ದನೆಂದು ಜೈನ ಗ್ರಂಥಗಳು ಹೇಳುತ್ತವೆ. ಇಪ್ಪತ್ಮೂರನೆಯ ತೀರ್ಥಂಕರ ಪಾರ್ಶ್ವನಾಥ. ಇಪ್ಪತ್ನಾಲ್ಕನೆಯವನು ವರ್ಧಮಾನ ಮಹಾವೀರ. ಈತನ ಕಾಲದಲ್ಲಿಯೇ ಜೈನ ಮತಕ್ಕೆ ಭಾರತ ದೇಶದಲ್ಲಿ ಎಣೆಯಿಲ್ಲದ ಪ್ರಾಶಸ್ತ್ಯವು ದೊರೆಯಿತು.

ಬೌದ್ಧ ಧರ್ಮವನ್ನು ಶಾಕ್ಯವಂಶದ ಕ್ಷತ್ರಿಯನಾದ ಬುದ್ಧ ದೇವನು ಪ್ರಾರಂಭಿಸಿ ಪ್ರಸಾರ ಮಾಡಿದ. ಜೈನ ಮತ್ತು ಬೌದ್ಧ ಧರ್ಮಗಳು ಎರಡೂ ವೇದಮತದಲ್ಲಿಯ ಹಿಂಸಾತ್ಮಕ ಯಜ್ಞಗಳನ್ನು ದ್ವೇಷಿಸುತ್ತವೆ. ಆ ಮತದ ಸಿದ್ಧಾಂತಗಳು ಅಹಿಂಸೆ, ಸತ್ಯ, ಶಮ, ದಮೆ ಮುಂತಾದ ಸದ್ಗುಣಗಳಿಗೆ ಪ್ರಾಧಾನ್ಯತೆ ಕೊಟ್ಟಿರುವುದರಿಂದ, ವರ್ಣಭೇದವನ್ನು ತಿರಸ್ಕರಿಸಿರುವುದರಿಂದ ಇವು ಬಹು ಮಟ್ಟಿಗೆ ಸಾಮಾನ್ಯ ಜನರನ್ನು ಆಕರ್ಷಿಸಿ ಅವರ ಮನಸ್ಸನ್ನು ಸೂರೆಗೊಂಡಿದ್ದವು. ಸುಪ್ರಸಿದ್ಧರಾದ ಚಂದ್ರಗುಪ್ತ, ಅಶೋಕ ಮೊದಲಾದ ಚಕ್ರವರ್ತಿಗಳೇ ಈ ಮತಗಳನ್ನು ಆದರಿಸಿ, ಅವಲಂಬಿಸಿ ಪ್ರಚಾರ ಮಾಡಿದ್ದರು. ಬಹು ಕ್ರೂರಿಯಾಗಿದ್ದ ಅಶೋಕನು ಬೌದ್ಧ ಧರ್ಮದ ರಸಾಯನದ ಫಲವಾಗಿ ಅಪರ ಬುದ್ಧನಾಗಿದ್ದ.

ಚಕ್ರವರ್ತಿಗಳೇ ಈ ಮತಗಳನ್ನು ಪೋಷಿಸಿದ್ದರಿಂದ, ಅವರವರ ಸಾಮ್ರಾಜ್ಯಗಳಲ್ಲಿಯೇ ಅಲ್ಲದೆ ರಾಜ್ಯದ ಹೊರಗೆ ನಾಲ್ಕೂ ದಿಕ್ಕುಗಳಲ್ಲೂ ಈ ಮತಗಳು ವ್ಯಾಪಿಸಿದ್ದವು. ರಾಜನ ಬಲವೇ ಅಲ್ಲದೆ ಬಹು ಪ್ರಭಾವಶಾಲಿಗಳಾಗಿದ್ದ ಈ ಮತಗಳ ಪ್ರಚಾರಕರ ಬಲವೂ ದೊರೆತಿದ್ದು ಈ ಮತಗಳು ಜಗತ್ತಿನಲ್ಲೆಲ್ಲಾ ವ್ಯಾಪಿಸಲು ಸಾಧ್ಯವಾಯಿತು.

ಜೈನ ಮತವು ದಕ್ಷಿಣ ಭಾರತದಲ್ಲಿ ವ್ಯಾಪಿಸಲು ಮೂಲ ಕಾರಣವನ್ನು ಜೈನ ಗ್ರಂಥಗಳು, ಶಾಸನಗಳು ಇಂತು ವಿವರಿಸುತ್ತವೆ : ಮಹಾವೀರನ ನಿರ್ವಾಣದ ನಂತರ ಜೈನ ಮತಾಚಾರ್ಯರ ಸ್ಥಾನವನ್ನು ಪಡೆದವರಲ್ಲಿ ಭದ್ರಬಾಹು ಒಬ್ಬ. ಈತನು ಚಂದ್ರಗುಪ್ತಮೌರ್ಯನ ಗುರು. ಒಂದು ರಾತ್ರಿ ಭದ್ರಬಾಹುವಿನ ಕನಸಿನಲ್ಲಿ ಹನ್ನೆರಡು ಶಿರಗಳ ಸರ್ಪವು ಬುಸುಗುಟ್ಟುತ್ತಾ ತನ್ನತ್ತ ಬರುತ್ತಿದ್ದುದನ್ನು ನೋಡಿದ. ಬೆಳಗಾಗುತ್ತಲೇ ಭಿಕ್ಷಾರ್ಥಿಯಾಗಿ ಗೃಹಸ್ಥನ ಮನೆಯ ಮುಂದೆ ನಿಂತು 'ಭಿಕ್ಷಾಂದೇಹಿ' ಎಂದು ಹನ್ನೆರಡು ಬಾರಿ ಯಾಚಿಸಿದ. ಆದರೂ ಆ ಮನೆಯಲ್ಲಿ ಆತನಿಗೆ ಭಿಕ್ಷೆ ನೀಡುವವರು ಇರಲಿಲ್ಲ. ತನ್ನ ಸ್ವಪ್ನವನ್ನು ವಿಧಿ ವಿಲಾಸವೆಂದು ಸ್ಮರಿಸಿ ಮಗಧ ದೇಶವು ಹನ್ನೆರಡು ವರ್ಷಗಳ ಕಾಲ ಕ್ಷಾಮಕ್ಕೆ ತುತ್ತಾಗಲಿದೆ ಎಂಬುದನ್ನು ಹೇಳಿದ. ಈ ವಿಷಯವನ್ನು

ನಂತರದಲ್ಲಿ ಚಕ್ರವರ್ತಿ ಚಂದ್ರಗುಪ್ತನಿಗೆ ತಿಳಿಸಿ, ಹನ್ನೆರಡು ಸಾವಿರ ಮಂದಿ ಶಿಷ್ಯರೊಂದಿಗೆ ದಕ್ಷಿಣಾಪಥಕ್ಕೆ ಬಂದು ಮತ ಪ್ರಚಾರವನ್ನು ಮಾಡಲು ಪ್ರಾರಂಭಿಸಿದರಂತೆ. ಹೀಗೆ ಕ್ರಿಸ್ತಶಕೆಯ ಪ್ರಾರಂಭಕ್ಕೂ ಮೊದಲೇ ಉತ್ತರ ಭಾರತದಲ್ಲಿ ಹುಟ್ಟಿ, ದಕ್ಷಿಣ ಭಾರತದಲ್ಲೂ ವ್ಯಾಪಿಸಿದ ಈ ಜೈನ ಮತಕ್ಕೆ ಪ್ರಧಾನವಾಗಿ ಕರ್ನಾಟಕ, ತಮಿಳು ರಾಜ್ಯಗಳು ನೆರವಾಗಿ ನಿಂತವು. ಆಗ ಕರ್ನಾಟಕದಲ್ಲಿ ಜೈನಮತವು ಉಚ್ಛ್ರಾಯಸ್ಥಿತಿಯನ್ನು ತಲುಪಿತು. ಚಂದ್ರಗುಪ್ತ ಭದ್ರಬಾಹು ಇಬ್ಬರೂ ಶ್ರವಣಬೆಳಗೊಳವನ್ನು ತಮ್ಮ ವಾಸಸ್ಥಳವನ್ನಾಗಿ ಮಾಡಿಕೊಂಡು ಅಲ್ಲಿಯೇ ತಪಸ್ಸನ್ನಾಚರಿಸಿ ಅಲ್ಲಿಯೇ ನಿರ್ವಾಣವನ್ನು ಹೊಂದಿದರು.

ಅಂದಿನಿಂದ ದಕ್ಷಿಣಾ ಪಥವನ್ನು ಆಳಿದ ಅನೇಕ ಅರಸರು ಜೈನ ಮತಾವಲಂಬಿಗಳಾದರು. ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿರಿಸಿಕೊಂಡು ಕರ್ನಾಟಕವನ್ನು ಪರಿಪಾಲಿಸಿದವರಲ್ಲಿ ಹೊಯ್ಸಳರ ವೀರಬಲ್ಲಾಳ ಬಹುಮುಖ್ಯನಾದವನು. ಬಿಟ್ಟಿದೇವ ವೀರಬಲ್ಲಾಳನ ರಾಣಿಯರಲ್ಲಿ ಶಾಂತಲಾದೇವಿ, ಸಹಜಾದೇವಿ, ಲಕುಮಾದೇವಿಯರು ಬಹು ಪ್ರಸಿದ್ಧರು. ಇವರಲ್ಲಿ ಲಕುಮಾದೇವಿಯನ್ನೇ ಕೀರ್ತಿಮತೀದೇವಿ ಎಂದೂ ಹೇಳುತ್ತಾರೆ. ಶಾಂತಲಾದೇವಿಯು ತನ್ನ ಗಂಡ ಜೈನನಾಗಿದ್ದರೂ ತಾನು ಮಾತ್ರ ವೈದಿಕ ಮತವನ್ನು ತ್ಯಜಿಸಲಿಲ್ಲ. ವೈದಿಕ ಮತ ಸೂತ್ರಗಳು ಆಕೆಗೆ ಬಹುವಾಗಿ ಮೆಚ್ಚುಗೆಯಾಗಿದ್ದವು. ಸನಾತನವಾದ ವೈದಿಕ ಮತಕ್ಕಿಂತಲೂ ಆಧುನಿಕವಾದ ಇತರ ಮತಗಳು ಕೆಲವು ಹೊಸದಾದ ಗುಣಗಳನ್ನು ಪಡೆದುಕೊಂಡಿದ್ದರೂ ಅಷ್ಟರಿಂದಲೇ ಅವು ಪ್ರಶಸ್ತವಾದುವೆಂದು ಹೇಳುವುದು ಸರಿಯಲ್ಲ ಎಂಬುದು ಆಕೆಯ ಅಭಿಮತ. ಇಂತಹ ವೈದಿಕ ಧರ್ಮದೀಕ್ಷೆಯಿಂದ ಆಕೆಯು ಹಿಂದೂ ಮತದಲ್ಲಿಯ ಶಿವ ಕೇಶವಾದಿ ದೇವತೆಗಳನ್ನೇ ಆರಾಧಿಸುತ್ತಾ ತಪೋಯಜ್ಞಗಳನ್ನು ಮಾಡುತ್ತಿದ್ದಳು. ಈ ಸಂದರ್ಭದಲ್ಲಿ ಈ ವಿಶೇಷವು ಬಹು ಪ್ರಶಂಸನೀಯ ಅಂಶವಾಗಿತ್ತು. ಗಂಡ-ಹೆಂಡತಿ ಇಬ್ಬರೂ ಬೇರೆ ಬೇರೆ ಮತಗಳಿಗೆ ಸೇರಿದ್ದರೂ ಅವರಲ್ಲಿ ಅಭಿಪ್ರಾಯ ಭೇದಗಳಿಗೆ ಅವಕಾಶ ಇರಲಿಲ್ಲ; ಐಕ್ಯಮತ್ಯಕ್ಕೆ ಕೊರತೆ ಇರಲಿಲ್ಲ. ಯಾರಿಗೆ ಯಾವ ಮತ ಸರಿ ತೋರಿದರೆ ಅದನ್ನು ಅನುಸರಿಸುವುದರಲ್ಲಿ ದೋಷವಿಲ್ಲ ಎಂದು ಅವರು ಪ್ರಪಂಚಕ್ಕೆ ಪಾಠ ಹೇಳುವಂತಿದ್ದರು. ಅವರು ಯಾವ ಮತದ ಅನುಯಾಯಿಗಳಾಗಿದ್ದರೂ ಅವರ ಆಚರಣೆಯು ಪರೋಪಕಾರ ಪ್ರಧಾನವಾದುದಾಗಿದ್ದುದರಿಂದ ಪರಸ್ಪರ ವೈರಿಗಳಾಗದೆ ಜೀವನ ಯಾತ್ರೆಯನ್ನು ಸುಲಲಿತವಾಗಿ ಸಾಗಿಸುವುದು ಅವರಿಗೆ ಸಾಧ್ಯವಾಯಿತು.

ಆದರೆ ಯಾವುದಾದರೂ ಸೂಕ್ತ ಸಮಯದಲ್ಲಿ ತನ್ನ ಗಂಡನನ್ನು ವೈದಿಕ ಮತಕ್ಕೆ ಪರಿವರ್ತಿಸಿಕೊಳ್ಳುವ ಅವಕಾಶ, ಸಂದರ್ಭ ಖಂಡಿತ ದೊರೆಯುತ್ತದೆ ಎಂಬ ಆಸೆ ಶಾಂತಲಾದೇವಿಯ ಅಂತರಂಗದಲ್ಲಿ ಅಡಗಿತ್ತು. ಅದೇ ತೆರನಾಗಿ ವೀರಬಲ್ಲಾಳ ತನ್ನ ರಾಣಿಯನ್ನು ತನ್ನ ಮತಕ್ಕೆ ಪರಿವರ್ತಿಸಿಕೊಳ್ಳಲು ಸೂಕ್ತ ಅವಕಾಶಕ್ಕಾಗಿ ಕಾಯುತ್ತಿದ್ದ. ಈ ಪರಿವರ್ತನೆಯು ಬಲವಂತದ್ದಲ್ಲ. ಅಂತರಂಗವಾಗಿ ಅವರ ಮನವನ್ನು ಗೆಲ್ಲುವಂತಹುದಾಗಿದ್ದು ಅವರೇ ಸ್ವೇಚ್ಛೆಯಿಂದ ಮತವನ್ನು ಬದಲಿಸಿಕೊಳ್ಳುವಂತೆ ಆಗಬೇಕೆಂಬುದು ಇಬ್ಬರ ಆಶೆ. ಹಾಗಾದಾಗ ಮಾತ್ರವೇ ಪರಿವರ್ತನೆಯು ಶಾಶ್ವತವಾಗಿ ನಿಲ್ಲಬಲ್ಲುದು ಎಂದು ಇಬ್ಬರೂ ಖಚಿತವಾಗಿ ನಂಬಿದ್ದರು.

ವೀರಬಲ್ಲಾಳ ಪರಾಕ್ರಮಶಾಲಿ. ಧರ್ಮವೇ ಮೂರ್ತಿವೆತ್ತಿದ್ದಂತೆ ಇದ್ದವನು. ಮತಾಚಾರ ಪರಾಯಣ. ಪ್ರಜಾಪ್ರೇಮಿ. ಕಲಾಪ್ರಿಯ. ಕಲಾಮಾರ್ಗವನ್ನು ಅನುಸರಿಸಿ ಪ್ರಜೆಗಳಲ್ಲಿ ಮತ ಪರವಾದ ಭಾವನೆಗಳನ್ನು ಧರ್ಮದತ್ತ ಸೆಳೆಯುವಂತೆ ಮಾಡಬೇಕೆಂಬ ಅಭಿಲಾಷೆ ಇದ್ದವನು. ಕಲೆ, ಧರ್ಮ, ಸತ್ಯ, ಮತ, ಸಿದ್ಧಾಂತಗಳು ಇವೆಲ್ಲಾ ಬೇರೆ ಬೇರೆಯಾಗಿ ಇರಬಾರದೆಂದು, ಹೃದಯವನ್ನು ರಂಜಿಸಿ ಆನಂದವನ್ನು ನೀಡುವಾಗಲೇ ಕಲೆಯ ಪ್ರಯೋಜನವನ್ನು ಮನುಷ್ಯರು ಪಡೆದುಕೊಳ್ಳುತ್ತಾರೆ ಎಂದು ಆ ಮಹಾರಾಜನು ನಂಬಿದ್ದ. ಇದೇ ಆಶಯದೊಂದಿಗೇ ಜಕ್ಕಣಾಚಾರ್ಯನನ್ನು ತನ್ನ ಆಸ್ಥಾನ ಶಿಲ್ಪಿಯಾಗಿರಬೇಕೆಂದು ಆಶಿಸಿದ್ದ. ಆಚಾರ್ಯನು ಈ ಸೂಚನೆಗೆ ತನ್ನ ಒಪ್ಪಿಗೆ ನೀಡದಿದ್ದರೂ ಗೌರವಾರ್ಥವಾಗಿ ಆತನಿಗೆ ಈ ಪದವಿಯನ್ನು ಕೊಟ್ಟು ಆ ಮಹಾಶಿಲ್ಪಿಯಿಂದ ಲೋಕೋತ್ತರ ಶಿಲ್ಪವನ್ನು ನಿರ್ಮಿಸಬೇಕೆಂಬ ಆಸೆಯು ಆತನ ಮನದಲ್ಲಿ ಬಲವಾಗಿ ಬೇರು ಬಿಟ್ಟಿತ್ತು. ತನ್ನ ಸಂಕಲ್ಪ ಪೂರ್ತಿಗಾಗಿ ಮಹಾರಾಜನು ದೀಕ್ಷಾ ಬದ್ಧನಾಗಿದ್ದ. ಆದ್ದರಿಂದಲೇ ಜಕ್ಕಣಾಚಾರ್ಯನಿಗೆ, ಆತನ ಶಿಷ್ಯರಿಗೆ, ಇತರ ಸ್ಥಪತಿಗಳಿಗೆ, ಅವರ ಶಿಲ್ಪ ಶಾಲೆಗಳಿಗೆ ಈ ಮಹಾರಾಜನ ಗೌರವ, ಸತ್ಕಾರ, ಆಸರೆಗಳು, ಕಲ್ಪಿಸಿಕೊಟ್ಟ ಸವಲತ್ತುಗಳು ಅಗಣಿತ ವಾಗಿದ್ದವು. ಆ ಕಾಲದಲ್ಲಿ ಕೈಯಲ್ಲಿ ಉಳಿಯನ್ನು ಹಿಡಿಯುವುದನ್ನು ಕಲಿತ ಪ್ರತಿಶಿಲ್ಪಿಯೂ, ಕುಂಚವನ್ನು ಹಿಡಿದ ಪ್ರತಿ ಚಿತ್ರಕಾರನೂ ದೊಡ್ಡ ಶ್ರೀಮಂತನಾಗಿದ್ದನು. ಯಾವುದೋ ಗೋಪುರವನ್ನು ನಿರ್ಮಿಸಿದ ಶಿಲ್ಪಿಗೆ, ದೇವಾಲಯವನ್ನು ನಿರ್ಮಿಸಿದ ಸ್ಥಪತಿಗೆ, ಯಾವುದೋ ದೈವ ಪ್ರತಿಮೆಯನ್ನು ತಯಾರಿಸಿದ ಶಿಲ್ಪಿಗೆ ಕನಕಾಭಿಷೇಕ, ನೂರಾರು ಬಿರುದು ಸನ್ಮಾನಗಳು. ಇದರಿಂದ ಆ ಮಹಾರಾಜನ ಕಲಾರಾಧನೆಯು ಎಷ್ಟು ಗಂಭೀರವಾದುದೆಂಬುದನ್ನು ಯಾರಾದರೂ ಕಲ್ಪಿಸಿಕೊಳ್ಳುವುದು ಸಾಧ್ಯವಿದೆ. ಯಾವುದೇ ಹೊಸ ಕುಶಲ ವಸ್ತುವಿನ ನಿರ್ಮಾಣ ನಡೆಸಿದವನಿಗೆ ಅಥವಾ ಶಿಲ್ಪಕ್ಕೆ ನೂತನ ವ್ಯಾಖ್ಯಾನವನ್ನು ಹೇಳಿದವನಿಗೆ ಬಲ್ಲಾಳ ಮಹಾರಾಜನ ಆಸ್ಥಾನದಲ್ಲಿ ಗೌರವ ದೊರೆಯುತ್ತಿತ್ತು. ರಾಜ್ಯದ ಮೂಲೆ ಮೂಲೆಗಳನ್ನೂ ಶೋಧಿಸಿ ಶಿಲ್ಪಿಗಳನ್ನು ಅಹ್ವಾನಿಸುತ್ತಿದ್ದ. ಅವರಿಗೆ ಬೊಕ್ಕಸದಿಂದ ರೊಕ್ಕವನ್ನು ವೆಚ್ಚಮಾಡಿ ಅನೇಕ ಸವಲತ್ತುಗಳನ್ನು ಕಲ್ಪಿಸಿ ಅವರಿಂದ ಹೊಸ ಹೊಸ ಶಿಲ್ಪಗಳನ್ನು ಮಾಡಿಸುತ್ತಿದ್ದ.

ಹೊಯ್ಸಳ ರಾಜ್ಯದ ನೆರೆಹೊರೆಯ ರಾಜ್ಯಗಳಲ್ಲಿ ಶಿಲ್ಪಕಲೆಯು ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತು. ಪಲ್ಲವ ರಾಜರು ಕಂಚಿ ಮೊದಲಾದ ಪ್ರದೇಶಗಳಲ್ಲಿ ಅದ್ಭುತ ದೇವಾಲಯಗಳನ್ನು, ಗೋಪುರಗಳನ್ನು ನಿರ್ಮಿಸಿದ್ದರು. ಪಾಂಡ್ಯರು ಮಧುರೆ, ಶ್ರೀರಂಗಂಗಳಲ್ಲಿ ತಮ್ಮ ಮತೀಯ ಶಿಲ್ಪಗಳಿಗೆ ಪ್ರೋತ್ಸಾಹವನ್ನು ನೀಡಿದ್ದರು. ಚೋಳ ಭೂಪಾಲರು ಪ್ರಸಿದ್ಧವಾದ ತಂಜಾವೂರಿನ ದೇವಾಲಯ ಇತ್ಯಾದಿಗಳಿಂದ ಶಿಲ್ಪಕಲಾದೇವಿಯ ಚರಣ ಸ್ಪರ್ಶದಿಂದ ಪವಿತ್ರರಾಗಿದ್ದರು. ಮಹಾಬಲಿಪುರದ ಪಾಂಡವರ ಏಕಶಿಲಾರಥ, ಅರುಣಾಚಲದ ಮಂಟಪಗಳು ಹೊರದೇಶಗಳ ಯಾತ್ರಾರ್ಥಿಗಳಿಗೂ ವಿಶೇಷ ಆಕರ್ಷಣೆಯ ಕ್ಷೇತ್ರಗಳಾಗಿದ್ದವು. ಇನ್ನು ಆಂಧ್ರ ದೇಶದಲ್ಲಿ ಅಮರಾವತೀ, ನಾಗಾರ್ಜುನ ಕೊಂಡಗಳಲ್ಲಿಯ ಶಿಲ್ಪಗಳು ಅತ್ಯದ್ಭುತವಾಗಿ ರೂಪುಗೊಂಡು ಕೀರ್ತಿಸ್ಥಂಭಗಳಾಗಿ ನಿಂತವು. ಚಾಲುಕ್ಯರ ಶಿಲ್ಪದ ಹಿರಿಮೆ ಇನ್ನೂ ವೈಶಿಷ್ಟ್ಯಪೂರ್ಣವಾಗಿತ್ತು. ಆಗ ತಾನೇ ಕಾಕತೀಯ ಶಿಲ್ಪಿಗಳ ಶಿಲ್ಪಲಕ್ಷ್ಮಿ ದಕ್ಷಿಣ ಭಾರತದಲ್ಲಿ ತನ್ನ ಪದಾರ್ಪಣೆ ನಡೆಸಿದ್ದಳು. ಸಹಜವಾಗಿ ಕಲಾಪ್ರಿಯನಾದ ಬಲ್ಲಾಳನ ಮನವನ್ನು ಶಿಲ್ಪ-ಕಲೆಗಳು ಆಕ್ರಮಿಸಿದ್ದುದರಲ್ಲಿ

ವಿಶೇಷವೇನೂ ಇಲ್ಲ. ಯಾವುದೇ ವಿಷಯದ ಬಗ್ಗೆಯೂ ಬೆರಳು ತೋರಿಸಿಕೊಳ್ಳಲು ಸಿದ್ಧವಾಗಿಲ್ಲದೆ ಇದ್ದ ಹೊಯ್ಸಳ ರಾಜ್ಯವು ಶಿಲ್ಪ ಕಲೆಯ ವಿಷಯದಲ್ಲಿ ಬಡವಾಗುವುದನ್ನು ಅರಸನು ಸಹಿಸಬಲ್ಲನೇ?

ಆದ್ದರಿಂದಲೇ ತಾನು ಸಿಂಹಾಸನವನ್ನು ಏರಿದ ಮೊದಲ ದಿನಗಳಲ್ಲಿಯೇ ತನ್ನ ರಾಣಿ ಸಹಾಜಾದೇವಿಯ ಪ್ರೇರಣೆಯಿಂದ ರಾಜಧಾನಿಗೆ ಹತ್ತಿರದಲ್ಲಿದ್ದ ದೊಡ್ಡ ಗದ್ದುವಳ್ಳಿಯಲ್ಲಿ ಲಕ್ಷ್ಮೀದೇವಾಲಯವನ್ನು ನಿರ್ಮಿಸಿದ್ದ. ನಲ್ಲೋಜ, ಮಣಿಯೋಜ ಎಂಬ ಶಿಲ್ಪಾಚಾರ್ಯರು ನಾಗಲಿಂಗ ಸ್ಥಪತಿಯ ನೇತೃತ್ವದಲ್ಲಿ ಜಕ್ಕಣಾಚಾರ್ಯನೊಂದಿಗೆ ಚತುರ್ಮಂಟಪ ದೇವಾಲಯವನ್ನು ನಿರ್ಮಿಸಿದ್ದರು. ವೀರಬಲ್ಲಾಳನು ಈ ದೇವಾಲಯದಲ್ಲಿ ಶೈವ-ವೈಷ್ಣವರಿಗೆ ಸಂಬಂಧಿಸಿದ ಉದಂತಗಳನ್ನು ಶಿಲೆಗಳಲ್ಲಿ ಬಿಡಿಸುವಂತೆ ಶಿಲ್ಪಿಗಳನ್ನು ಕೋರಿ ತನ್ನ ಹರಿ-ಹರ ಅಭೇದ ದೃಷ್ಟಿಯನ್ನು ಸಾರಿದ್ದ. ಈ ಲಕ್ಷ್ಮೀ ದೇವಾಲಯದ ಫಲವಾಗಿ ದೊಡ್ಡ ಗದ್ದುವಳ್ಳಿಯು ಬಹುವಾಗಿ ಪ್ರಸಿದ್ಧಿಗಳಿಸಿತ್ತು. ತಾನು ಅರಸನಾದ ಕೂಡಲೇ ಅರಸನು ನಡೆಸಿದ ಈ ಲಕ್ಷ್ಮೀ ಪೂಜೆಯು ಆತನ ರಾಜ್ಯ ವಿಸ್ತರಣಕ್ಕೆ, ಸಂಪತ್ಸಮೃದ್ಧಿಗೆ ನಾಂದಿಯಾಯಿತು. ಈ ವಿಶ್ವಾಸವು ಆತನಲ್ಲಿಯ ಭಕ್ತಿಯನ್ನು ಮತ್ತೂ ಭದ್ರಗೊಳಿಸಿತ್ತು. ಆದರೂ ಜೈನ ಶಿಲ್ಪಗಳನ್ನು ನಿರ್ಮಿಸಿ ಸ್ಥಾಪಿಸಬೇಕೆಂಬ ಆಸೆಯು ಆತನಲ್ಲಿ ಬಹುವಾಗಿತ್ತು.

ಸುಮಾರು ಒಂದು ನೂರೈವತ್ತು ವರ್ಷಗಳ ಹಿಂದೆ ಚಾಲುಕ್ಯ ವಂಶದ ಚಾವುಂಡರಾಯ ಹಲವು ಜೈನ ಶಿಲ್ಪಗಳನ್ನು ಮಾಡಿಸಿ ಸ್ಥಾಪಿಸಿದ್ದ. ಆತನು ಸಂಕಲ್ಪಿಸಿದ್ದ ಕೆಲವು ಮೂರ್ತಿಗಳು ಇನ್ನೂ ಸಿದ್ಧವಾಗದೆ ಹಾಗೆಯೇ ಉಳಿದಿದ್ದವು. ಅವನ್ನು ಪೂರೈಸುವುದು ತನ್ನ ಹೊಣೆಯೆಂದು ಬಲ್ಲಾಳ ಭೂಪತಿ ಭಾವಿಸಿದ. ತನಗೆ ಪ್ರಿಯವಾದ ಜೈನಧರ್ಮವನ್ನು ವಿಸ್ತರಿಸಲು ಶಿಲ್ಪಕಲೆಯನ್ನೇ ಬಳಸಿಕೊಳ್ಳಬೇಕೆಂದು ಆತ ತೀರ್ಮಾನಿಸಿದ್ದ. ಆದ್ದರಿಂದ ಆ ಜೈನ ಶಿಲ್ಪಗಳನ್ನು ಜಗದ್ವಿಖ್ಯಾತ ವಾಗುವಂತೆ ರೂಪಿಸಬೇಕೆಂದು ನಿರ್ಧರಿಸಿದ. ಹಾಗೆ ವಿಶ್ವದ ಗಮನವನ್ನು ಸೆಳೆಯುವ ಶಿಲ್ಪದಿಂದಲೇ ತನ್ನ ಮತವೂ ವಿಶ್ವವಿಖ್ಯಾತಿಯನ್ನು ಗಳಿಸುವುದು ಎಂದು ಆತ ನಂಬಿದ್ದ. ಇದರಿಂದಲೇ ತನ್ನ ಮತ, ಶಿಲ್ಪ ಎರಡೂ ಚಿರಂತನವಾಗಿರಬಲ್ಲವು ಎಂದು ಭಾವಿಸಿದ್ದ.

ಕರ್ನಾಟಕ ರಾಜ್ಯದಲ್ಲಿರುವ ಜೈನ ಕ್ಷೇತ್ರಗಳಲ್ಲಿ ಶ್ರವಣಬೆಳಗೊಳವು ಬಹು ಮುಖ್ಯವಾದ ತೀರ್ಥಕ್ಷೇತ್ರ. ದಕ್ಷಿಣ ಭಾರತದಲ್ಲಿ ಇದಕ್ಕೆ ಸಾಟಿಯಾಗಬಲ್ಲ ಶ್ರೇಷ್ಠ ತೀರ್ಥಕ್ಷೇತ್ರ ಬೇರೊಂದಿಲ್ಲ. ಅನೇಕ ಆಚಾರ್ಯಪುರುಷರು ಈ ಕ್ಷೇತ್ರದಲ್ಲಿ ನಿಂತು ಜೈನ ಧರ್ಮದ ಪ್ರಸಾರವನ್ನು ನಡೆಸಿದ್ದರು. ಸಾವಿರಾರು ಮಂದಿ ಸಾಧಕರು, ಪ್ರಚಾರಕರು ಇಲ್ಲಿಗೆ ಬಂದು ಅನುಷ್ಠಾನ, ತಪೋಯೋಗಗಳನ್ನು ಮಾಡಿ ಧನ್ಯರಾಗಿದ್ದಾರೆ. ಆದ್ದರಿಂದ ಜೈನ ಯಾತ್ರಿಕರಿಗೆ ಶ್ರವಣಬೆಳಗೊಳವು ದಿವ್ಯಪುಣ್ಯ ಕ್ಷೇತ್ರವಾಗಿದೆ. ಚಂದ್ರಗುಪ್ತ ಚಕ್ರೇಶ್ವರನೂ ಕೂಡ ತನ್ನ ಅಂತ್ಯ ಕಾಲದಲ್ಲಿ ಶ್ರವಣಬೆಳಗೊಳದಲ್ಲಿ ತಪಸ್ಸನ್ನು ಆಚರಿಸಿ ತನ್ನ ಜೀವನವನ್ನು ಪರಿಶುದ್ಧಗೊಳಿಸಿಕೊಂಡು ಕೃತಾರ್ಥನಾದುದನ್ನು ಈ ಮೊದಲೇ ಉಲ್ಲೇಖಿಸಿದ್ದೇವೆ. ಆ ಸಾಮ್ರಾಟನು ಇದ್ದ ಪುಟ್ಟ ಗುಡ್ಡವೇ ಚಂದ್ರಗಿರಿ ಎಂದು ಪ್ರಖ್ಯಾತವಾಗಿದೆ. ಅದಕ್ಕೆ ಎದುರಾಗಿ ಇಂದ್ರಗಿರಿ ಎಂಬ ಇನ್ನೊಂದು ಗುಡ್ಡವಿದೆ.

ಇಂತು ಪ್ರಸಿದ್ಧವಾಗಿದ್ದ ಇಂದ್ರಗಿರಿಯ ಮೇಲೆ ಚಾವುಂಡರಾಯ ಗೊಮ್ಮಟೇಶ್ವರ ಶಿಲ್ಪವನ್ನು ನಿರ್ಮಿಸಬೇಕೆಂದು ಸಂಕಲ್ಪಿಸಿದ್ದ. ಆ ಕಾಲದ ಸುಪ್ರಸಿದ್ಧ ಶಿಲ್ಪಿ ಬೊಮ್ಮೋಜ. ಆತನು ಅಮರೇಶ್ವರ

ದೇವಾಲಯವನ್ನು ಕಲಾತ್ಮಕವಾಗಿ ನಿರ್ಮಿಸಿದ್ದು ಮಹಾರಾಜರಿಂದ **ಕಲಿಯುಗ ವಿಶ್ವಕರ್ಮ** ಎಂಬ ಬಿರುದನ್ನು ಪಡೆದುಕೊಂಡಿದ್ದ. ಆ ದೇವಾಲಯದಲ್ಲಿಯ ಸ್ತಂಭಗಳು ವಾಸ್ತುಶಿಲ್ಪದಲ್ಲಿ ಮಹತ್ಕೃತಿಗಳಾಗಿದ್ದವು. ಅವು ಆ ಕಾಲದ ಶಿಲ್ಪಿಗಳ ಗಮನವನ್ನು ಸೆಳೆದಿದ್ದು ಆ ಶಿಲ್ಪಮಾರ್ಗವು ಅವರ ಮೆಚ್ಚುಗೆಯನ್ನು ಪಡೆದಿತ್ತು. ಬಮ್ಮೋಜ ಶಿಲ್ಪಾಚಾರ್ಯ ಅನೇಕ ನೂತನ ಶಿಲ್ಪಗಳನ್ನು ಸೃಷ್ಟಿಸಿದ ಶಿಲ್ಪ ಕಲಾಬ್ರಹ್ಮ. ಅಂತಹ ಮಹಾಶಿಲ್ಪಿಯು ಗೊಮ್ಮಟ ಮೂರ್ತಿಯ ನಿರ್ಮಾಣವನ್ನು ಕೈಗೊಂಡಿದ್ದ. ಆ ಮೂರ್ತಿಯು ಅರವತ್ತು ಅಡಿ ಎತ್ತರವಿತ್ತು. ಗೊಮ್ಮಟ ಮೂರ್ತಿ ದಿಗಂಬರ, ಗುಡ್ಡದ ಶಿಖರದ ಮೇಲಿದ್ದ ಬಂಡೆಗಲ್ಲನ್ನು ಒಡೆದೇ ಬೊಮ್ಮೋಜ ಮತ್ತು ಆತನ ಶಿಷ್ಯರು ಗೊಮ್ಮಟ ಮೂರ್ತಿಯನ್ನು ಕಡೆಯಲು ಪ್ರಾರಂಭಿಸಿದರು. ಚಾವುಂಡರಾಯನ ಅಕಸ್ಮಾತ್ ಮರಣದ ಫಲವಾಗಿಯೂ, ಮತಭೇದಗಳ ಫಲವಾಗಿಯೂ ಈ ಶಿಲ್ಪ ನಿರ್ಮಾಣ ಕಾರ್ಯವು ಸ್ಥಗಿತಗೊಂಡಿತ್ತು. ಆಗ ನಿಂತು ಹೋಗಿದ್ದ ಕೆಲಸವು ವೀರ ಬಲ್ಲಾಳನ ಕಾಲಕ್ಕೂ ಹಾಗೆಯೇ ಉಳಿದು ಬಂದಿತ್ತು.

ಶ್ರವಣ ಬೆಳಗೊಳ ಕ್ಷೇತ್ರವು ಜೈನ ಶಿಲ್ಪಿಗಳ ಕಲಾರಂಗವಾಗಬೇಕೆಂದು ವೀರಬಲ್ಲಾಳ ಸಂಕಲ್ಪ ಮಾಡುವ ಸಮಯಕ್ಕೆ ಸರಿಯಾಗಿ ಅದನ್ನು ನೆರವೇರಿಸಬಲ್ಲ ಶಿಲ್ಪಿ ಕುಲ ಸಾರ್ವಭೌಮನಾದ ಜಕ್ಕಣಾಚಾರ್ಯನು ಭೂಪಾಲನಿಗೆ ಲಭಿಸಿದ. ಇನ್ನು ಯಾವುದರ ಕೊರತೆ? ಶ್ರವಣಬೆಳಗೊಳದ ಇಂದ್ರಗಿರಿ ಚಂದ್ರಗಿರಿಗಳು ಮಾತ್ರವೇ ಏನು ಪಟ್ಟಣದ ಪರಿಸರಗಳು, ಗ್ರಾಮಗಳು, ನಗರಗಳ ಹೊರ-ಒಳ ವಲಯಗಳು ಎಲ್ಲಾ ದಿವ್ಯ ಶಿಲ್ಪಗಳಿಂದ ತುಂಬಿ ಹೋದವು. ಹಾಲುಗಲ್ಲಿನ ವಿಗ್ರಹಗಳು, ಕೃಷ್ಣಶಿಲೆಯ ವಿಗ್ರಹಗಳು, ಕೆಲವು ಆಳೆತ್ತರದಷ್ಟಿದ್ದರೆ ಇನ್ನು ಹಲವು ಎರಡಾಳುಗಳಷ್ಟು ಎತ್ತರವಿರುವವು. ಎಲ್ಲಿ ವಿಗ್ರಹ ನಿರ್ಮಾಣವಾದರೆ ಅವಕ್ಕೆ ಅಲ್ಲಿಯೇ ಆಲಯದ ನಿರ್ಮಾಣವೂ ನಡೆಯುತ್ತಿತ್ತು. ಆಲಯ ನಿರ್ಮಾಣದಲ್ಲಿ ಎರಡುಬಗೆ - ಮೊದಲು ಮೂಲ ವಿಗ್ರಹವನ್ನು ನಿರ್ಮಿಸಿ ಅದರ ಮಾನಗಳನ್ನು ಅನುಸರಿಸಿ ದೇವಾಲಯದ ಮಾನವನ್ನು ನಿರ್ಧರಿಸಿ ನಿರ್ಮಿಸುವುದು, ಅಥವಾ ಮೊದಲು ದೇವಾಲಯವನ್ನು ನಿರ್ಮಿಸಿ ಅದರ ಪ್ರಮಾಣಕ್ಕೆ ಅನುವಾಗುವಂತೆ ಮೂಲ ವಿಗ್ರಹವನ್ನು ನಿರ್ಮಿಸುವುದು. ಈ ಎರಡೂ ಪದ್ಧತಿಗಳಲ್ಲಿ ದೇವಾಲಯಗಳ ನಿರ್ಮಾಣಗಳು ಆಗ ನಡೆಯುತ್ತಿದ್ದವು.

ಚಂದ್ರಗುಪ್ತನ ನಿವಾಸವಾಗಿದ್ದ ಚಂದ್ರಗಿರಿಯ ಮೇಲೆ ಶಾಂತಿನಾಥ, ಪಾರ್ಶ್ವನಾಥ, ಭರತೇಶ, ಭದ್ರಬಾಹು, ಚಂದ್ರಗುಪ್ತ, ಚಾವುಂಡರಾಯ ಮುಂತಾದವರ ಮೂರ್ತಿಗಳನ್ನು ಆಗ್ಗೇ ನಿರ್ಮಾಣ ಮಾಡಿದ್ದರು. ಈ ಎಲ್ಲಾ ವಿಗ್ರಹಗಳೂ ಉತ್ತಮ ಪುರುಷ ಲಕ್ಷಣಗಳಿಂದ ಬಹು ಸುಂದರವಾಗಿದ್ದವು. ಜಕ್ಕಣಾಚಾರ್ಯನು ತನ್ನ ಗುರು ಪ್ರಾರಂಭಿಸಿದ ಗೊಮ್ಮಟೇಶ್ವರ ಮೂರ್ತಿಯನ್ನು ಸ್ವರ್ಗಲೋಕವೂ ಆ ಸೌಂದರ್ಯವನ್ನು ನೋಡಿ ಕರುಬುವಂತೆ ರೂಪಿಸಿದ್ದ. ಗೊಮ್ಮಟೇಶ್ವರ ಮೂರ್ತಿಯು ಅಷ್ಟು ಬೃಹತ್ತಾದ್ದಾಗಿದ್ದರೂ ಅದರ ಸೌಂದರ್ಯದಲ್ಲಿ ಎಲ್ಲಿಯೂ ಸ್ವಲ್ಪ ಕೊಂಕಾಗಲಿ, ಕೊರತೆಯಾಗಲಿ ಇರಲಿಲ್ಲ. ಕೈಕಾಲುಗಳು ಶಿಲ್ಪ ಶಾಸ್ತ್ರಗಳ ಲಕ್ಷಣಗಳಿಂದ ಬಹು ಅಂದವಾಗಿ ರೂಪುಗೊಂಡಿದ್ದವು. ಮೂರ್ತಿಯಲ್ಲಿ ಶಾಂತ ರಸವು ತುಂಬಿ ಹರಿಯುತ್ತಿತ್ತು. ಸುಂದರವಾದ ವದನ, ಮುದ್ದಾದ ತುಟಿಗಳು, ವಿಶಾಲವಾದ ಹಣೆ, ಕಾಮನ ಬಿಲ್ಲಿನಂತಹ ಕಣ್ಣು ಹುಬ್ಬು. ಆಕರ್ಷಕವಾದ ಚುಬುಕ, ತುಂಬಿದ ಕೆನ್ನೆಗಳು, ಆ ಸೌಂದರ್ಯವನ್ನು ನೋಡಿಯೇ ಆಸ್ವಾದಿಸಬೇಕು. ಆ ಮಹಾಮೂರ್ತಿಯ ಸುತ್ತಲೂ ಆ ಬೆಟ್ಟದ ಕಲ್ಲಿನಲ್ಲಿ ಸಣ್ಣ ಸಣ್ಣ ಆಲಯಗಳನ್ನು ರೂಪಿಸಿ ಅವುಗಳಲ್ಲಿ ಜೈನ

ತೀರ್ಥಂಕರರನ್ನು, ಜೈನ ಮತದ ಚಾರಿತ್ರಿಕ ಪುರುಷರನ್ನು ಪ್ರತಿಷ್ಠಿಸಿದ್ದರು. ಈ ಪ್ರಾಕಾರ ಮತ್ತು ಅಲ್ಲಿಯ ಭವನಗಳ ಮೂಲಕ ಸುಮಾರು ಹತ್ತು ಗಜಗಳ ಎತ್ತರಕ್ಕೆ ಏರುವುದು ಸಾಧ್ಯ ಎಂದರೆ ಗೊಮ್ಮಟ ಮೂರ್ತಿಯ ಪೃಷ್ಠದವರೆಗವಿಗೂ ನಾವು ಏರಬಹುದು. ಲೋಕದ ದೃಷ್ಟಿಯನ್ನು ಸೆಳೆಯಲೆಂದೇ ಇಂತಹ ಭವ್ಯ ಬೃಹತ್ ಮೂರ್ತಿಯನ್ನು ಶಿಲ್ಪಿಗಳು ನಿರ್ಮಿಸಿದ್ದಾರೆ. ಅದು ಸರಿ, ಇಂತಹ ಬೃಹತ್ ವಿಗ್ರಹಕ್ಕೆ ಪೂಜಾರಾಧನೆಗಳನ್ನು ನಡೆಸುವುದು ಹೇಗೇ ? ನಿತ್ಯವೂ ಪಾದ ಪೂಜೆ ಮಾತ್ರವೇ ನಡೆಯಬೇಕು. ಹನ್ನೆರಡು ವರ್ಷಗಳಿಗೆ ಒಮ್ಮೆ ಮಾತ್ರ ಹಸ್ತ, ಕಟಿ, ಶಿರೋ ಪೂಜೆಗಳು ನಡೆಯಬೇಕು. ಇದು ಮಹಾವೈದಿಕ ಶಿಲ್ಪಾಚಾರ್ಯ ಆಗ ಮಾಡಿದ ನಿಯಮ. ಇಂದಿಗೂ ಹನ್ನೆರಡು ವರ್ಷಗಳಿಗೊಮ್ಮೆ ಮಾತ್ರವೇ ಗೊಮ್ಮಟೇಶ್ವರನಿಗೆ ಮಹಾಮಸ್ತಕಾಭಿಷೇಕ ನಡೆಸುತ್ತಾರೆ. ಅದೇ ಶಿರೋ ಪೂಜೆ.

# ೩

ಶ್ರವಣ ಬೆಳಗೊಳದಲ್ಲಿಯ ಶಿಲ್ಪ ವೈಭವವು ನಾಡಿನಲ್ಲಿ ದೊಡ್ಡ ಬದಲಾವಣೆಯನ್ನು ಮೂಡಿಸಿತು. ಕರ್ನಾಟಕದಲ್ಲಿ ಈ ರೀತಿಯ ಭವ್ಯವೂ, ಬೃಹತ್ತೂ ಆಗಿದ್ದ ಮೂರ್ತಿ ಅತಿ ಅಪರೂಪದ್ದಾಗಿತ್ತು. ಸಾಂಚಿ, ಸಾರನಾಥ, ಅಜಂತಾ, ಎಲ್ಲೋರಾಗಳಲ್ಲಿ ಹಿಂದೂ ಬೌದ್ಧ ಶಿಲ್ಪಕಲೆಗಳು ಜೊತೆಜೊತೆಯಾಗಿ ಅರಳಿದ್ದು ಅವೆಲ್ಲಾ ಲೋಕೋತ್ತರ ಶಿಲ್ಪ ಸೌಂದರ್ಯವನ್ನು ತಮ್ಮಲ್ಲಿ ಅಡಗಿಸಿಕೊಂಡಿರುವುದನ್ನು ಜನರು ಕೇಳಿದ್ದರಾದರೂ ನೋಡಿದ್ದವರು ಬಹು ಸ್ವಲ್ಪ ಮಾತ್ರವೇ. ಆದರೆ ಆ ಶಿಲ್ಪಗಳ ಬಗ್ಗೆ, ಅಲ್ಲಿಯ ವಿಶೇಷಗಳ ಬಗ್ಗೆ, ದೇವಾಲಯ, ಗುಹೆಗಳ ನಿರ್ಮಾಣದ ಬಗ್ಗೆ ಅನೇಕವಾಗಿ ಕಥೆಗಳನ್ನು ಕೇಳಿದ್ದರು. 'ಅಂದು ಉತ್ತರದಲ್ಲಿ ಬೌದ್ಧ ಶಿಲ್ಪಗಳು ತಲೆ ಎತ್ತಿ ನಿಂತಿದ್ದರಿಂದ ಇಂದು ದಕ್ಷಿಣದಲ್ಲಿ ಜೈನಶಿಲ್ಪವು ಬೃಹದಾಕಾರವಾಗಿ ಟಿಸಿಲೊಡೆದಿದೆ. ಅರವತ್ತೇಳು ಅಡಿಗಳ ಏಕ ಶಿಲಾ ವಿಗ್ರಹವನ್ನು ನಾವೆಂದಾದರೂ ಕೇಳಿದ್ದೇವೆಯೇ ? ಕಂಡಿದ್ದೇವೆಯೇ ? ಮಹಾಕಲಾರಾಧಕರಾದ ಬಲ್ಲಾಳರ ಔದಾರ್ಯದಿಂದ ಅಪರ ವಿಶ್ವಕರ್ಮನಾದ ಜಕ್ಕಣಾಚಾರ್ಯನ ಕಲಾ ಕೌಶಲ್ಯದಿಂದ ಗುಹೆಯಲ್ಲಿ ನಿದ್ರಿಸುವ ಈ ಶಿಲೆಯಲ್ಲಿ ಅನುಪಮ ಸೌಂದರ್ಯವನ್ನು ಪ್ರತಿಷ್ಠಿಸಿ ದೇವ ಕಳೆಯನ್ನು ಇಳೆಯಲ್ಲಿ ಸ್ಥಾಪಿಸಿದ್ದಾರೆ. ಭೂಮಿಯನ್ನು ಸಿಂಗರಿಸಲು ಅವತರಿಸಿರುವ ಮಹಾಪ್ರಭು. ಅವರ ಜೈನ ಮತವು ಬಹುದೊಡ್ಡ ಮತವೇ. ಅದನ್ನು ಹೀಗೆ ವ್ಯಾಪಕವಾಗುವಂತೆ ಮಾಡಲು ಎಷ್ಟೆಲ್ಲಾ ಶ್ರದ್ಧೆ ಬಲ್ಲಾಳ ಮಹಾರಾಜರಿಗೆ !' ಎಂದು ಜನರು ಹಲವು ಬಗೆಗಳಲ್ಲಿ ಮಾತನಾಡಿಕೊಳ್ಳುತ್ತಿದ್ದರು.

ಜನರು ಹೇಗಾದರೂ ಮಾತನಾಡಿಕೊಳ್ಳಲಿ, ಬಲ್ಲಾಳ ಮಹಾರಾಜರ ಮುಖ್ಯ ಆಸೆ ತಮ್ಮ ಪಟ್ಟದರಸಿ ಶಾಂತಲಾದೇವಿಯನ್ನು ಜೈನಮತಕ್ಕೆ ಪರಿವರ್ತಿಸಿಕೊಳ್ಳುವುದು. 'ಕಿರಿಯರಾಣಿ ಕೀರ್ತಿಮತಿಯಂತೆ ಹಿರಿಯ ರಾಣಿಯೂ ಜೈನಧರ್ಮವನ್ನು ಸ್ವೀಕರಿಸಿದರೆ ಎಷ್ಟು ಚೆನ್ನಾಗಿರುತ್ತದೆ! ತನ್ನ ರಾಣಿಯನ್ನೇ ಜೈನ ಮತಕ್ಕೆ ತಾನು ಪರಿವರ್ತಿಸಲಾರದೆ ಹೋದರೆ ಇನ್ನು ಪ್ರಜೆಗಳು ಹೇಗೆ ತಾನೇ ಬದಲಾಗಲು ಸಾಧ್ಯ ? ಮೊದಲಿಗೆ ಪಟ್ಟದರಸಿಯ ಮನಸ್ಸನ್ನು ಪರಿವರ್ತನೆ ಮಾಡಬೇಕು'

ಮುಂಜಾನೆಯಲ್ಲಿಯೇ ಶಾಂತಲಾದೇವಿ, ಬಲ್ಲಾಳ ಇಬ್ಬರೂ ಉಚಿತ ಪರಿವಾರದೊಂದಿಗೆ ಶ್ರವಣ ಬೆಳಗೊಳಕ್ಕೆ ಬಂದರು. ದೂರದಿಂದಲೇ ದರ್ಶನ ನೀಡುವ ಗೋಮಟೇಶ ಮೂರ್ತಿಯನ್ನು ಶಾಂತಲಾದೇವಿಗೆ ಭೂಪಾಲ ತೋರಿಸಿದ. ಅದುವರೆವಿಗೂ ಆಕೆ ಆ ಮೂರ್ತಿಯನ್ನು ಕಂಡಿರಲಿಲ್ಲ. ಅದಕ್ಕೆ ಕಾರಣ ಆ ಮೂರ್ತಿ ಪೂರ್ಣವಾಗಿರಲಿಲ್ಲ ಎಂಬುದೇ. 'ಇಷ್ಟೊಂದು ಎತ್ತರದ ಬೆಟ್ಟದ ಶಿಖರವನ್ನು ಒಡೆದು ಅದರಲ್ಲಿ ಅರವತ್ತು ಅಡಿಗಳ ಎತ್ತರದ ವಿಗ್ರಹವನ್ನು ನಿರ್ಮಿಸುವುದು ಎಂದರೆ ಸಾಧಾರಣವಾದ ಕೆಲಸವೇ ? ಸಾಧಾರಣ ಮನುಷ್ಯರು ಮಾಡಬಹುದಾದ ಕೆಲಸವೇ? ಇದು ಈ ಶಿಲ್ಪಾಚಾರ್ಯನು ದೈವಾಂಶ ಸಂಭೂತನಾಗಿರಬೇಕು. ಅಥವಾ ಅನುಗಾಲ ಮಂತ್ರ ಸಾಧನೆಯಿಂದ ಯಾವುದೋ ದೇವತೆಯನ್ನು ವಶಪಡಿಸಿಕೊಂಡಿರುವ ಸಿದ್ಧನಿರಬೇಕು. ಇಲ್ಲದೆ

ಇಂಥಾ ಶಿಲ್ಪವನ್ನು ಸೃಷ್ಟಿಸುವುದು ಸಾಧಾರಣವೇನೂ ಅಲ್ಲ. ಕಲ್ಲುಗಳಿಗೆ ನಿದ್ರಾವಸ್ಥೆಯೊಂದಿದೆಯಂತೆ. ಆಗ ಅವು ಮೇಣದಂತೆ ಮೆದುವಾಗಿರುತ್ತವೆಯಂತೆ. ಈ ಶಿಲಾರಹಸ್ಯಗಳನ್ನು ಅರಿತವನಿರಬೇಕು!' ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತಾ ಆ ಸುಂದರ ಮೂರ್ತಿಯ ಪಾದಗಳ ಬಳಿ ನಿಂತು ಒಮ್ಮೆ ತಲೆಎತ್ತಿ ಮೇಲೆ ನೋಡಿದಳು. ಕಣ್ಣು ಗರ್ರನೆ ಸುತ್ತಿತು. ನೀಲ ನಭದಲ್ಲಿ ನಕ್ಷತ್ರ ಗಳೊಂದಿಗೆ ಮಾತನಾಡುತ್ತಿರುವ ಶಿಖರ ಸದೃಶ ಶಿರ. ಮುಖದಲ್ಲಿ ಕೋಟಿಚಂದ್ರರು ಕುಳಿತಿರುವಂತಹ ಅದ್ಭುತವಾದ ಕಾಂತಿ. ತುಟಿಗಳಿಂದ ಧುಮ್ಮಿಕ್ಕುತ್ತಿರುವ ಮಂದಹಾಸದ ಸೆಳವಿನಲ್ಲಿ ಕಾಮಕ್ರೋಧಗಳೆಲ್ಲಾ ಕೊಚ್ಚಿ ಹೊಗುತ್ತಿವೆ. ವಿಶ್ವವನ್ನೆಲ್ಲಾ ಕಾಪಾಡುವ ಬಲಹೊಂದಿರುವ ಬಾಹುಗಳು ಸುಂದರವಾಗಿರುವಂತೆ ಬಲಿಷ್ಠವೂ ಆಗಿವೆ. ಆದ್ದರಿಂದಲೇ ಸ್ವಾಮಿಯನ್ನು ಬಾಹುಬಲಿ ಎಂದು ಕರೆದರೇನೋ ? ಎಲ್ಲಾ ವಿಶ್ವಗಳೂ ಅಡಗಿವೆಯೇನೊ ಎನಿಸುವಂತಹ ವಿಶಾಲವಾದ ಹೊಟ್ಟೆ. ಭೂಮಿಯನ್ನೆಲ್ಲಾ ಆವರಿಸಿ ಪುನೀತಗೊಳಿಸಿದೆ ಎನಿಸುವಂತಹ ವಿಶಾಲ ಪಾದಗಳು ! ..... ತನ್ನ ಪ್ರಾಣೇಶ್ವರನ ಕಲಾ ಪ್ರೀತಿಯನ್ನು ಮೆಚ್ಚಿ ಒಮ್ಮೆ ಆತನತ್ತ ನೋಡಿದಳು. ಅರಸನೂ ಗೊಮ್ಮಟನ ಗಂಭೀರ ಮೂರ್ತಿಯನ್ನೇ ತನ್ಮಯನಾಗಿ ನೋಡುತ್ತಿದ್ದ.

ನಂತರ ಇಬ್ಬರೂ ಚಂದ್ರಗಿರಿಯ ಮೇಲೆ ಇದ್ದ ಹಲವು ಶಿಲ್ಪಗಳನ್ನು ನೋಡಿದರು. ಇವನ್ನೆಲ್ಲಾ ನೋಡಿದ ಶಾಂತಲೆಯ ಮನದಲ್ಲಿ ಹೊಸ ಬಯಕೆಯೊಂದು ತಲೆ ಎತ್ತಿತು. 'ಈ ಶಿಲ್ಪವೇನೋ ಮಹತ್ತರವಾದುದೇ, ಆದರೇನು ಎಲ್ಲಾ ಅವೈದಿಕವೇ. ಹಸುವಿನ ಹಾಲು ಪವಿತ್ರವಾದುದೇ. ಆದರೆ ಅದನ್ನು ಚರ್ಮದ ಚೀಲದಲ್ಲಿ ತುಂಬಿದರೆ ಮಾನ್ಯವೇ ? ಈ ಜಗನ್ಮೋಹನ ಶಿಲ್ಪದಿಂದ ಹಿಂದೂ ದೇವರನ್ನು ರೂಪಿಸಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ? ಈ ಜಕ್ಕಣಾಚಾರ್ಯನಿಂದಲೇ ಹೈಂದವ ಶಿಲ್ಪವನ್ನೂ ಮಾಡಿಸಬೇಕು. ಆ ಶಿಲ್ಪಿಯ ಸಹಾಯದಿಂದಲೇ ಅರಸರನ್ನು ವೈದಿಕ ಮತದ ತೆಕ್ಕೆಗೆ ತೆಗೆದುಕೊಳ್ಳಬೇಕು. ಇಂತಹ ಅಪೂರ್ವ ಶಿಲ್ಪಿಗಳು ಅಪರೂಪಕ್ಕೆ ಒಬ್ಬಿಬ್ಬರು ಮಾತ್ರವೇ ದೊರೆಯುತ್ತಾರೆ. ಮಹಾಶಿಲ್ಪಿಗಳೂ, ಮಹಾಕವಿಗಳೂ ಕೇವಲ ಭುವನದ ಭಾಗ್ಯದಿಂದ ಮಾತ್ರವೇ ಯುಗಕ್ಕೊಮ್ಮೆ ಹುಟ್ಟುತ್ತಾರಂತೆ. ಅಂತಹವರು ಹುಟ್ಟಿದಾಗ ಅವರನ್ನು ಬಳಸಿಕೊಳ್ಳುವ ಹೊಣೆಗಾರಿಕೆಯು ಅರಸರು ಮತ್ತು ಪ್ರಜಾ ನಾಯಕರಿಗೆ ಸೇರಿರುತ್ತದೆ. ತನ್ನ ನಾಥನು ಈ ಶಿಲ್ಪಿಯನ್ನು ಬಹು ಯಶಸ್ವಿಯಾಗಿಯೇ ಬಳಸಿಕೊಂಡಿದ್ದಾನೆ. ಈ ಶಿಲ್ಪಿಯನ್ನು ಹೈಂದವ ಶಿಲ್ಪಗಳ ಕಂಡರಿಕೆಗೆ ಬಳಸಿಕೊಳ್ಳುವುದು ಶಿಲ್ಪ ಕಲಾಭಿಮಾನಿಯಾದ ತನ್ನ ಕನಿಷ್ಠ ಧರ್ಮ. ಅಮರಾವತಿ, ನಾಗಾರ್ಜುನ ಕೊಂಡಗಳಲ್ಲಿ ಶಾತವಾಹನ ವಂಶದ ರಾಣಿಯರು, ಇಕ್ಷ್ವಾಕು ವಂಶದ ರಾಣಿಯರು ತಮ್ಮ ಸೇವೆಯಾಗಿ ಮಹತ್ತರ ಶಿಲ್ಪಗಳನ್ನು ನಿರ್ಮಿಸಿಕೊಟ್ಟಿಲ್ಲವೇ ? ಆದ್ದರಿಂದ ರಾಣಿಗಳಿಗೆ ಈ ಶಿಲ್ಪ ನಿರ್ಮಾಣವು ಹೊಸದಲ್ಲ. ಈ ರಹಸ್ಯವನ್ನು ಅರಿತ ನನ್ನ ಸಪತ್ನಿ ಸಹಜಾದೇವಿ ಲಕ್ಷ್ಮೀದೇವಿಯನ್ನು ಪ್ರತಿಷ್ಠೆಮಾಡಿಸಿ ಧನ್ಯಳಾಗಿದ್ದಾಳೆ !' ಎಂದು ತನ್ನಲ್ಲಿ ಭಾವಿಸಿಕೊಂಡು ಆಕೆ ತನ್ನ ಪ್ರಿಯನನ್ನು ಉದ್ದೇಶಿಸಿ ಇಂತು ನುಡಿದಳು :

"ನೀವು ಸರ್ವ ಸಮರ್ಥರು. ಸರ್ವಾಧಿಕಾರಿಗಳು, ಕಲಾದೇವಿಯ ಪೂಜಕರು. ಆದ್ದರಿಂದಲೇ ಈ ರೀತಿಯ ಅದ್ಭುತ ಶಿಲ್ಪಗಳು ಮೂಡಿವೆ. ನನಗೂ ಕೆಲವು ಶಿಲ್ಪಗಳನ್ನು ಮಾಡಿಸಬೇಕೆಂಬ ಆಸೆ ಇದೆ. ಆದರೆ ನನಗೆ ಸ್ವಾತಂತ್ರ್ಯವಿಲ್ಲ. ನಿಮ್ಮ ಆಜ್ಞಾನುವರ್ತಿ. ಸ್ತ್ರೀಗೆ ಸ್ವಾತಂತ್ರ್ಯ ಇಲ್ಲ ಎಂದು

ಹೇಳುತ್ತಾರೆ. ಧನಾಗಾರವು ನನ್ನ ಅಧೀನದಲ್ಲಿಲ್ಲ. ಆದ್ದರಿಂದ ನನ್ನ ಬಯಕೆಯು ಈಡೇರುವುದು ಹೇಗೆ ?"

ಶೀಲವತಿಯೂ, ಭಕ್ತಳೂ, ಪವಿತ್ರಳೂ ಆದ ರಾಣಿಯ ಈ ಅಸಹಾಯಕ ಆಲಾಪ ಅರಸನ ಮನಸ್ಸನ್ನು ಕರಗಿಸಿತು. "ದೇವೀ, ನಮ್ಮಲ್ಲಿ ನಿಮಗೆ ಇಷ್ಟು ಮಾತ್ರದ ಸ್ವಾತಂತ್ರ್ಯವೂ ಇಲ್ಲವೇ ? ಇಂದೇನೋ ಹೊಸದಾಗಿ ಮಾತನಾಡುತ್ತಿರುವಿರಲ್ಲಾ. ಹೆಂಡತಿಯ ಬಯಕೆಯನ್ನು ತೀರಿಸದ ಗಂಡನೇಕೆ ಇರಬೇಕು ? ನೀವು ಪಟ್ಟದರಸಿ. ಉತ್ತಮರು. ಸ್ವಾರ್ಥದ ಬಯಕೆಗಳು ನಿಮ್ಮಲ್ಲಿ ಮೂಡುವುದಿಲ್ಲ. ನಿಮ್ಮ ಸಂಕಲ್ಪವನ್ನು ನೆರವೇರಿಸಿಕೊಳ್ಳಲು ಬೊಕ್ಕಸದ ಮೇಲೆ ನಿಮಗೆ ಸಂಪೂರ್ಣ ಅಧಿಕಾರವಿದೆ. ನಿಮಗೆ ಇಷ್ಟ ಬಂದಂತೆ ಉಪಯೋಗಿಸಬಹುದು. ಇನ್ನೂ ಶ್ರೇಷ್ಠವಾದ ಜೈನ ಶಿಲ್ಪಗಳನ್ನು ರೂಪಿಸುವ ಬಯಕೆ ನಿಮ್ಮಲ್ಲಿದ್ದರೆ ಶಿಲ್ಪಚಕ್ರವರ್ತಿ ಜಕ್ಕಣಾಚಾರ್ಯರು ಅವರ ಶಿಷ್ಯರು ಅದನ್ನು ನೆರವೇರಿಸಿ ಕೊಡುತ್ತಾರೆ. ದೇವೀ, ನಾವು ಇನ್ನೂ ತಡಮಾಡಬಾರದು. ರಾಜ್ಯದಲ್ಲಿ ಅಲ್ಲಲ್ಲಿ ಜೈನ ಮತದ ವಿರೋಧ ತಲೆಎತ್ತಿದೆ. ಇದಕ್ಕೆ ಚೋಳರಾಜ್ಯದ ಕಡೆಯಿಂದ ನೆರವು ದೊರೆಯುತ್ತಿದೆಯಂತೆ ಆದ್ದರಿಂದ ನಾವು ಕೂಡಲೇ ಕರ್ತವ್ಯ ಪರಾಯಣರಾಗಬೇಕು. ಬಹುಕಾಲದ ನಂತರ ನಮಗೆ ದೊರೆತಿರುವ ಪುಟ್ಟ ಮಗುವಿಗೂ ಸಾಕಷ್ಟು ಅನುಕೂಲಗಳೂ ಕಲ್ಪಿತವಾಗಿಲ್ಲ. ಆದ್ದರಿಂದ ನಾಳೆಯೇ ನಾವು ದ್ವಾರಸಮುದ್ರವನ್ನು ಸೇರಿಕೊಳ್ಳಬೇಕು. ಇನ್ನೊಮ್ಮೆ ಬಂದು ಈ ಶಿಲ್ಪಗಳನ್ನು ಸಾವಧಾನವಾಗಿ ಅವಲೋಕಿಸೋಣ." ಎಂದು ಹೇಳಿದ ಅರಸ.

"ನಾನೂ ಅರಮನೆಗೆ ಹಿಂತಿರುಗಬೇಕೆಂಬ ಆತುರದಿಂದಿದ್ದೇನೆ. ಕೀರ್ತಿಮತಿಯ ಆರೋಗ್ಯವು ಚೆನ್ನಾಗಿರಲಿಲ್ಲ. ಆಕೆ ಗರ್ಭಿಣಿಯಾಗಿರಬೇಕೆನಿಸುತ್ತದೆ. ನಮ್ಮ ನರಸಿಂಹದೇವನಿಗೆ ತಮ್ಮನೊಬ್ಬ ಬಂದರೆ ಒಳ್ಳೆಯದಲ್ಲವೇ. ಆದ್ದರಿಂದ ಆಕೆಯ ಆರೈಕೆ ನೋಡಿಕೊಳ್ಳಬೇಕಾಗಿದೆ" ಎಂದಳು ಶಾಂತಲಾ ದೇವಿ.

ತನ್ನ ಜಿನಾರಾಧನೆಯ ಫಲವಾಗಿ ತನ್ನ ಚಿಕ್ಕರಾಣಿ ತಾಯಿಯಾಗುತ್ತಿದ್ದಾಳೆ ಎಂಬುದು ಸಂತೋಷದ ಸಂಗತಿಯೇ ಆಗಿತ್ತು. ತನಗೆ ಲಭಿಸುತ್ತಿದ್ದ ಶುಭಗಳ ಬಗ್ಗೆ ಮಹಾರಾಜರು ಬಹು ತೃಪ್ತಿಯಿಂದಲೇ ಇದ್ದರು.

# ೪

ಅನುಕೂಲನಾದ ಪತಿ ದೊರೆತರೆ ಸತಿಯ ಬಯಕೆಗಳೆಲ್ಲಾ ಈಡೇರುತ್ತವೆ. ಶಾಂತಲಾ ದೇವಿಯು ಯೋಗ್ಯನಾದ ತನ್ನ ಪತಿಯನ್ನು ಅನುಸರಿಸುತ್ತಿದ್ದಳು. ಅವರಿಬ್ಬರ ಮನದಲ್ಲಿ ಅಂತರವಿರಲಿಲ್ಲ. ಅವರ ಸಂಸಾರ ಯಾತ್ರೆಯು ಯಾವುದೇ ಭಿನ್ನತೆಗಳಿಗೆ ಅವಕಾಶವಿಲ್ಲದೆ ನಿರಾತಂಕವಾಗಿ ಸಾಗಿಹೋಗುತ್ತಿತ್ತು. ಆಕೆಯ ಜಪ, ದಾನ, ವ್ರತಗಳ ಫಲವಾಗಿ ರಾಜಕುಮಾರನೊಬ್ಬನು ಹುಟ್ಟಿದ್ದ. ಇನ್ನು ಕೊರತೆ ಏನು ? ವೈದಿಕ ಮತದ ವಿಸ್ತರಣೆ ನಡೆಯಬೇಕೆಂಬುದು ಮಾತ್ರವೇ ಈಗ ಆಕೆಯ ಮನದ ಆಸೆಯಾಗಿತ್ತು. ಅದು ಪೂರೈಸಲು ಕೂಡ ಈಗ ಅವಕಾಶಗಳು ರೂಪುಗೊಂಡಿದ್ದವು. ಆ ಆಸೆಯನ್ನು ನೆರವೇರಿಸಲು ಮಹಾರಾಜರೇ ಅಂಗೀಕರಿಸಿದ್ದರಲ್ಲಾ !

ಶಾಂತಲಾದೇವಿಯು ಜಕ್ಕಣಾಚಾರ್ಯನ ಮೂಲಕ ಅರಸರಲ್ಲಿ ವೇದಮತದ ಪ್ರೀತಿಯನ್ನು ಬಿತ್ತಲು ಪ್ರಯತ್ನಿಸಿದಳು. ಆದರೆ ಈ ಕೆಲಸಕ್ಕೆ ಶಿಲ್ಪಾಚಾರ್ಯ ಅಂಗೀಕರಿಸಲಿಲ್ಲ "ಅವರು ಮಹಾರಾಜರು. ರಾಜ್ಯದ ಸಾಧಕ ಬಾಧಕಗಳನ್ನು ಚೆನ್ನಾಗಿ ಬಲ್ಲವರು. ಮತರಾಜಕೀಯಗಳಿಗೆ ಅತೀತವಾದ ಕಲಾಸೇವೆಯನ್ನು ಮಾಡಿ ಕೃತಕೃತ್ಯತೆಯನ್ನು ಪಡೆಯಬೇಕಾಗಿರುವ ಶಿಲ್ಪಿಯಾದ ನಾನು ಈ ವ್ಯವಹಾರದಲ್ಲಿ ಪ್ರವೇಶಿಸುವುದು ಸೂಕ್ತವಲ್ಲ. ಈ ಮಾತುಗಳನ್ನು ಕೇಳಿದ ಮಹಾರಾಜರ ಮನಸ್ಸಿನಲ್ಲೂ ನಾನಾ ಪ್ರಶ್ನೆಗಳು ಕಾಣಿಸಿಕೊಳ್ಳಬಹುದು. ಕಾಲವೇ ಎಲ್ಲಕ್ಕೂ ಪರಿಹಾರವನ್ನು ಕೊಡುತ್ತದೆ" ಎಂದು ಹೇಳಿ ಬಿಟ್ಟ.

ಶಾಂತಲಾದೇವಿಯ ಸಂಕಲ್ಪ ಕರ್ನಾಟಕದಲ್ಲಿ ಹೈಂದವ ಶಿಲ್ಪವನ್ನು ರೂಪಿಸುವುದು. ವೇದ, ಪುರಾಣ, ಇತಿಹಾಸಗಳನ್ನು ಓದದೆಯೇ ಅರಿಯಲು ಸಾಧ್ಯವಾಗಬಹುದಾದಂತಹ ಅಪೂರ್ವ ಶಿಲ್ಪ ಸಂಚಯವನ್ನು ರೂಪಿಸಬೇಕು. ಶಿಲ್ಪಗಳನ್ನು ಅಪೂರ್ವ ರೀತಿಯಲ್ಲಿ ಮಾಡಿಸಬೇಕು. ಈಗ ಜಕ್ಕಣಾಚಾರ್ಯರು ಮಹಾರಾಜರಿಗೆ ಪೂರ್ಣವಾಗಿ ನೆರವಾಗುತ್ತಿದ್ದಾರೆ. ಅವರು ಮನಸ್ಸು ಮಾಡಿದರೆ ಆಗದೆ ಉಳಿಯುವುದಾದರೂ ಏನಿದೆ ? ಅವರಿಗೆ ಸಾಕಷ್ಟು ಮಂದಿ ಶಿಷ್ಯರಿದ್ದಾರೆ. ಅವರಲ್ಲಿ ಹಲವರು ಬಹುಪರಿಣತರಾಗಿದ್ದಾರೆ. ಶಿಲ್ಪಕಲೆಯನ್ನು ಆಮೂಲಾಗ್ರವಾಗಿ ಬಲ್ಲವರು. ದೇವಾಲಯಗಳ ಕಂಭಗಳ ಮೇಲೆ, ಗೋಡೆಗಳ ಮೇಲೆ ಅನೇಕ ಭಾವ-ಭಂಗಿಗಳನ್ನು ಚಿತ್ರಿಸಬಲ್ಲ ರಸ ಸಿದ್ಧರು. ಕಲ್ಲುಗಳಲ್ಲಿ ಇತಿಹಾಸವನ್ನು ಉಲಿಸಬಲ್ಲ ಶಕ್ತಿವಂತರು. ಚಿತ್ರ-ವಿಚಿತ್ರ ಜಗತ್ತುಗಳನ್ನೇ ಶಿಲೆಗಳಲ್ಲಿ ಕಂಡರಿಸಿ ತೋರಿಸಬಲ್ಲವರು. ಅಪರ ಬ್ರಹ್ಮರು. ಇನ್ನು ಕೊರತೆಯಾದರೂ ಎಲ್ಲಿಯದು?

ಶಾಂತಲಾದೇವಿಗೆ ತನ್ನ ಎರಡು ವಂಶಗಳ ಪೂರ್ವ ಪುರುಷರ ಬಗ್ಗೆ ಭಕ್ತಿ ಗೌರವಗಳಿದ್ದವು. ತಾನು ಸೇರಿದ್ದು ಹೊಯ್ಸಳವಂಶ. ತಮ್ಮ ಹೊಯ್ಸಳ ರಾಜ್ಯ, ಹೊಯ್ಸಳ ವಂಶದ ಪೂರ್ವ ಪುರುಷರ ಚರಿತ್ರೆ, ರಾಜ್ಯ ಸ್ಥಾಪನೆಗೊಂಡ ಚರಿತ್ರೆಯು ಅದ್ಭುತವಾದದ್ದು.

ಪೂರ್ವದಲ್ಲಿ ಸಳ ಎಂಬ ದೊರೆ ಶಶಕ ಪುರವನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯಪರಿಪಾಲನೆ ಮಾಡುತ್ತಿದ್ದ. ಧರ್ಮಾತ್ಮನು, ಪ್ರಜೆಗಳನ್ನು ತನ್ನ ಮಕ್ಕಳೆಂದೇ ಭಾವಿಸಿದ್ದ. ಸಳನಿಗೆ ನಗರದ ಹೊರವಲಯದಲ್ಲಿದ್ದ ಅರಣ್ಯದಲ್ಲಿ ಇದ್ದ ವಸಂತೀ ದೇವಿ ಇಷ್ಟದೈವ. ಒಮ್ಮೆ ಆಲಯಕ್ಕೆ ಹೋಗಿ ಹಿಂತಿರುಗುತ್ತಿದ್ದ. ಅಷ್ಟರಲ್ಲಿ ಹುಲಿಯೊಂದು ಘರ್ಜಿಸುತ್ತಾ ದೇವಾಲಯದ ಕಡೆಗೆ ಓಡಿ ಬರುತ್ತಿತ್ತು. ಆ ಹುಲಿಯನ್ನು ನೋಡುತ್ತಲೇ ತನ್ನ ಆಯಸ್ಸು ಮುಗಿಯಿತು ಎಂದುಕೊಂಡ ಆ ಆಲಯದ ಅರ್ಚಕ, ಬಳಿಯಲ್ಲಿಯೇ ಇದ್ದ ಸಳನನ್ನು ಗಮನಿಸಿದ ಆತ 'ಹೊಯ್‌ಸಳ' ಎಂದು ಕಿರುಚಿದ. ಸಿಂಹ ಪರಾಕ್ರಮಿಯಾದ ಅರಸನು ಹುಲಿಯ ಮೇಲೆ ಎರಗಿದ. ಅದರೊಂದಿಗೆ ಹೋರಾಡಿ ಅದನ್ನು ಕೊಂದ. ಈ ಸುದ್ದಿ ರಾಜ್ಯದಲ್ಲೆಲ್ಲಾ ವ್ಯಾಪಿಸಿತು. ಸಳನ ಪರಾಕ್ರಮ, ಧರ್ಮಪಾಲನೆಗೆ ಮೆಚ್ಚಿದ ಪ್ರಜೆಗಳು ರಾಜನಿಗೆ ಸಲ್ಲಿಸುತ್ತಿದ್ದ ಕಪ್ಪವನ್ನು ದ್ವಿಗುಣಗೊಳಿಸಿದರು. ದೊರೆಯನ್ನು 'ಹೊಯ್ಸಳ' ಎಂದೇ ಗುರ್ತಿಸತೊಡಗಿದರು.

ಪ್ರಜೆಗಳು ಸಲ್ಲಿಸುತ್ತಿದ್ದ ಕಪ್ಪ-ಕಾಣಿಕೆಗಳಿಂದ ಅರಸನು ದ್ವಾರಸಮುದ್ರದಲ್ಲಿ ಕೋಟೆಯನ್ನು ನಿರ್ಮಿಸಿದ. ಇದನ್ನೇ ಈಗ ಹಳೇಬೀಡು ಎಂದು ಕರೆಯುತ್ತಾರೆ. ಅಂದಿನಿಂದ ಹೊಯ್ಸಳರ ಪತಾಕೆಯಲ್ಲಿ ಹುಲಿಯ ಚಿಹ್ನೆ ಇದ್ದು ಅವರು ವ್ಯಾಘ್ರ ರಾಜರಾದರು. ಇವರು ಸಹಜವಾಗಿ ಶಿವಭಕ್ತರಾಗಿದ್ದುದರಿಂದ ದ್ವಾರಸಮುದ್ರದಲ್ಲಿ ಶಿವಲಿಂಗವೊಂದನ್ನು ಪ್ರತಿಷ್ಠಿಸಿದರು. ಅದನ್ನು ಹೊಯ್ಸಳೇಶ್ವರನೆಂದೂ, ವೈಶಾಲೇಶ್ವರ ಎಂದೂ ಕರೆಯುತ್ತಿದ್ದರು. ಅಂದಿನಿಂದ ಆ ಅರಸುಮನೆತನಕ್ಕೆ, ಹೊಯ್ಸಳರೆಂಬ ಹೆಸರೇ ಬಂತು. ದೇಶವು ಸುಭಿಕ್ಷವಾಗಿರಲು ಶಾಂತಲೇಶ್ವರ ಲಿಂಗವನ್ನು ಪ್ರತಿಷ್ಠೆ ಮಾಡಿದರು.

ಹೊಯ್ಸಳೇಶ್ವರ ಸ್ವಾಮಿಯ ಪಕ್ಕದಲ್ಲಿಯೇ ಶಾಂತಲೇಶ್ವರ ಲಿಂಗವೂ ಇತ್ತು.

ಈಶ್ವರ ಸಂಕಲ್ಪದಂತೆ ನಡೆದಿರುವ ಈ ಚಾರಿತ್ರಿಕ ಸಂಘಟನೆಯು ಆಕೆಯಲ್ಲಿ ಭಕ್ತಿಭಾವ ಮೂಡಿಸಿತ್ತು. ಈಗ ತನ್ನ ಬಯಕೆಯನ್ನು ಆಧಾರಮಾಡಿಕೊಂಡು ಪೂರ್ವ ಪುರುಷರ ಪೂಜೆಯನ್ನು ನಡೆಸಬೇಕೆಂದುಕೊಂಡಳು. ಹೊಯ್ಸಳ ರಾಜನು ಪ್ರತಿಷ್ಠಿಸಿದ ಹೊಯ್ಸಳೇಶ್ವರ ದೇವಾಲಯವನ್ನೂ ಜಕ್ಕಣಾಚಾರ್ಯರಿಂದ ವಿಸ್ತರಿಸಬೇಕೆಂದು ಅದಕ್ಕೆ ಸಿದ್ಧತೆ ನಡೆಸತೊಡಗಿದಳು.

ದ್ವಾರಸಮುದ್ರದ ದೇವಾಲಯದ ಪುನರ್ನಿರ್ಮಾಣಕ್ಕೆ ಮುನ್ನೂರು ಮಂದಿ ಶಿಲ್ಪಿಗಳು ಶಿಲ್ಪಕಾರ್ಯದಲ್ಲಿ ತೊಡಗಿದರು. ಅವರಿಗೆಲ್ಲಾ ಪ್ರಧಾನ ಶಿಲ್ಪಿಗಳಾಗಿ ಜಕ್ಕಣಾಚಾರ್ಯನ ಶಿಷ್ಯರಲ್ಲಿ ಮುಖ್ಯರಾದ ಅನಂತಕೀರ್ತಿ ಸ್ಥಪತಿ, ದೇವೋಜ, ಕಾಳಿದಾಸಾಚಾರ್ಯರಿದ್ದರು. ಜಕ್ಕಣಾಚಾರ್ಯನ ಸಮಗ್ರ ಪರ್ಯವೇಕ್ಷಣೆಯಲ್ಲಿ ಇದು ನಡೆಯುತ್ತಿತ್ತು. ಕೇದಾರೋಜ, ಮಾಚೋಜ, ಕೇತನಾಚಾರ್ಯ ಮುಂತಾದವರು ದೇವಾಲಯದ ಪ್ರತ್ಯೇಕ ಭಾಗಗಳ ನಿರ್ಮಾಣದಲ್ಲಿ ತೊಡಗಿದ್ದರು.

ಹೊಯ್ಸಳ ಶಿಲ್ಪಕ್ಕೆ ಸಂಬಂಧಿಸಿದ ದೇವಾಲಯವು ಒಂದರಿಂದ ನಾಲ್ಕು ಮಂಟಪಗಳಿದ್ದು ಆಯಾ ಮಂಟಪ ಸಂಖ್ಯೆಯ ಹೆಸರಿನಿಂದ ಕರೆಯಲ್ಪಡುತ್ತವೆ. ಈ ಮಂಟಪಗಳನ್ನು ಕೂಟಗಳೆಂದು ಕರೆಯುತ್ತಾರೆ. ಬೇಲೂರಿನ ಚನ್ನಕೇಶವ ಮಂದಿರವು ಒಂದೇ ಮಂಟಪವನ್ನು ಹೊಂದಿದೆ ಆದ್ದರಿಂದ ಅದು ಏಕಕೂಟಾಚಲ, ಸೋಮನಾಥ ಪುರದ ದೇವಾಲಯವು ತ್ರಿಕೂಟಾಚಲ. ದೊಡ್ಡಗದ್ದವಳ್ಳಿಯ ಲಕ್ಷ್ಮೀ ದೇವಾಲಯವು ಚತುಷ್ಕೂಟ. ಹಳೇಬೀಡಿನ ಈ ದೇವಾಲಯ ದ್ವಿಕೂಟಾಚಲ. ಹೊರಕ್ಕೆ

ನೋಡಲು ಒಂದೇ ದೇವಾಲಯವಾಗಿ ಕಾಣಿಸಿದರೂ ಒಳಕ್ಕೆ ಹೋಗುತ್ತಲೇ ಬೇರೆ ಬೇರೆಯಾಗುತ್ತವೆ. ಒಂದು ಕಡೆಗೆ ಹೊಯ್ಸಳೇಶ್ವರ ಇನ್ನೊಂದು ಕಡೆಗೆ ಶಾಂತಲೇಶ್ವರರ ಗರ್ಭಗುಡಿಗಳು ಕಾಣುತ್ತವೆ. ಪ್ರತಿ ಕಲ್ಲಿನ ಮೇಲೂ ಶಿಲ್ಪಗಳಿವೆ. ಮಹಾಭಾರತ, ರಾಮಾಯಣದ ಕಥೆಗಳು, ದಶಾವತಾರ, ಕ್ಷೀರಸಾಗರ ಮಥನ, ಶಿವ-ಕೇಶವ ಲೀಲಾ ವಿಶೇಷಗಳು. ಒಂದೇ ಎರಡೇ ? ಹೈಂದವ ಪುರಾಣಾಂಶಗಳೆಲ್ಲವನ್ನೂ ಅವರು ರೂಪಿಸಿದ್ದರು. ಅಕ್ಷರ ಜ್ಞಾನವು ಇಲ್ಲದವರಿಗೂ ಈ ಸುಂದರ ಶಿಲ್ಪಗಳು ಅಖಂಡ ಜ್ಞಾನ, ಭಕ್ತಿಯನ್ನು ಬೋಧಿಸುತ್ತಿದ್ದವು. ಗರ್ಭಾಲಯದ ದ್ವಾರದಲ್ಲಿದ್ದ ದ್ವಾರಪಾಲಕರು, ಸುತ್ತಲೂ ಹಬ್ಬಿಕೊಂಡಿದ್ದ ಬಳ್ಳಿಗಳು, ಹೂಗಳು, ತೋರಣಗಳು ಸಹಜ ಸುಂದರವಾಗಿದ್ದವು. ಶಿವಾಲಯಗಳಾದುದರಿಂದ ಎದುರಿನಲ್ಲಿ ಎರಡು ಮಂಟಪಗಳಲ್ಲಿ ಆಳೆತ್ತರದ ಎರಡು ನಂದಿಗಳನ್ನು ರೂಪಿಸಿದ್ದರು. ನಂದಿ ಮಂಟಪದ ಪದ ಸ್ತಂಭಗಳು ತರಗಣೆಯಲ್ಲಿ ತಯಾರಿಸಿರುವಂತೆ, ಒಂದೊಂದು ಕಂಭವು ಎರಡೆರಡಾಗಿ ಕಾಣಿಸುತ್ತವೆ. ಹೀಗೆ ಒಂದು ಎರಡಾಗಿ ಕಾಣಿಸುವಂತೆ ಮೂಡುವುದನ್ನು ಶಿಲ್ಪದಲ್ಲಿ ದ್ವಯೀಭಾವ ಎನ್ನುತ್ತಾರೆ. ಈ ದೇವಾಲಯದ ಕೆಳ ಭಾಗದಲ್ಲಿ ಒಂದು-ಸಾಲು ಆನೆಗಳು, ಇನ್ನೊಂದು ಸಾಲು ಕುದುರೆಗಳು, ಮತ್ತೊಂದು ಸಾಲು ಸಿಂಹಗಳು, ಮಗದೊಂದು ಸಾಲಿನಲ್ಲಿ ಹಂಸಗಳನ್ನು ರೂಪಿಸಲಾಗಿತ್ತು.

ಶಾಂತಲಾದೇವಿಯು ತನ್ನ ಇಷ್ಟಾರ್ಥ ಪೂರ್ಣವಾದುದಕ್ಕೆ ಸಾವಿರ ಆನೆಗಳ ರಥದಲ್ಲಿ ಕುಳಿತಷ್ಟು ಸಂತೋಷಗೊಂಡಳು. ಈ ಮಹಾಶಿಲ್ಪ ಯಜ್ಞದಲ್ಲಿ ಸ್ಥಪತಿಯಾಗಿ ಕಾರ್ಯವನ್ನು ನಿರ್ವಹಿಸಿದ ಜಕ್ಕಣಾಚಾರ್ಯನು ಆಕೆಗೆ ವಿಶ್ವಕರ್ಮನ ಅಪರಾವತಾರವಾಗಿಯೇ ಕಾಣಿಸಿದ. ವೀರಬಲ್ಲಾಳನು ತನ್ನ ಪಟ್ಟದರಸಿಯ ಶಿಲ್ಪ ಪ್ರೇಮವನ್ನು, ತನ್ನ ವಂಶದ ಹಿರಿಯರ ಬಗ್ಗೆ ಆಕೆಯಲ್ಲಿರುವ ಅತಿಶಯ ಭಕ್ತಿಗೌರವಗಳನ್ನು ಬಹುವಾಗಿ ಮೆಚ್ಚಿದ. ಜಕ್ಕಣಾಚಾರ್ಯನ ದಿವ್ಯ ಮನೋಹರ ಶಿಲ್ಪಗಳಿಗೆ ಮನಸೋತ. ಆದರೆ ತನ್ನ ರಾಜಧಾನಿಯಲ್ಲಿಯೇ ಜೈನ ಶಿಲ್ಪ ಇಲ್ಲದೆ ಇರುವುದು ಆತನಿಗೆ ಕೊರತೆ ಎನಿಸದೆ ಇರಲಿಲ್ಲ. ಈ ಅಂಶವನ್ನು ಜಕ್ಕಣಾಚಾರ್ಯನ ಶಿಷ್ಯರಲ್ಲಿ ದೇವೋಜ ಶಿಲ್ಪಿ ಒಬ್ಬನೇ ಗುರುತಿಸಿದವನು.

ದ್ವಾರಸಮುದ್ರದಲ್ಲಿ ದಿವ್ಯಶಿಲ್ಪ ಕಲೆ ನೆಲೆಯೂರುತ್ತಲೇ ರಾಜ್ಯದಲ್ಲಿ ಎಲ್ಲೆಡೆಯೂ ಜನರಲ್ಲಿ ಭಕ್ತಿ ಪ್ರಪತ್ತಿಗಳು ಹೆಚ್ಚಾಗಿ ದೈವಾರಾಧನೆ, ವ್ರತಗಳು ಹೆಚ್ಚಾದವು. ವೈದಿಕಮತ ಬಲಗೊಳ್ಳತೊಡಗಿತು. ದೇವಾಲಯವನ್ನು ಇದುವರೆವಿಗೂ ಕಲ್ಲಿನ ಗುಡ್ಡವೆಂದು ಭಾವಿಸಿದವರೂ ಈಗ ಅದೊಂದು ಕಲಾಸಾಗರ, ಚರಿತ್ರೆ-ಇತಿಹಾಸಗಳನ್ನು ಬೋಧಿಸುವ ಗುರು ಎಂದು ಅದರ ದರ್ಶನಾಭಿಲಾಷಿಗಳಾಗಿ ಅಲ್ಲಿಗೆ ಬರತೊಡಗಿದರು. ಶಿಲ್ಪಕಲಾ ಲಕ್ಷ್ಮಿಯು ತನ್ನ ದಿವ್ಯ ನಾಟ್ಯವನ್ನು ನಡೆಸಿದಾಗ ಈ ರೀತಿಯ ಫಲವುಂಟಾಗುವುದರಲ್ಲಿ ಅತಿಶಯೋಕ್ತಿ ಏನೂ ಇಲ್ಲ.

೩

ಅಂದು ಕಾರ್ತೀಕ ಪೌರ್ಣಮಿ. ಆಕಾಶವೆಲ್ಲಾ ಶುಭ್ರವಾಗಿದೆ. ಸರೋವರದಲ್ಲಿ ನೀರು ಪರಿಶುದ್ಧವಾಗಿತ್ತು. ಅವುಗಳಲ್ಲಿ ಪದ್ಮಗಳು ವಿಕಸಿಸಿ ದುಂಬಿಗಳಿಗೆ ತೃಪ್ತಿಯಾಗುವಷ್ಟು ಜೇನನ್ನು ಕೊಟ್ಟಿದ್ದವು. ಕೋಗಿಲೆಯ ಕೂಗು, ಗಿಣಿಗಳ ಮಧುರ ಹಾಡು, ಗೊರವಂಕದ ಕೂಗು ಕಿವಿಗಳಿಗೆ ಆಹ್ಲಾದಕರವಾಗಿದೆ. ಆ ಉದ್ಯಾನವನವು ಸೌಂದರ್ಯದಿಂದ ಕಂಗೊಳಿಸುತ್ತಿದೆ.

ಆ ಉಪವನದಲ್ಲಿಯ ಚಂದ್ರಕಾಂತ ಶಿಲೆಯ ಪೀಠದ ಮೇಲೆ ಕುಳಿತು ಸೌಪರ್ಣೀ ದೇವಿ, ಚಾಮುಂಡೇಶ್ವರೀ ಇಬ್ಬರೂ ತಮ್ಮ ಗಂಡಂದಿರ ಶಿಲ್ಪ ಕಲಾ ಮಹಿಮೆಗಳನ್ನು ಹೇಳಿಕೊಳ್ಳುತ್ತಿದ್ದರು. ಸೌಪರ್ಣೀ ದೇವಿಯ ಕೊರಳಿನಲ್ಲಿ ಮುತ್ತಿನಹಾರ, ಕಿವಿಗಳಲ್ಲಿ ರತ್ನದ ಕರ್ಣ ಕುಂಡಲಗಳು ಫಳಫಳನೆ ಮಿರುಗುತ್ತಿದ್ದವು. ಮುವ್ವತ್ತು ತುಂಬಿದ ಪ್ರೌಢೆ. ರೂಪದಲ್ಲಿ ರತಿದೇವಿ. ಲಾವಣ್ಯದಲ್ಲಿ, ತಾರುಣ್ಯದಲ್ಲಿ ದಿವ್ಯಮೂರ್ತಿ. ಶಿಲ್ಪ ಸಾರ್ವಭೌಮನ ಪತ್ನಿ. ಹುಟ್ಟಿದ್ದು ಮೆಟ್ಟಿದ್ದು ಆಗರ್ಭ ಶ್ರೀಮಂತ ಮನೆತನಗಳೇ. ಇದಕ್ಕೆ ನೆರವಾಗಿ ಮಹಾರಾಜರ ಆಶ್ರಯ. ಆಶ್ರಯ ಎನ್ನುವುದು ಸರಿಯಾದ ಪದವಲ್ಲ. ಜಕ್ಕಣಾಚಾರ್ಯರ ಮನೆತನ ಅರಮನೆಗೆ ಗುರುಮನೆಯಾಗಿತ್ತು ಎಂದರೂ ಅತಿಶಯೋಕ್ತಿ ಅಲ್ಲ. ಎಲ್ಲಾ ವಿಷಯಗಳಲ್ಲೂ ಅವರಿಗೆ ಯಾವ ಕೊರತೆಯೂ ಇಲ್ಲವೆನಿಸಿದ್ದರೂ ಆಕೆಯ ಮುಖಮಾತ್ರ ಮುದುಡಿತ್ತು. ಚಾಮುಂಡೇಶ್ವರೀಯು ತನ್ನ ಗಂಡನ ಗುರುಪತ್ನಿಯಾದ ಸೌಪರ್ಣೀ ದೇವಿಯ ಮನಃಸ್ಥಿತಿಯನ್ನು ಸರಿಯಾಗಿ ತಿಳಿಯಲಾರದಾದಳು.

"ಮಹಾರಾಣಿ ಎಂಥಾ ಸಾಧ್ವೀ !? ಸ್ವಲ್ಪವೂ ಜಂಭವೇ ಇಲ್ಲ. ರಾಣಿಯಾದರೂ ಎಲ್ಲರ ಬಗ್ಗೆಯೂ ಆದರ ವಿಶ್ವಾಸಗಳನ್ನು ತೋರುತ್ತಾಳೆ. ಆಕೆ ಶಿಲ್ಪಿಗಳನ್ನೆಲ್ಲಾ ಬಹುವಾಗಿ ಮೆಚ್ಚಿಕೊಂಡು ಗೌರವಿಸಿದ್ದಾಳೆ. ಶಿಲ್ಪಿಗಳು ನನ್ನ ಪಾಲಿನ ಭಾಗ್ಯದೇವತೆಗಳು ಎಂದು ಹೇಳಿದಳಂತೆ. ಅಂತಹ ಸೌಜನ್ಯ ಮೂರ್ತಿಯನ್ನು ನಾನು ಬೇರೆಲ್ಲೂ ನೋಡಿಲ್ಲ !" ಎಂದಳು ಚಾಮುಂಡೇಶ್ವರೀ.

"ಹೌದು, ಮಹಾರಾಣಿ ಸದ್ಗುಣಗಳ ಖನಿ. ಶಿಲ್ಪಕಲಾಭಿಮಾನಿ. ವೈದಿಕ ಮತ ಪರಾಯಣಳಾದ ಆಕೆಯು ನಾರೀ ಲೋಕಕ್ಕೇ ಭೂಷಣಪ್ರಾಯಳಾಗಿದ್ದಾಳೆ. ಆಕೆಯ ಗುಣಶೀಲಗಳಿಗೆ ತಕ್ಕಂತೆ ಸುಪುತ್ರನೂ ಇದ್ದಾನೆ. ಆಕೆಗೆ ಇನ್ನು ಯಾವ ಕೊರತೆ ? ಮಗುವಿನ ಹುಟ್ಟುಹಬ್ಬಕ್ಕೆ ನನ್ನನ್ನು ಆಹ್ವಾನಿಸಿ ಬಹುವಾಗಿ ಗೌರವಿಸಿದಳು" ಎಂದಳು ಸೌಪರ್ಣೀ.

ಚಾಮುಂಡೀ ಮೆಲ್ಲನೆ "ಎಷ್ಟೇ ಒಳ್ಳೆಯವರಾದರೂ ವಿರೋಧಿಗಳು ತಪ್ಪಿಲ್ಲ. ಈಕೆಯ ಮೇಲೆ ಸದಾ ಕಣ್ಣಿಟ್ಟಿರುವ ಚಿಕ್ಕರಾಣಿ ಎಲ್ಲದರಲ್ಲೂ ತಪ್ಪು ಕಂಡುಹಿಡಿಯುವ ಪ್ರಯತ್ನದಲ್ಲಿಯೇ ಇರುತ್ತಾಳೆ. ತಾನು ಜೈನ ಧರ್ಮವನ್ನು ಸ್ವೀಕರಿಸಿರುವುದರಿಂದ ಮಹಾರಾಜನಿಗೆ ತನ್ನ ಮೇಲೆ

ಹೆಚ್ಚಿನ ಪ್ರೀತಿ ಎಂದುಕೊಂಡಿದ್ದಾಳೆ. ಅವಕಾಶ ಸಿಕ್ಕಾಗಲೆಲ್ಲಾ ಏನಾದರೂ ಹೇಳುತ್ತಿರುತ್ತಾಳೆ. ಪಟ್ಟದ ರಾಣಿಗೆ ಮಗನಾಗಿರುವುದು ಆಕೆಗೆ ಅಸೂಯೆಯೇ!" ಎಂದಳು.

"ಆದರೇನು ?.... ಮಹಾರಾಜರಿಗೆ ಪಟ್ಟದರಾಣಿ ಬಗ್ಗೆ ಬಹು ಗೌರವವಿದೆ. ಆಕೆ ಕೋರಿದ್ದನ್ನೆಲ್ಲಾ ಪೂರೈಸುತ್ತಾರಂತೆ. ಕಿರಿಯ ರಾಣಿಯ ತಂತ್ರಗಳು ಅಲ್ಲಿ ಫಲಿಸುವುದಿಲ್ಲ. ಆಕೆಯ ಜಂಭಕ್ಕೆ ಕಾರಣವೇ ಬೇರೆ. ಹೊಯ್ಸಳರು ಮೊದಲಿಗೆ ಚಾಲುಕ್ಯರ ಸಾಮಂತರು. ಕ್ರಮಕ್ರಮವಾಗಿ ಸ್ವತಂತ್ರ ಅರಸರಾದರು. ಅವರ ಶಕ್ತಿ-ಸಾಮರ್ಥ್ಯಗಳನ್ನು ಗುರ್ತಿಸಿ ಚಾಲುಕ್ಯರೂ ಅವರೊಂದಿಗೆ ಬಾಂಧವ್ಯವನ್ನು ಬೆಳೆಸಿದರು. ಕೀರ್ತಿಮತೀ ಚಾಲುಕ್ಯರ ಹೆಣ್ಣು. ವೀರಬಲ್ಲಾಳರ ತಾತ ವಿನಯಾದಿತ್ಯರೂ ವೈದಿಕ ಮತಸ್ಥರೇ. ಅವರ ಕಾಲದಲ್ಲಿ ಚಾಲುಕ್ಯರಿಗೂ, ಚೋಳರಿಗೂ ರಾಜಕೀಯ ಯುದ್ಧಗಳು ಪ್ರಾರಂಭವಾದುವಂತೆ. ಆಗ ವಿನಯಾದಿತ್ಯ ಚಾಲುಕ್ಯರ ಪರವಾಗಿನಿಂತು ಯುದ್ಧಮಾಡಿ ಚೋಳರನ್ನು ಸೋಲಿಸಿದನಂತೆ. ಅಂದಿನಿಂದ ಚೋಳರಿಗೂ ಚಾಲುಕ್ಯರಿಗೂ ಶತ್ರುತ್ವ ಕಡಿಮೆಯಾಗಿಲ್ಲ. ಈ ಕಾರಣದಿಂದ ಹೊಯ್ಸಳ ರಾಜರು ಚಾಲುಕ್ಯರೊಂದಿಗೆ ಸಂಬಂಧ ಬೆಳೆಸಿ ತಮ್ಮನ್ನು ಬಲಪಡಿಸಿಕೊಂಡಿದ್ದಾರೆ. ಚೋಳರೂ ಕೂಡ ಚಾಲುಕ್ಯ, ಹೊಯ್ಸಳ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಾ ಇದ್ದಾರೆ. ಆದ್ದರಿಂದ ಹೊಯ್ಸಳರು ಚಾಲುಕ್ಯರಿಗೂ, ಚಾಲುಕ್ಯರು ಹೊಯ್ಸಳರಿಗೂ ಪರಸ್ಪರ ಆಸರೆಯಾಗಿ ನಿಂತಿದ್ದಾರೆ. ತನ್ನ ತೌರಿನ ಬಲದ ಫಲವಾಗಿ ಹೊಯ್ಸಳ ಸಾಮ್ರಾಜ್ಯವು ನಿಂತಿದೆ ಎಂಬುದು ಕೀರ್ತಿಮತಿಯ ಅಹಂಕಾರಕ್ಕೆ ಕಾರಣವಾಗಿದೆ. ಇದು ಸಾಲದೆ ಈಗ ಆಕೆ ಗಂಡು ಮಗುವಿನ ತಾಯಿಯಾಗಿದ್ದಾಳೆ. ಆಕೆಯ ಮತ್ಸರಕ್ಕೆ ಮತ ಭೇದವು ಕಾರಣ. ಶಾಂತಲಾದೇವಿ ಜೈನಮತವನ್ನು ಅನುಸರಿಸದೆ ಇರುವುದು ಆಕೆಗೆ ಇಷ್ಟವಿಲ್ಲ. ಆಕೆಯೂ ಜೈನಳಾದರೆ ಅರಮನೆಯಲ್ಲೆಲ್ಲಾ ಜೈನರೇ ಆದಂತಾಗುತ್ತದೆ. ರಾಜ್ಯದಲ್ಲೆಲ್ಲಾ ಜೈನ ಮತದ ಪ್ರಸಾರವು ಅವ್ಯಾಹತವಾಗಿ ಸಾಗಿಸಬಹುದು ಎಂಬುದು ಆಕೆಯ ಯೋಜನೆ. ಎಲ್ಲರನ್ನೂ ಜೈನರಾಗಲು ಪ್ರೇರೇಪಿಸಬಹುದು ಎಂಬುದು ಆಕೆಯ ಆಸೆ. ಆದ್ದರಿಂದ ಆಕೆ ಪಟ್ಟದರಾಣಿಯನ್ನು ದ್ವೇಷಿಸುತ್ತಾಳೆ. ಆದರೆ ಆಕೆ ಮೂಲಭೂತವಾಗಿ ಒಳ್ಳೆಯವಳು ಎಂದು ಹೇಳುತ್ತಾರೆ" ಎಂದಳು ಸೌಪರ್ಣೀದೇವಿ.

"ಮಹಾರಾಜರು ಜೈನರಾದರೂ ಇತರ ಮತದವರನ್ನು ಅನಾದರದಿಂದ ಕಾಣುವುದಿಲ್ಲ. ಯಾರನ್ನೂ ಮತ ಬದಲಿಸಿಕೊಳ್ಳಲು ಒತ್ತಾಯ ಹೇರುವವರಲ್ಲ. ಎರಡನೆಯ ರಾಣಿ ಸಹಜಾದೇವಿ ಶಕ್ತಿದೇವತೆಯ ಆರಾಧಕಳಂತೆ. ಜಗತ್ತಿನ ಸೃಷ್ಟಿಗೆ ಸ್ತ್ರೀರೂಪಿಯಾದ ಶಕ್ತಿಯೇ ಕಾರಣವೆಂಬುದು ಆಕೆಯ ಮತ. ತಾನು ಶೈವಳಾಗಿದ್ದರೂ ಲಕ್ಷ್ಮೀ-ಪಾರ್ವತಿಯರಲ್ಲಿ ಅಂತರ ಕಾಣದವಳು. ಆದ್ದರಿಂದಲೇ ದೊಡ್ಡಗದ್ದುವಳ್ಳಿಯಲ್ಲಿ ಲಕ್ಷ್ಮೀ ದೇವಾಲಯವನ್ನು ಆಕೆ ನಿರ್ಮಿಸಿದ್ದು. ಇದರಿಂದ ಮಹಾರಾಜರು ಆಕೆಯನ್ನು ಜೈನಳಾಗುವಂತೆ ಇದುವರೆವಿಗೂ ಒತ್ತಾಯಿಸಿಲ್ಲವಲ್ಲ. ಮಹಾರಾಜರು ಎಲ್ಲರಿಗೂ ಅವರವರ ಸಾಮರ್ಥ್ಯಕ್ಕೆ ಅನುಗುಣವಾಗಿ ಕೆಲಸವನ್ನು ಕೊಟ್ಟು ಅವರ ಬಡತನವನ್ನು ಹೊಡೆದೋಡಿಸುವ ಪ್ರಯತ್ನದಲ್ಲಿದ್ದಾರೆ. ಶಿಲ್ಪಕಲೆಯು ದೇಶದ ಮೂಲೆಮೂಲೆಗಳಲ್ಲೂ ಹರಡಿ ತನ್ನ ವೈಭವವನ್ನು ತೋರಿಸಲು ಅನುವಾಗುತ್ತಿದೆ. ಇಂಥಾದ್ದರಲ್ಲಿ ಈ ಮಹಾರಾಜರು ಜೈನರು ಏಕಾದರೋ ? ಯಾವಾಗಾದರೋ ?...." ಎಂದಳು ಚಾಮುಂಡಿ.

"ಮಹಾರಾಜರು ಜೈನರಾದದ್ದು ಇವರ ತಲೆಮಾರಿನಲ್ಲಿಯೇ. ಅವರ ಹೆಸರು ಬಿಟ್ಟಿದೇವ ಎಂದು. ಜೈನರಾದ ಮೇಲೆ ವೀರಬಲ್ಲಾಳ ಎಂದು ಹೆಸರಿಸಿಕೊಂಡರಂತೆ. ಕೀರ್ತಿಮತಿಯ ಮೊದಲ ಹೆಸರು ಲಕುಮಾದೇವಿಯಂತೆ. ಮಹಾರಾಜರ ಅನುರಾಗ ಗಳಿಸಿದ ನಂತರ ಜೈನಳಾಗಿ ಕೀರ್ತಿಮತಿಯಾದಳಂತೆ. ಬಲ್ಲಾಳ ಮಹಾರಾಜರು ಹೇಗೆ ಜೈನರಾದರೋ ನನಗೆ ಗೊತ್ತಿಲ್ಲ. ಬಹುಕಾಲ ರಾಜ್ಯಾಡಳಿತವನ್ನು ನಡೆಸಿದ ನರಸಿಂಹದೇವ ಕೂಡ ವೈದಿಕ ಮತದವನೇ ಆಗಿದ್ದನಂತೆ. ವೀರಬಲ್ಲಾಳ ತಾನು ಜೈನಮತ ಶಿಲ್ಪಗಳನ್ನು ನಿರ್ಮಿಸಲು ಸಂಕಲ್ಪ ಮಾಡಿರುವುದರಿಂದಲೇ ತನಗೆ ಪುತ್ರೋತ್ಸವವಾಗಿದೆ ಎಂದುಕೊಂಡು ಆತನಿಗೆ ವರ್ಧಮಾನ ಎಂಬ ಹೆಸರಿಟ್ಟರಂತೆ" ಎಂದಳು ಸೌಪರ್ಣೀದೇವಿ.

"ಮಹಾರಾಜರ ಜೈನ ಮತಾಭಿಮಾನವು ಗಾಢವಾದುದೇ. ದ್ವಾರಸಮುದ್ರದಲ್ಲಿ ಶಾಂತಲಾ ದೇವಿಯವರು ಹಿಂದೂ ದೇವತಾ ಶಿಲ್ಪಗಳನ್ನು ಮಾಡಿಸಿದ್ದಾರೆಂದೂ, ರಾಜಧಾನಿಯಲ್ಲಿ ಜೈನ ಶಿಲ್ಪಗಳು ಇಲ್ಲವೆಂಬ ಕೊರತೆ ಇರುವುದಾಗಿ ನಮ್ಮವರು ನನಗೆ ಹೇಳಿದರು. ಹೇಗಾದರೂ ತಾವು ಜೈನ ಶಿಲ್ಪಗಳನ್ನು ರೂಢಿಸಿ ವಿಸ್ತರಿಸಿ ಅರಸರ ಬಯಕೆ ಪೂರೈಸಬೇಕೆಂಬುದು ಅವರ ಆಸೆಯಾಗಿದೆ. ನಮ್ಮವರ ಪ್ರಯತ್ನಕ್ಕೆ ರಾಣಿ ಕೀರ್ತಿಮತಿಯು ನೆರವಾಗಬಹುದು. ಸಹಜಾದೇವಿ ಮಾತ್ರ ತಟಸ್ಥಳು. ಆಕೆಗೆ ಯಾರ ಬಗ್ಗೆಯೂ ಪಕ್ಷಪಾತವಿಲ್ಲ. ಸೂಕ್ತವಾದ ಪ್ರವರ್ತನೆಯಿಂದ ಎಲ್ಲರ ಗೌರವಕ್ಕೂ ಆಕೆ ಪಾತ್ರಳಾಗಿರುತ್ತಾಳೆ" ಎಂದು ಹೇಳಿದಳು ಚಾಮುಂಡೀ.

ಈ ಮಾತನ್ನು ಕೇಳಿದ ಸೌಪರ್ಣೀದೇವಿ "ಆಚಾರ್ಯರ ಶಿಷ್ಯರಲ್ಲಿ ಅದ್ಭುತ ಶಿಲ್ಪಗಳನ್ನು ನಿರ್ಮಿಸಬಲ್ಲ ದಕ್ಷತೆ, ಕೌಶಲ್ಯ ನಿನ್ನ ಪತಿಯಾದ ದೇವೋಜ ಶಿಲ್ಪಾಚಾರ್ಯರಿಗೆ ಮಾತ್ರವೇ ಸಿದ್ಧಿಸಿದೆ. ಅವರೇ ಮಹಾರಾಜರ ಮನೋಕಾಮನೆಯನ್ನು ಪೂರೈಸಲು ಸೂಕ್ತರಾದವರು. ಇಂಥಾ ಮಹಾಶಿಲ್ಪಿಯನ್ನು ಪತಿಯನ್ನಾಗಿ ಪಡೆದಿರುವ ನೀನೇ ಧನ್ಯಳು" ಎಂದಳು.

ಅಷ್ಟರಲ್ಲಿ ಜಕ್ಕಣಾಚಾರ್ಯನ ಆಗಮನವನ್ನು ಚೇಟಿಯೊಬ್ಬಳು ಬಿನ್ನವಿಸಿದಳು. ಈ ಮಾತು ಕೇಳುತ್ತಲೇ ಚಾಮುಂಡೀ ಮದರಂಗಿ ಗಿಡಗಳ ಮಧ್ಯೆ ಇದ್ದ ಸಣ್ಣಕಾಲು ಹಾದಿಯಿಂದ ತನ್ನ ಮನೆಯತ್ತ ಸರಸರನೆ ಸಾಗಿದಳು.

ಅಂದು ಜಕ್ಕಣಾಚಾರ್ಯನು ಮಹಾರಾಜರಿಂದ ಆಹ್ವಾನಿಸಲ್ಪಟ್ಟು ರಾಜಕೀಯ ಕಾರ್ಯಾಲೋಚನೆಯಲ್ಲಿ ಮುಳುಗಿದ್ದು, ಮನಸ್ಸಿಗೆ ವಿಶ್ರಾಂತಿಯೇ ಇಲ್ಲದೆ ಇದ್ದುದರಿಂದ ಸ್ವಲ್ಪ ಹೊತ್ತು ಉದ್ಯಾನವನದಲ್ಲಿ ವಿಶ್ರಾಂತಿ ಪಡೆಯಲು ಬಂದಿದ್ದ. ಅದೇ ಸಮಯಕ್ಕೆ ಅಲಂಕೃತಳಾಗಿದ್ದ ಸೌಪರ್ಣೀದೇವಿಯೂ ಅಲ್ಲಿಯೇ ಇದ್ದಳು. ಪೀತಾಂಬರದ ಸೀರೆಯಲ್ಲಿ ಆ ಸೌಂದರ್ಯಮೂರ್ತಿ ಪ್ರಕಾಶವಂತಳಾಗಿದ್ದಳು. ಆಕೆಯ ದಿವ್ಯ ಮಂಗಳ ಸ್ವರೂಪವು ಶಿಲ್ಪಾವತಂಸನ ಕಣ್ಣಿಗೆ ಹಬ್ಬವಾಗಿತ್ತು. ಆತನ ಮನದಲ್ಲಿ ಇನ್ನೂ ಯೋಚನಾ ತರಂಗಗಳ ತಾಡನ ನಡೆಯುತ್ತಲೇ ಇತ್ತು. ಮಂಥನ ಸಾಲೆಯಲ್ಲಿ ನಡೆದ ಚರ್ಚೆಯಲ್ಲಿಯೇ ಮನ ಸಂಲಗ್ನವಾಗಿತ್ತು. ಚಿಂತಾರೇಖೆಗಳು ಆತನ ಮುಖದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದವು. ಆದರೂ ಸೌಪರ್ಣೀದೇವಿಯನ್ನು ನೋಡಿ ಪ್ರಯತ್ನಪೂರ್ವಕವಾಗಿ ಮುಗುಳ್ನಗೆ ಮೂಡಿಸಿಕೊಂಡು, ಆಕೆಯ ಅಲಂಕಾರವನ್ನು ಗುರ್ತಿಸಿದವನಂತೆ "ದೇವಿ, ಈ ದಿನ ಸರ್ವಾಲಂಕಾರ ಭೂಷಿತೆಯಾಗಿ ಜ್ವಾಜ್ವಲ್ಯಮಾನವಾಗಿ ಬೆಳಗುತ್ತಿರುವಿರಲ್ಲ ! ಹೊಸದಾಗಿರುವ

ಈ ಆಭರಣಗಳು ಎಲ್ಲಿಯವು ? ತೌರಿನವರು ಹಬ್ಬಕ್ಕೆ ಕಳುಹಿಸಿರುವ ಕಾಣಿಕೆಗಳೇನು ?" ಎಂದು ಕೇಳಿದ. ಹೀಗೆ ಮಾತನಾಡುತ್ತ ಸೌಪರ್ಣೀದೇವಿಯ ಪಕ್ಕದಲ್ಲಿ ಕುಳಿತು ತನ್ನ ತೋಳನ್ನು ಆಕೆಯ ಭುಜದ ಮೇಲೆ ಹರಡಿ ಆಕೆಯ ಮುಖವನ್ನೇ ದಿಟ್ಟಿಸಿದ.

ಸೌಪರ್ಣೀದೇವಿಯು ನಾಚಿಕೆಯಿಂದ ತಲೆತಗ್ಗಿಸಿ, ಗಂಡನ ಮುಗುಳ್ನಗೆಗೆ ಉತ್ತರವಾಗಿ ಕಿರುನಗೆ ಬೀರುತ್ತಾ "ಈ ಅಲಂಕಾರಗಳು ಬಂದಿದ್ದು ನಿಮಗೆ ಗೊತ್ತಿಲ್ಲವೇ ?.... ಓ ಹೌದು, ಹೇಗೆ ಗೊತ್ತಿರಲು ಸಾಧ್ಯ ! ಹಗಲು ಇರಳು ಕಲಾಸೇವೆಯಲ್ಲಿ ನಿರತರಾಗಿರುವ ನಿಮಗೆ ಸಂಸಾರದ ವಿಷಯಗಳ ಬಗ್ಗೆ ತಿಳಿದುಕೊಳ್ಳಲು ವ್ಯವಧಿ ಎಲ್ಲಿದೆ ? ನಿಮಗೆ ಈ ವಿಷಯವೇ ಅಲ್ಲ ಇನ್ನು ಬೇರೆಯ ಯಾವ ವಿಷಯ ತಾನೇ ಪೂರ್ಣವಾಗಿ ತಿಳಿದಿರಲು ಸಾಧ್ಯ ? ಈಗ ಶಿಲ್ಪದ ಸೇವೆಯೊಂದಿಗೆ ರಾಜಕಾರಣದಲ್ಲೂ ನೀವು ಸೇರಬೇಕಾಗಿದೆ. ಇದರಿಂದ ಇದ್ದ ಅಲ್ಪಸ್ವಲ್ಪ ವಿಶ್ರಾಂತಿ ಸಮಯಕ್ಕೂ ಸೊನ್ನೆ ಸುತ್ತಲಾಗಿದೆ. ಮಹಾಮಂತ್ರಿ ಅಕ್ಕಣ್ಣನವರು ನೀವು ಅರಸರ ಮಂತ್ರಾಂಗದ ಆಪ್ತರಲ್ಲಿ ಸೇರಿದಂದಿನಿಂದ ಅವರಿಗೆ ಸ್ವಲ್ಪ ವಿಶ್ರಾಂತಿ ದೊರೆಯುತ್ತಿದೆ ಎಂದು ಹೇಳುತ್ತಾರೆ. ಇನ್ನು ನಿಮ್ಮ ಮನಸ್ಸಿನಲ್ಲಿ ಇತರ ವಿಷಯಗಳ ಬಗ್ಗೆ ಸ್ಥಳವೆಲ್ಲಿದೆ ? ದ್ವಾರಸಮುದ್ರದ ಶಿಲ್ಪಗಳಿಂದ ಸಂತುಷ್ಟರಾಗಿರುವ ಮಹಾರಾಣಿ ಈ ಆಭರಣಗಳನ್ನು ಬಹುಕರಿಸಿದ್ದಾರೆ. ಅವರು ಕಳುಹಿಸಿರುವ ಆಭರಣಗಳಲ್ಲಿ ಕಾಲು ಭಾಗವನ್ನು ಮಾತ್ರವೇ ನಾನು ಈಗ ಧರಿಸಿದ್ದೇನೆ. ನಿಮಗೆ, ನಿಮ್ಮ ಶಿಷ್ಯರಿಗೆ ರೇಶಿಮೆ ವಸ್ತ್ರಗಳನ್ನು, ಬಂಗಾರದ ಯಜ್ಞೋಪವೀತಗಳನ್ನು, ನವರತ್ನಗಳ ಹಾರಗಳನ್ನು, ಹೀಗೆ ಅನೇಕ ಆಭರಣಗಳನ್ನು ಕಳುಹಿಸಿದ್ದಾರೆ. ಅಬ್ಬ, ಅವರ ಔದಾರ್ಯವನ್ನು ವರ್ಣಿಸಲು ಸಾಧ್ಯವಿಲ್ಲ. ಇದೆಲ್ಲಾ ನಿಮ್ಮ ಶಿಷ್ಯ ದೇವೋಜನೆ ನಿಮಗೆ ಅರಿಕೆ ಮಾಡಿಕೊಂಡಿರುತ್ತಾರೆ ಎಂದುಕೊಂಡೆ. ಆತನೂ ಯಾವುದೋ ಶಿಲ್ಪ ನಿರ್ಮಾಣದಲ್ಲಿ ಈ ವಿಷಯವನ್ನು ಮರೆತನೇನೋ !....." ಎಂದು ಹೇಳಿದಳು.

"ಮಾಡಿರುವ ಕೆಲಸಕ್ಕೆ ಪ್ರತಿಯಾಗಿ ಈ ರೀತಿಯ ಬಹುಮಾನಗಳನ್ನು ಸ್ವೀಕರಿಸುವುದು ನನಗೆ ಇಷ್ಟವಾದ ಕೆಲಸವಲ್ಲ. ಪವಿತ್ರ ಶಿಲ್ಪಾಚಾರ್ಯ ಸಂಪ್ರದಾಯಕ್ಕೆ ವಿರುದ್ಧವಾದುದು ಕೂಡ. ತಮ್ಮ ಹೆಸರುಗಳನ್ನು ಶಿಲೆಗಳ ಮೇಲೆ ಕಂಡರಿಸಲು ಬಯಸದ ಶಿಲ್ಪಿಗಳು ಈ ಭೋಗಭಾಗ್ಯಗಳನ್ನು ಬಯಸುತ್ತಾರೆಯೇ ? ಇವೆಲ್ಲಕ್ಕಿಂತ ಮಿಗಿಲಾಗಿ ನಮಗೆ ಅರಸರು ಕೊಡುವ ಬಹುಮಾನಗಳು ಏತಕ್ಕೆ ಬೇಕು ? ಧನ ಧಾನ್ಯ ಸಂಪನ್ನ ಕುಟುಂಬದಲ್ಲಿ ಹುಟ್ಟಿರುವ ನಾವು ನಮ್ಮ ಸಂಪತ್ತನ್ನು ಅರ್ಹರಾದ ಇತರರಿಗೂ ಕೊಟ್ಟು ಧನಿಕರಿಗೆ ಮಾರ್ಗದರ್ಶಕರಾಗ ಬೇಕಾಗಿದೆ. ದೇವರು ಕರುಣಿಸಿರುವ ಈ ಶಿಲ್ಪಕಲಾ ಕೌಶಲವನ್ನು ಬಳಸಿಕೊಂಡು ದೇಶದಲ್ಲೆಲ್ಲಾ ಕಲಾ ತೋರಣಗಳನ್ನು ಕಟ್ಟಿ, ಸಿಂಗರಿಸಿ ಬದುಕನ್ನು ಸಾರ್ಥಕಗೊಳಿಸಿಕೊಳ್ಳಬೇಕು ಎಂಬುದು ನನ್ನ ಗುರಿ. ನನ್ನ ಕಾಣಿಕೆಯಾಗಿರುವ ಹಲವು ಶಿಲ್ಪ ಸೃಷ್ಟಿಗಳು ದೇಶದ ಬೇರೆ ಬೇರೆ ಭಾಗಗಳಲ್ಲಿ ನಿಂತು ಅಮರವಾಗಬೇಕೆಂಬುದು ನನ್ನ ಹೆಬ್ಬಯಕೆ. ಇನ್ನು ಮುಂದೆ ಈ ರೀತಿಯ ಕಾಣಿಕೆಗಳನ್ನು ಕಳುಹಿಸಬಾರದೆಂದು ಮಹಾರಾಣಿಯವರ ಮನಸ್ಸಿಗೆ ನೋವಾಗದಂತೆ ನೀನೇ ಅರಿಕೆಮಾಡಿಕೋ" ಎಂದ ಜಕ್ಕಣಾಚಾರ್ಯ.

ಈ ಮಾತುಗಳನ್ನು ಕೇಳುತ್ತಿದ್ದಂತೆಯೇ ಸೌಪರ್ಣೀದೇವಿಯ ಮುಖ ಬಿಳಿಚಿಕೊಂಡಿತು. ಆಕೆಯ ಮುಖದಲ್ಲಿ ಹೊಸದಾದ ದೈನ್ಯ ಭಾವದ ರೇಖೆಯೊಂದು ಮೂಡಿತು. ಆಕೆಯ ಮುಖವು ಗಂಭೀರಗೊಂಡಿತು. ಈಗಿನ ಮಾತಿನಿಂದಲೇ ಈ ರೀತಿ ಪರಿವರ್ತನೆಯಾಗಿದೆ ಎಂದು ಹೇಳಲು ಸಾಧ್ಯವಿರಲಿಲ್ಲ. ಇಂಗಿತಜ್ಞನಾದ ಆ ಶಿಲ್ಪಿ ತನ್ನ ಪ್ರೇಯಸಿಯ ಮನೋವೇದನೆಗೆ ಏನೋ ಕಾರಣವಿರಬೇಕೆಂಬುದನ್ನು ಗ್ರಹಿಸಿದ. ಅದನ್ನು ತಿಳಿಯ ಬೇಕೆಂದು ಕೊಂಡು "ಏನೋ ವೇದನೆ ಇರುವಂತಿದೆ !... ಎಷ್ಟೇ ಸಂತೋಷವನ್ನು ಪ್ರಕಟಿಸಲು ಪ್ರಯತ್ನಿಸುತ್ತಿದ್ದರೂ ಆ ನೋವು ಮಾತ್ರ ಬೇರೆಯಾಗಿಯೇ ನಿಂತಿದೆ, ಏಕೆ ?.... ಯಾವುದೇ ವೇದನೆಗೂ ಅವಕಾಶವಿಲ್ಲವಲ್ಲ...." ಎಂದು ಅನುನಯದಿಂದ ಕೇಳಿದ ಜಕ್ಕಣಾಚಾರ್ಯ.

"ನನಗೇತರ ಮನೋವೇದನೆ ? ನಿಮ್ಮಂತಹ ಶಿಲ್ಪ ಸಾರ್ವಭೌಮರ ಕೈಹಿಡಿದಿರುವ ನನಗೆ ಯಾವುದರ ಕೊರತೆ ಇದೆ ? ನೀವೇ ಸುಮ್ಮನೆ ಹಾಗೆ ಕಲ್ಪಿಸಿಕೊಳ್ಳುತ್ತಿದ್ದೀರಿ. ಅಷ್ಟೇ..." ಎಂದಳು ಸೌಪರ್ಣೀದೇವಿ.

"ನನ್ನ ಕಣ್ಣು ಸುಳ್ಳು ಹೇಳುವುದಿಲ್ಲ. ನಿನ್ನ ಮನೋ ಇಂಗಿತವನ್ನು ಮರೆಮಾಡಿ ಮಾತನಾಡುತ್ತಿರುವೆ. ಮಹಾರಾಣಿಯವರ ಬಳಿ ಮತ ವಿಷಯದ ಚರ್ಚೆ ಬಂದು ಮನಸ್ಸಿಗೆ ಮುಜುಗರವೆನಿಸಿದೆಯೇ ?" ಎಂದು ಮತ್ತೆ ಕೇಳಿದ ಜಕ್ಕಣಾಚಾರ್ಯ.

"ಅಂಥಾದ್ದೇನೂ ಇಲ್ಲ. ಏನೋ ಸ್ವಂತ ವಿಷಯ ಯೋಚಿಸುತ್ತಿದ್ದೆ. ಆದ್ದರಿಂದ ನಿಮಗೆ ಹಾಗೆ ಕಾಣಿಸಿರಬೇಕು ಅಷ್ಟೆ." ಎಂದಳು ಸೌಪರ್ಣೀದೇವಿ ನಗೆಯನ್ನು ಬಲವಂತದಿಂದ ತುಟಿಗಳ ಮೇಲೆ ತರಿಸಿಕೊಳ್ಳುತ್ತಾ.

"ಸ್ವಂತ ವಿಷಯವೆಂದರೆ ಅದರೊಂದಿಗೆ ನನ್ನ ಸಂಬಂಧವೂ ಇರುತ್ತದೆ ಅಲ್ಲವೇ ? ಆದ್ದರಿಂದ ನೀನು ಹೇಳದೆ ಬೇರೆ ಮಾರ್ಗವೇ ಇಲ್ಲ. ದೇಶದಲ್ಲಿ ಹಬ್ಬುತ್ತಿರುವ ವಿಪರೀತವಾದ ಈ ಮತ ರಾಜಕೀಯ ನನ್ನ ಮನಶ್ಶಾಂತಿಯನ್ನು ಕದಡುತ್ತಿದೆ. ಎಷ್ಟೇ ವೈರಾಗ್ಯ ನಿಷ್ಠೆಯನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದರೂ ನಾವು ಮಾಡಬಯಸಿರುವ ಪ್ರಜಾಹಿತಸೇವೆ ಮುಂದೆ ಸಾಗುವಂತಿಲ್ಲ. ಅದರೊಂದಿಗೆ ಈಗ ಪತ್ನಿಯ ಅಂತರಂಗದ ನೋವೂ ತಿಳಿದುಕೊಂಡಿಲ್ಲ ಎಂಬ ಕೊರಗೂ ಸೇರುತ್ತದೆ...." ಎಂದ ಜಕ್ಕಣಾಚಾರ್ಯ ಗಂಭೀರವಾಗಿ.

"ದಯಮಾಡಿ ಮನ್ನಿಸಿ ಸ್ವಾಮಿ. ನಿಮ್ಮ ಮನಕ್ಕೆ ನೋವುಂಟುಮಾಡಬಾರದೆಂದೇ ನಾನು ಈ ವಿಷಯವನ್ನು ತಮ್ಮಿಂದ ದೂರವಾಗಿರಿಸಲು ಪ್ರಯತ್ನಿಸುತ್ತಿದ್ದೇನೆ. ಅಷ್ಟೆ. ನಿಮ್ಮನ್ನು ವಂಚಿಸಬೇಕೆಂದಲ್ಲ. ಸ್ತ್ರೀ ಸಹಜವಾದ ಬಯಕೆಗಳಿಂದ ನಿಮ್ಮ ಮನಶ್ಶಾಂತಿ ಭಂಗಕ್ಕೆ ಕಾರಣವಾಗಿರುವುದಕ್ಕಾಗಿ ದಯಮಾಡಿ ಮನ್ನಿಸಿ" ಎಂದಳು ಕಾತರದಿಂದ ಸೌಪರ್ಣೀದೇವಿ.

"ಏನೇ ಹೇಳಿದರೂ ವಿಷಯವನ್ನು ತಿಳಿಯದಿದ್ದರೆ ನನ್ನ ಮನಕ್ಕೆ ಶಾಂತಿಯೇ ಇರುವುದಿಲ್ಲ" ಎಂದ ಜಕ್ಕಣಾಚಾರ್ಯ ನಿಷ್ಕರ್ಷ ಕಂಠದಲ್ಲಿ.

"ಮಹಾರಾಣಿಯವರು ತಮ್ಮ ಕುಮಾರನ ಹುಟ್ಟುಹಬ್ಬಕ್ಕೆ ಆಶೀರ್ವದಿಸಲು ಕರೆ ಕಳುಹಿಸಿದ್ದರು. ಅಲ್ಲಿಯ ಸಂಭ್ರಮ ಸಂತೋಷಗಳು ನನಗೆ ಬಹು ಪ್ರಿಯವೆನಿಸಿದವು. ಮಹಾರಾಣಿ ಎಷ್ಟೊಂದು

ಅದೃಷ್ಟವಂತರು! ಕಿರುಗೆಜ್ಜೆಗಳ ಸದ್ದಿನೊಂದಿಗೆ ಆ ಮಗು ಮುದ್ದು ಮುದ್ದಾಗಿ ನಡೆಯುತ್ತಿದ್ದರೆ ನೋಡಲು ಎಷ್ಟು ಅಂದವಾಗಿತ್ತು ಗೊತ್ತೇ ? ಆ ದೃಶ್ಯವು ನನ್ನ ಎದೆಯ ಕದವನ್ನು ತಟ್ಟಿ ಎಚ್ಚರಿಸಿತು. ನನಗೆ ಮುವ್ವತ್ತಾಗುತ್ತಾ ಬಂತು..."

ಮುಂದಿನ ಪದಗಳು ಆಕೆಯ ನಾಲಿಗೆಯಿಂದ ಹೊರ ಬರಲಿಲ್ಲ. ಕಣ್ಣುಗಳು ತುಂಬಿ ಹನಿಯುತ್ತಿದ್ದವು. ತನ್ನ ಗಂಡನನ್ನು ನೋಡಲಾರದೆ ಮುಖವನ್ನು ಇನ್ನೊಂದು ಕಡೆಗೆ ತಿರುಗಿಸಿಕೊಂಡಳು.

ಈ ಮಾತಿಗೆ ಜಕ್ಕಣಾಚಾರ್ಯನ ಹೃದಯ ದ್ರವಿಸಿತು. ಮದುವೆಯಾಗಿ ಆ ಮನೆಗೆ ಬಂದಂದಿನಿಂದಲೂ ಆಕೆ ನನಗೆ ಇದು ಬೇಕಿದೆ ಎಂದು ಒಮ್ಮೆಯೂ ಕೇಳಿದವಳಲ್ಲ. ನಿಜವಾಗಿಯೂ ಆಕೆಗೆ ಯಾವುದರ ಕೊರತೆಯೂ ಇರಲಿಲ್ಲ. ಆದರೆ ಸಂತಾನ ಭಾಗ್ಯ ಇಲ್ಲವೆಂಬ ಕೊರತೆಯನ್ನು ತಾನೂ ಗುರ್ತಿಸಿರಲಿಲ್ಲ. ಹೆಣ್ಣು ತಾಯ್ತನದ ಸೌಭಾಗ್ಯ ಬೇಕೆಂದು ಬಯಸುವುದು ಸಹಜ. ಆದರೆ ತನಗೆ ಮಕ್ಕಳಿಲ್ಲ. ಅದು ತನ್ನ ಬದುಕಿನಲ್ಲಿ ಒಂದು ಲೋಪ ಎಂಬುದಾಗಿ ಇದುವರೆವಿಗೂ ಜಕ್ಕಣಾಚಾರ್ಯ ಭಾವಿಸಿದ್ದೇ ಇಲ್ಲ. ಹಾಗೆಲ್ಲಾ ಚಿಂತಿಸಲು ಆತನಿಗೆ ಸಮಯ ಎಲ್ಲಿಯದು ? ಬಾಲ್ಯದಲ್ಲಿಯೇ ತಂದೆಯ ಶಿಲ್ಪಶಾಲೆಯಲ್ಲಿ ಸುಶಿಕ್ಷಿತನಾಗಿದ್ದ. ಕಲಾಯೋಗದಲ್ಲಿ ಆತನಿಗೆ ಸಿದ್ಧಿ ದೊರೆತಿದ್ದಿತು. ದೊಡ್ಡ ದೊಡ್ಡ ಶಿಲ್ಪಗಳ ನಿರ್ಮಾಣದಲ್ಲಿ ಸದಾ ನಿರತನಾಗಿದ್ದ. ಸಾಂಸಾರಿಕ ವಿಷಯಗಳೆಲ್ಲಾ ಯಾಂತ್ರಿಕವಾಗಿಯೇ ನಡೆದು ಹೋಗಿದ್ದವು. ಅವಕ್ಕೆಲ್ಲಾ ಅವನು ನಿಮಿತ್ತ ಮಾತ್ರನಾಗಿದ್ದ. ತನ್ನ ಜೀವನದ ಈ ಭಾಗಕ್ಕೆ ತನ್ನ ಶಿಲ್ಪದ ಉಪಾಂಗಗಳಿಗೆ ಕೊಟ್ಟಿದ್ದಷ್ಟು ಪ್ರಾಧಾನ್ಯವನ್ನೂ ಕೊಟ್ಟಿರಲಿಲ್ಲವೇನೋ ? ಆದರೆ ತನ್ನ ಹನ್ನೆರಡನೆಯ ವಯಸ್ಸಿನಲ್ಲಿಯೇ ದೇವೀ ಉಪಾಸನೆ ಮಾಡಿ ದೇವಿಯನ್ನು ಪ್ರತ್ಯಕ್ಷಗೊಳಿಸಿಕೊಂಡಿದ್ದು ಮಾತ್ರ ಇನ್ನೂ ಚೆನ್ನಾಗಿ ನೆನಪಿದೆ. ಅದೂ ತನ್ನ ಪ್ರಧಾನ ಉದ್ದೇಶಕ್ಕೆ ಕಾರಣವಾದುದರಿಂದ ಮರೆಯುವುದು ಸಾಧ್ಯವಿಲ್ಲವಾಯಿತು. ಅನನ್ಯವಾಗಿ ಶಿಲ್ಪಯೋಗದಲ್ಲಿರುವವನಿಗೆ ಈ ಸಂಸಾರ, ಮಕ್ಕಳು, ಮನೆ ಎಲ್ಲಾ ಹೇಗೆ ತಾನೇ ಮನಸಿನಲ್ಲಿ ಉಳಿಯಲು ಸಾಧ್ಯ ? ಮನೆಯಲ್ಲಿ ಮಕ್ಕಳಿಲ್ಲ ಎಂಬುದು ನೆನಪಾಗುವುದು ಹೇಗೆ ? ತಂದೆ ನಾಗಲಿಂಗ ಸ್ಥಪತಿ ಆಶೀರ್ವದಿಸಿದ ಒಂದು ಸಂದರ್ಭದಲ್ಲಿ 'ಸುಪುತ್ರಾ ಪ್ರಾಪ್ತಿರಸ್ತು' ಎಂದು ಹೇಳಿದ್ದು ನೆನಪಿದೆ. ಆದರೆ ಇತ್ತೀಚಿಗೆ ಅವರು ಕಾಲಧರ್ಮಹೊಂದಿದ್ದಾರೆ. ಮತ್ತೆ ಆ ನೆನಪು ಬರುವ ಅವಕಾಶವೂ ಇಲ್ಲವಾಗಿದೆ. ಹಠಾತ್ತಾಗಿ ಪತ್ನಿ ಈ ವಿಷಯವನ್ನು ಪ್ರಸ್ತಾಪಿಸಿದಾಗ ಒಮ್ಮೆ ಹಿಂತಿರುಗಿ ನೋಡಿದ. ಇದರೊಂದಿಗೆ ಶಾಸ್ತ್ರವಾಸನೆಯೂ ಹೃದಯದಲ್ಲಿ ವ್ಯಾಪಿಸಿತು. 'ಮನುಷ್ಯನಾದವನು ತೀರಿಸಬೇಕಾಗಿರುವ ಮೂರು ಋಣಗಳಲ್ಲಿ ಪಿತೃಋಣವೂ ಒಂದು.' ಕಂಬನಿ ತುಂಬಿಕೊಂಡಿದ್ದ ತಂದೆ ಜಕ್ಕಣನ ಮನಃಪಟಲದ ಮೇಲೆ ಕಾಣಿಸಿಕೊಂಡು ಹೇಳಿದ.

ಇದುವರೆವಿಗೂ ಮನಸ್ಸನ್ನಾಕ್ರಮಿಸಿದ್ದ ರಾಜಕಾರಣದ ಚಿಂತನೆಗಳು ಒಮ್ಮೆಲೆಗೇ ಓಡಿದವು. ಸೌಪರ್ಣೀದೇವಿ ತನ್ನ ಕಣ್ತೆರೆಸಿದ್ದಳು. ಇದುವರೆವಿಗೂ ಇಲ್ಲದ ಸಂತಾನ ಈಗ ತಾನೇ ಹೇಗೆ ಉಂಟಾಗುತ್ತದೆ ? ಸಂತಾನ ಭಾಗ್ಯ ಇಲ್ಲದಿರುವುದಕ್ಕೆ ಏನು ಕಾರಣ ? ಆ ಕ್ಷಣದಲ್ಲಿ ತನ್ನ ಪತ್ನಿಯನ್ನು ಆಚಾರ್ಯನು ಸಂತೈಸಿದ. ಆಕೆಯನ್ನು ತನ್ನ ಮಡಲಿಗೆ ಸೆಳೆದುಕೊಂಡು ತಲೆಯನ್ನು

ನೇವರಿಸುತ್ತಾ ಆಕೆಯ ಹೃದಯಭಾರವನ್ನು ತಾನೂ ಹಂಚಿಕೊಳ್ಳುತ್ತಾ ಆಕೆಯ ದುಃಖವನ್ನು ದೂರಮಾಡಿದ.

ಎಂತಹ ಉತ್ತಮ ವಂಶವಾದರೇನು ? ಎಂತಹ ಆದರ್ಶ ದಾಂಪತ್ಯವಾದರೇನು? ಎಷ್ಟು ವಿದ್ಯೆ, ವಿಜ್ಞಾನ, ಶಿಲ್ಪಕೌಶಲ್ಯಗಳು ಇದ್ದರೇನು ? ಕುಲದೀಪಕನಿಲ್ಲದ ದಂಪತಿಗಳಿಗೆ ಎಲ್ಲವೂ ಶೂನ್ಯವಾಗಿಯೇ ತೋರುತ್ತವೆ. ಶಾಸ್ತ್ರಗಳಲ್ಲಿ ವಿಶ್ವಾಸವಿದ್ದು ಸರ್ವಶಾಸ್ತ್ರಗಳ ರಹಸ್ಯಗಳನ್ನು ಅರಿತಿರುವ ಈ ಶಿಲ್ಪಿಯು ತನಗೆ ಸಂತಾನ ಇಲ್ಲದ್ದಕ್ಕೆ ಕಾರಣ ಹುಡುಕುತ್ತಿದ್ದ. ವೈದ್ಯಶಾಸ್ತ್ರಾನುಸಾರ ತಮ್ಮಲ್ಲಿ ದೋಷವಿಲ್ಲ. ಗ್ರಹ ನಕ್ಷತ್ರಾದಿಗಳ ಪ್ರತಿಬಂಧಕವಿಲ್ಲ. ಆದರೂ ಕಾರಣವೇನು ? ದೈವಾನುಗ್ರಹ ಇಲ್ಲವೆಂದು ಮಾತ್ರವೇ ಹೇಳಬೇಕಷ್ಟೆ. ಈಶ್ವರಾರಾಧನೆಯಿಂದ ಪುತ್ರಸಂತಾನವಾಗುತ್ತದೆ ಎಂದು ಶಾಸ್ತ್ರಹೇಳುತ್ತದೆ. ಈ ರೀತಿ ಪುತ್ರರನ್ನು ಪಡೆದವರ ಕಥೆಗಳನ್ನು ಪುರಾಣಗಳು ಬಹಳವಾಗಿ ಹೇಳುತ್ತವೆ. ಆದ್ದರಿಂದ ತಾನೂ ಈಶ್ವರ ಪೂಜೆ ಮಾಡಬೇಕೆಂದುಕೊಂಡ.

ಹಿಂದೊಮ್ಮೆ ವೀರಬಲ್ಲಾಳ ಪಶ್ಚಿಮ ಸಮುದ್ರ ತೀರದ ಪ್ರದೇಶವನ್ನು ವಶಪಡಿಸಿ ಕೊಳ್ಳಲು ದಂಡಯಾತ್ರೆ ಹೊರಟಿದ್ದ. ಆಗ ಜಕ್ಕಣಾಚಾರ್ಯ ಅರಸರೊಂದಿಗೆ ರಣರಂಗದ ವ್ಯೂಹ ರಚನೆಗೆ ನೆರವಿಗಾಗಿ ಹೋಗಿದ್ದ. ಯುದ್ಧದಲ್ಲಿ ವಿಜಯಿಗಳಾಗಿ ಹಿಂತಿರುಗುತ್ತಿದ್ದಾಗ ಸರಸ್ವತೀ ಪೀಠಾಧಿಪತಿಗಳಾದ ಬ್ರಹ್ಮಾನಂದ ಸ್ವಾಮಿ ಅವರ ದರ್ಶನ ಭಾಗ್ಯ ದೊರೆಯಿತು. ಸ್ವಾಮಿಗಳು ವೇದವೇದಾಂಗ ಪಾರಂಗತರು. ಶಿಲ್ಪರ್ಷಿಯಾದ ಸಾನಗ ಬ್ರಹ್ಮರ್ಷಿ ಗೊತ್ರದಲ್ಲಿ ಹುಟ್ಟಿದ್ದ ಈ ಸ್ವಾಮಿಗಳು ಬಹುಶಾಸ್ತ್ರ ಪಾರಂಗತರಾಗಿದ್ದರು. ಅನೇಕ ಸಂಪ್ರದಾಯ ರಹಸ್ಯಗಳು ಅವರಿಗೆ ಸಿದ್ಧಿಸಿದ್ದವು. ತಮ್ಮ ತಪಶ್ಶಕ್ತಿಯಿಂದ ತ್ರಿಕಾಲ ರಹಸ್ಯವನ್ನು ಅರಿಯಬಲ್ಲ ಸಿದ್ಧಪುರುಷರು. ಜಕ್ಕಣಾಚಾರ್ಯರೊಂದಿಗೆ ಶಾಸ್ತ್ರ ಸಂಬಂಧದ ಮಾತನಾಡುತ್ತಿದ್ದಾಗ 'ಉತ್ತಮ ಶಿಲ್ಪಿಯಾದವನು ವಿಶ್ವಕರ್ಮೋಪಾಸನೆಯನ್ನು ಮಾಡಬೇಕು. ವಿಶ್ವಕರ್ಮೇಷ್ಠಿಯನ್ನು ನಡೆಸಬೇಕು. ಇದರಿಂದ ಸಕಲ ವಿಘ್ನಗಳೂ ದೂರವಾಗಿ ಶಿಲ್ಪಾಚಾರ್ಯನಿಗೆ ಶುಭವಾಗುತ್ತದೆ' ಎಂಬುದನ್ನು ಸಾಧಾರವಾಗಿ ವಿವರಿಸಿದ್ದರು. ಜಕ್ಕಣಾಚಾರ್ಯರ ಭೂತ ಭವಿಷತ್ತುಗಳನ್ನು ಹೇಳುತ್ತಾ 'ನೀವು ಮಹಾಜಾತಕರು. ಸಂತಾನ ಪ್ರಾಪ್ತಿಯೋಗವಿದೆ. ಇಳಿವಯಸ್ಸಿನಲ್ಲಿ ಆಪ್ತರಿಗೇ ಸೋಲಬೇಕಾಗುತ್ತದೆ' ಎಂದೂ ಹೇಳಿದ್ದರು. ಈಗ ಆ ಮಾತುಗಳು ನೆನಪಾದವು. ಕೂಡಲೇ ಮನದಂಗಳದಲ್ಲೆಲ್ಲಾ ಮಲ್ಲಿಗೆಯ ಬೆಳದಿಂಗಳು ಹರಡಿದಂತಾಯಿತು. ಹೆಂಗಸರಿಗೆ ವ್ರತ-ಪೂಜೆ-ಯಜ್ಞ-ದಾನಾದಿಗಳಲ್ಲಿ ತೃಪ್ತಿಯು ಬಹುಬೇಗ ದೊರೆಯುತ್ತದೆ. ಇದರಿಂದ ವಿಶ್ವಶಿಲ್ಪಿಯಾದ ವಿಶ್ವಕರ್ಮನ ವ್ರತವನ್ನು ಆಚರಿಸಿ ಆ ದೇವನ ಅನುಗ್ರಹವನ್ನು ಪಡೆದು ಕೊಳ್ಳೋಣ ಎಂದುಕೊಂಡ.

ಈ ಸಂಕಲ್ಪದಿಂದಲೇ ದಂಪತಿಗಳು ಐದು ದಿನಗಳ ಕಾಲ ವೈದಿಕ ಮಾರ್ಗದಲ್ಲಿ ಗಾಯತ್ರೀ-ವಿಶ್ವಕರ್ಮ ಯಜ್ಞವನ್ನು ಆಚರಿಸಿದರು.

# ೬

ರಾಜ್ಯಾಡಳಿತವು ಬೆಣ್ಣೆಯನ್ನು ತಿನ್ನುವಂತಹ ಸುಲಭದ ಕೆಲಸವಲ್ಲ. ಎಷ್ಟೋ ಆಘಾತಗಳನ್ನು, ಸಮಸ್ಯೆಗಳನ್ನು, ತಂತ್ರಗಳನ್ನು ಎದುರಿಸ ಬೇಕಾಗಿರುತ್ತದೆ. ಆದರೆ ಮನುಷ್ಯರ ಮನಸ್ಸುಗಳು ವಿಚಿತ್ರವಾದುವು. ಒಬ್ಬರ ಉದ್ದೇಶವು ಇನ್ನೊಬ್ಬರಿಗೆ ಹಿಡಿಸುವುದಿಲ್ಲ. ಒಬ್ಬರ ಸಂಕಲ್ಪ ಪೂರ್ತಿಯಾಗಲು ಇನ್ನೊಬ್ಬರು ಸಹಕರಿಸುವುದಿಲ್ಲ. ಅವರಲ್ಲಿ ಅನೇಕ ಮತಗಳು, ಜಾತಿಗಳು, ಗುಂಪುಗಳು, ಅವುಗಳ ಮಧ್ಯೆ ಪರಸ್ಪರ ಘರ್ಷಣೆ. ಒಂದು ರಾಜ್ಯದಲ್ಲಿಯ ಸ್ಥಿತಿಯೇ ಹೀಗಿದ್ದರೆ ಹಲವು ರಾಜ್ಯಗಳಿರುವ ರಾಷ್ಟ್ರದ ಪರಿಸ್ಥಿತಿ ಏನು ?

ಹೊಯ್ಸಳ ರಾಜ್ಯ ಆಗ ಹಲವು ಬಿಕ್ಕಟ್ಟುಗಳನ್ನು ಎದುರಿಸಬೇಕಾಗಿತ್ತು. ಅವುಗಳಲ್ಲಿ ಮೊದಲನೆಯದು ಮತ ಕ್ರಾಂತಿ. ಪೂರ್ವಕಾಲದಿಂದಲೂ ಪ್ರಜೆಗಳು ವೈದಿಕ ಮತವನ್ನು ಅವಲಂಬಿಸಿದ್ದರು. ಇಂದು ಮಹಾರಾಜರದು ಜೈನ ಮತ. ಈ ಬದಲಾವಣೆಯಿಂದ ಹಿಂದೂ ಮತಾಭಿಮಾನಗಳಾದ ಕೆಲವರು ವೀರ ಬಲ್ಲಾಳರನ್ನು ಪದಚ್ಯುತಿಗೊಳಿಸಿ ಬೇರೊಬ್ಬ ಹೈಂದವ ರಾಜನನ್ನು ಸಿಂಹಾಸನದಲ್ಲಿ ಕೂರಿಸಬೇಕೆಂದು ಪ್ರಯತ್ನಿಸುತ್ತಿದ್ದರು. ಆದರೆ ವೀರ ಬಲ್ಲಾಳನು ಅಸಾಧಾರಣ ಮೇಧಾಶಾಲಿ. ತಾನು ಜೈನನಾದರೂ ಪ್ರಜೆಗಳು ಜೈನಮತವನ್ನು ಅವಲಂಬಿಸಬೇಕೆಂದು ಹೇಳಿದವನಲ್ಲ. ಆದರೆ ಪ್ರಜೆಗಳೇ ಜೈನರಾಗಿ ರಾಜನ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಇನ್ನು ಆಡಳಿತವನ್ನು ಯಾರೂ ಬೆರಳುಮಾಡಿ ತೋರಿಸುವಂತೆ ಇರಲಿಲ್ಲ. ಇದರೊಂದಿಗೆ ಅದ್ಭುತವಾದ ಶಿಲ್ಪಕಲಾ ಸೃಷ್ಟಿಯನ್ನು ಮಾಡಿಸಿ ದೇಶದ ಗೌರವವನ್ನು ಅಭಿವೃದ್ಧಿಗೆ ತರುತ್ತಿದ್ದಾನೆ. ಆತನ ಪಟ್ಟದರಸಿ ಶಾಂತಲಾದೇವಿಯು ವೈದಿಕ ಮತಪ್ರೀತಿಯಿಂದ ಹಿಂದೂ ಶಿಲ್ಪವನ್ನು ಅರಳಿಸಿ, ಪ್ರಜಾಪಾಲನೆಯಲ್ಲಿ ಮಹಾರಾಜರಿಗೆ ನೆರವಾಗುತ್ತಿದ್ದಾಳೆ. ಕೀರ್ತಿಮತಿಯು ಜೈನ ಮತಕ್ಕೆ ಸೂಕ್ತ ಪ್ರೋತ್ಸಾಹವನ್ನು ನೀಡುತ್ತಿದ್ದಾಳೆ.

ಈ ಸ್ಥಿತಿಯಲ್ಲಿ ಕೆಲವರು ವೀರಬಲ್ಲಾಳನ ಪತನಕ್ಕೆ ದಾರಿ ಹುಡುಕುತ್ತಿದ್ದರು. ಬಹುಸಂಖ್ಯಾತವಾಗಿದ್ದ ಇತರ ಕೆಲವರ ವಿರೋಧದಿಂದ ಈ ಯೋಜನೆಗಳು ಸೋಲುತ್ತಿದ್ದವು. ಆದರೂ ಯಾವ ಕಾಲದಲ್ಲಿ ಯಾವ ದೇಶದಲ್ಲಿ ಈ ರೀತಿಯ ಕುಟಿಲನೀತಿ ವಿಶಾರದರು ಇರುವುದಿಲ್ಲ ? ಅಂತಹವರ ಯೋಜನೆಗಳನ್ನು ನಿಷ್ಫಲಗೊಳಿಸಲೆಂದೇ ಈ ದಿನ ಹೊಯ್ಸಳ ಸಾಮ್ರಾಜ್ಯವು ತನ್ನ ಶೌರ್ಯವನ್ನು ತೋರಬೇಕಾಗಿತ್ತು.

ಹೊಯ್ಸಳರಿಗೂ, ಚೋಳರಿಗೂ ಕೆಲವು ಪೀಳಿಗೆಗಳಿಂದ ವೈರವಿತ್ತು. ವೀರಬಲ್ಲಾಳ ಕಲಾಪ್ರಿಯನಾಗಿ, ರಾಜಕಾರಣದಲ್ಲಿ ನಿರ್ಲಕ್ಷ್ಯನಾಗಿದ್ದಾನೆ. ರಾಜ್ಯ ರಕ್ಷಣೆಗೆ ಅವಶ್ಯಕವಿರುವಷ್ಟು ಸೈನ್ಯ ಸಂಪತ್ತು ಆತನಲ್ಲಿ ಈಗ ಇಲ್ಲ ಎಂಬ ಸುದ್ದಿಗೆ ಕಿವಿಗೊಟ್ಟು ಚೋಳರು ಹಲವು ವರ್ಷಗಳಿಂದ ತಾವು ಕಾಯುತ್ತಿರುವ ಅವಕಾಶ ಇದೇ ಎಂದುಕೊಂಡರು. ಇದಕ್ಕೆ ಅನುಕೂಲವಾಗಿ ಹಿಂದೂ

ಮತಾಭಿಮಾನಿಯಾದ ವಿಕ್ರಮ ಚೋಳನಿಗೆ ಜೈನನಾದ ವೀರಬಲ್ಲಾಳ ಮತ ವಿರೋಧಿಯಾಗಿ ಕಾಣಿಸಿದ. ಇದಕ್ಕೆ ನೆರವಾಗುವಂತೆ ಹೊಯ್ಸಳ ರಾಜ್ಯದಲ್ಲಿಯ ಮತೀಯ ದ್ವೇಷದ ರಾಜಕೀಯ ಗುಂಪುಗಳು ಹಲವು ಯೋಜನೆಗಳನ್ನು ಹರಡಿದವು. ಅದುವರೆವಿಗೂ ಅಂತಃಕಲಹಗಳಿದ್ದ ಚೋಳ-ಪಾಂಡ್ಯರು ಇಬ್ಬರೂ ಹೊಯ್ಸಳರ ಮೇಲೆ ಯುದ್ಧ ನಡೆಸಲು ಒಂದಾದರು. ಈ ರೀತಿ ಹೊಸ ಬಲ ಪಡೆದುಕೊಂಡ ಚೋಳರಾಜನು ಯುದ್ಧಕ್ಕೆ ಸನ್ನದ್ಧನಾದ.

ಹೀಗೆ ಹೊಯ್ಸಳ ರಾಜ್ಯವು ಮತ ಕ್ರಾಂತಿ, ಇದರೊಂದಿಗೆ ಯುದ್ಧವನ್ನು ಎದುರಿಸಬೇಕಾದ ಸ್ಥಿತಿಯಲ್ಲಿ ಸಿಕ್ಕಿ ಬಿದ್ದಿತ್ತು. ಹೊಯ್ಸಳ ಸೈನ್ಯ ಇತ್ತು. ಆದರೆ ಪ್ರಸ್ತುತ ಸ್ಥಿತಿಯಲ್ಲಿ ಅದು ಶತ್ರು ಸೈನ್ಯವನ್ನು ಸಮರ್ಥವಾಗಿ ಎದುರಿಸಬಲ್ಲುದೇ ಎಂಬುದನ್ನು ಪರಿಶೀಲಿಸಬೇಕಾಗಿತ್ತು. ದಂಡನಾಥರಿಂದ ಪ್ರಾರಂಭಿಸಿ ರಾಜಕೀಯ ಉದ್ಯೋಗಿಗಳನ್ನು ಆಯ್ದು ಸೇರಿಸಿಕೊಳ್ಳಬೇಕಾಗಿತ್ತು. ಹೊಸದಾಗಿ ತಾವು ಗಳಿಸಿಕೊಂಡಿದ್ದ ರಾಜ್ಯದಲ್ಲಿ ಶಾಂತಚಿತ್ತರಾಗಿ ಪ್ರಜೆಗಳ ಪ್ರಯೋಜನಾರ್ಥವಾಗಿ ಹಲವು ಯೋಜನೆಗಳನ್ನು ಕೈಗೊಳ್ಳಬೇಕಾಗಿತ್ತು. ರಾಜ್ಯದಲ್ಲಿರುವ ಮತ ವೈಷಮ್ಯ ನಶಿಸುವಂತೆ ಕ್ರಮ ಕೈಗೊಳ್ಳಬೇಕಾಗಿತ್ತು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಕಳೆದ ಮೂರು ದಿನಗಳಿಂದಲೂ ಮಹಾಮಂತ್ರಿ ಅಕ್ಕಣ್ಣ, ಜಕ್ಕಣಾಚಾರ್ಯ, ಸೇನಾನಿ ಗಂಗರಾಜ, **ಶ್ರೀಮತ್‌ಯಾದವ ನಾರಾಯಣ ಪ್ರತಾಪ ಚಕ್ರವರ್ತಿ ಹೊಯ್ಸಳ ವೀರಬಲ್ಲಾಳದೇವ ರಾಜ್ಯ ಸಮುದ್ಧಾರಕ** ಎಂದು ಬಿರುದು ಗಳಿಸಿದ್ದ ಬಸವದಂಡ ನಾಯಕ, ಸೋಮ ದಂಡನಾಯಕ, ಸೋಮಾಜೀ ಆಚಾರ್ಯ, ಹರಿಹರದೇವ, ಶಿವಕೀರ್ತಿದೇವ ಇವರುಗಳು ಮಹಾರಾಜರೊಂದಿಗೆ ಎಡೆಬಿಡದೆ ವಿಚಾರ ಮಂಥನದಲ್ಲಿದ್ದರು.

ಅಂದು ಸೂರ್ಯೋದಯಾನಂತರ ಮಂತ್ರಾಗಾರದಲ್ಲಿ ಸಭೆ ಪ್ರಾರಂಭವಾಯಿತು. ಒಬ್ಬೊಬ್ಬರು ಒಂದೊಂದು ಬಗೆಯ ಸಲಹೆ ಸೂಚಿಸುತ್ತಿದ್ದಾರೆ. ಆದರೆ ಅವ್ಯಾವೂ ಮಹಾರಾಜರಿಗೆ ಇಷ್ಟವಾದಂತೆ ತೋರಲಿಲ್ಲ. ರಾಜಧಾನಿಯಿಂದ ಮಹಾರಾಜರು ಹೊರಕ್ಕೆ ಬರದಂತೆಯೇ ಈ ಕಾರ್ಯ ನಡೆಯಬೇಕು. ಮತ್ತೆ ಅವರು ಬದುಕಿರುವ ತನಕ ಹೊಯ್ಸಳರ ಮೇಲೆ ದಂಡೆತ್ತಿ ಬರಬಾರದು ಎನಿಸುವಂತಹ ಪಾಠ ಕಲಿಸಬೇಕು. ಅವರ ಮತಮೌಢ್ಯವನ್ನು ಛಿದ್ರಛಿದ್ರಗೊಳಿಸಬೇಕು. ಅಂತಹ ರಾಜಕೀಯ ತಂತ್ರವನ್ನು ಮಹಾರಾಜರು ಹುಡುಕುತ್ತಿದ್ದರು. ಯಾರಿಗೂ ಇದು ಹೇಗೆ ಸಾಧಿಸುವುದು ಎಂಬುದು ಸ್ಫುರಿಸುತ್ತಿಲ್ಲ. ಕೊನೆಗೆ ಜಕ್ಕಣಾಚಾರ್ಯ ಒಂದು ಮಾರ್ಗವನ್ನು ಸೂಚಿಸಿದ :

"ಪ್ರಭೂ, ಕಲಿಯುಗದ ಅರ್ಜುನರಾದ ನಿಮಗೆ ಚೋಳ ನಿಗ್ರಹವು ದೊಡ್ಡ ಸಮಸ್ಯೆ ಖಂಡಿತ ಅಲ್ಲ. ಈ ಕೆಲಸಕ್ಕೆ ಪ್ರಭುಗಳೇ ಹೋಗಬೇಕಾಗಿಲ್ಲ. ಬಸವ ದಂಡನಾಥರು, ಸೋಮ ದಂಡನಾಥರು ಈಗತಾನೇ ಕೊಂಗುವಾಡಿ-ಗಂಗವಾಡಿಗಳನ್ನು ಜಯಿಸಿ ಬಳಲಿದ್ದಾರೆ. ಅವರಿಗೆ ವಿಶ್ರಾಂತಿ ಬೇಕಾಗಿದೆ. ಆದ್ದರಿಂದ ಅವರನ್ನು ಈಗಲೇ ಚೋಳ ನಿಗ್ರಹಕ್ಕೆ ಕಳುಹಿಸುವುದು ಸೂಕ್ತವಲ್ಲ. ಈ ಕೆಲಸವನ್ನು ಗಂಗರಾಜರು, ಹರಿಹರ ದೇವ, ಕೀರ್ತಿದೇವ ಇವರುಗಳೇ ನಡೆಸಲು ಅರ್ಹರು. ಮಹಾಮಂತ್ರಿಗಳಾದ ಅಕ್ಕಣ್ಣನವರ ಬುದ್ಧಿ ಸಾಮರ್ಥ್ಯಗಳ ನೆರವಿನಿಂದ ಇವರು ರಣರಂಗದಲ್ಲಿ ಸುಲಭವಾಗಿ ವಿಜಯಲಕ್ಷ್ಮಿಯನ್ನು ಕೈವಶಮಾಡಿ ಕೊಳ್ಳಬಲ್ಲರು. ಗಂಗರಾಜರ ಶೌರ್ಯಪರಾಕ್ರಮಗಳನ್ನು ತಮಗೆ ಹೊಸದಾಗಿ ಪರಿಚಯಿಸಬೇಕಾಗಿಲ್ಲ. ಅವರ ಭುಜಬಲದಿಂದಲೇ ಅಲ್ಲವೇ ಹೊಯ್ಸಳ ರಾಜ್ಯಲಕ್ಷ್ಮಿಯು ಪಶ್ಚಿಮ ಸಮುದ್ರದ ತನಕ ವಿಸ್ತರಿಸಿರುವುದು ; ದಕ್ಷಿಣದಲ್ಲಿ ಕನ್ಯಾಕುಮಾರಿಯ

ತನಕ ವ್ಯಾಪಿಸಿರುವುದು. ಉತ್ತರದಲ್ಲಿ ತುಂಗಭದ್ರಾನದಿಯ ತಟದ ತನಕ ವಿಸ್ತರಿಸಿ ಅಲ್ಲಿಯೇ ಬಲ್ಲಾಳಪುರವನ್ನು ನಿರ್ಮಿಸಿದ್ದು. ಇಂತಹ ದಂಡನಾಯಕರು ಇರುವಾಗ ಮಹಾರಾಜರಿಗೆ ಯಾವ ಕೊರತೆ ತಾನೇ ಉಂಟಾದೀತು ? ಆತನು ಆಕ್ರಮಿಸಲಿರುವ ಚೋಳಪ್ರಾಂತವನ್ನು ಆತನೇ ಮಹಾಮಂಡಲೇಶನಾಗಿ ಆಳ್ವಿಕೆ ನಡೆಸಲಿ. ಇದರಿಂದ ಮಹಾರಾಜರ ಕಾರ್ಯಭಾರವು ಸ್ವಲ್ಪ ಕಡಿಮೆಯಾಗುತ್ತದೆ. ಯುದ್ಧವ್ಯೂಹಗಳನ್ನು ರಚಿಸಲು ಅನಂತಕೀರ್ತಿಸ್ಥಪತಿಯನ್ನು, ಸೋಮಾಜಿ ಆಚಾರ್ಯನನ್ನು ಕರೆದೊಯ್ಯಬಹುದು. ಆದ್ದರಿಂದ ಗಂಗರಾಜರನ್ನು ಸಮುಚಿತವಾದ ಸೈನ್ಯದೊಂದಿಗೆ ಈ ಕೂಡಲೇ ಚೋಳರಾಜನನ್ನು ಸದೆಬಡಿಯಲು ಕಳುಹಿಸಿ. ಆತನಿಗೆ ನೆರವಾಗಿ ಮಹಾಮಂತ್ರಿ ಅವರೊಂದಿಗೆ ಇರುತ್ತಾರೆ. ಈಗ್ಗೆ ಇಲ್ಲಿರುವ ಸೈನ್ಯವೇ ಸಾಕು. ಶರದೃತುವು ಯುದ್ಧೋತ್ಸಾಹವನ್ನು ವೃದ್ಧಿಗೊಳಿಸುವಂತಿದೆ...."

ಜಕ್ಕಣಾಚಾರ್ಯನ ಮಾತುಗಳು ಮುಗಿಯುವ ಮೊದಲೇ ಮಹಾರಾಜರ ನೋಟವು ಮಹಾಮಂತ್ರಿ ಮತ್ತು ಗಂಗರಾಜರ ಮೇಲೆ ಹರಿಯಿತು. ಅಕ್ಕಣ್ಣ ಮಂತ್ರಿ "ಇದು ಬಹು ಸೂಕ್ತ ಸಲಹೆ" ಎಂದು ಅಂಗೀಕರಿಸಿದ. ಗಂಗರಾಜನು "ಪ್ರಭುಗಳ ಅಪ್ಪಣೆಯಾದರೆ ಸಾಕು ಚೋಳ-ಪಾಂಡ್ಯರ ಸೇನೆಗೆ ಬಂಗಾಳ ಕೊಲ್ಲಿಯ ನೀರು ಕುಡಿಸುತ್ತೇನೆ. ಹೊಯ್ಸಳ ಸಾಮ್ರಾಜ್ಯದ ಸೂಜಿ ಮೊನೆಯಷ್ಟು ನೆಲವು ಅವರಿಗೆ ದೊರೆಯದು. ಚೋಳ ರಾಜ್ಯವನ್ನೂ ನಮ್ಮವಶ ಮಾಡಿಕೊಂಡು ರಾಜ್ಯ ವಿಸ್ತರಣೆಯನ್ನು ನಡೆಸಿಕೊಡುತ್ತೇನೆ. ಚೋಳ-ಪಾಂಡ್ಯ ರಾಜ್ಯಗಳಲ್ಲಿ ಹೊಯ್ಸಳರ ಕೀರ್ತಿ ಸ್ಥಂಭಗಳನ್ನು ನಿರ್ಮಿಸುತ್ತೇನೆ. ತಾವು ಇಲ್ಲಿಯೇ ಇದ್ದು ಸಾಮ್ರಾಜ್ಯ ಪಾಲನೆಯನ್ನು ಗಮನಿಸಿ. ಕೇವಲ ತಮ್ಮ ಆಜ್ಞೆಯೇ ಸಾಕು" ಎಂದ.

ಈ ಮಾತುಗಳನ್ನು ಕೇಳಿದ ವೀರಬಲ್ಲಾಳನ ಹೃದಯ ಭಾರವು ಇಳಿಯಿತು. ಆತನ ಮುಖದಲ್ಲಿ ಆನಂದ ರೇಖೆಗಳು ಕಾಣಿಸಿಕೊಂಡವು. ಜಕ್ಕಣಾಚಾರ್ಯ ಮತ್ತೆ ಇಂತುಹೇಳಿದ:

"ಪ್ರಭುಗಳಲ್ಲಿ ಒಂದು ವಿಷಯ ಅರಿಕೆ ಮಾಡಿಕೊಳ್ಳಬೇಕು. ಇದೊಂದು ರಾಜಕೀಯದ ಹೆಜ್ಜೆ. ಇದನ್ನು ಮಹಾರಾಜರು ಅನ್ಯಥಾ ಭಾವಿಸಬಾರದು. ದೂರದೃಷ್ಟಿಯಿಂದ ಅರ್ಥಮಾಡಿಕೊಳ್ಳಬೇಕು. ಯುದ್ಧಗಳಿಗೆ ಹೋಗುವಾಗ ನಮ್ಮ ಸೈನ್ಯದ ರಥಗಳ ಮೇಲೆ ಜೈನಮತ ಲಾಂಛನಗಳು ಇರುತ್ತವೆ. ಈ ಪದ್ಧತಿಯನ್ನು ಮಹಾರಾಜರು ಈ ಸಂದರ್ಭದಲ್ಲಿ ಸ್ವಲ್ಪ ಬದಲಿಸಬೇಕು. ಹಿಂದೂ ಮತ ಚಿಹ್ನೆಗಳಿರುವ ಪತಾಕೆಗಳನ್ನು ನಮ್ಮ ಸೈನ್ಯವು ಹಾರಿಸಿ ಯುದ್ಧದಲ್ಲಿ ಪಾಲ್ಗೊಳ್ಳಬೇಕು. ಈ ಬದಲಾವಣೆಯಿಂದ ದೊಡ್ಡ ಫಲವೇ ನಮಗೆ ಲಭಿಸುತ್ತದೆ. ಇದನ್ನು ಮಹಾರಾಜರನ್ನು ವಂಚಿಸಲು ಹೇಳುತ್ತಿಲ್ಲ. ಪ್ರಸ್ತುತ ಕಾರ್ಯದ ಯಶಸ್ಸನ್ನು ಗಮನದಲ್ಲಿರಿಸಿಕೊಂಡು ಹೇಳುತ್ತಿದ್ದೇನೆ. ಫಲದೊರೆತ ನಂತರ ಇದರ ಮಹತ್ವವನ್ನು ಪ್ರಭುಗಳು ಪರಿಶೀಲಿಸಬಹುದು"

ಶಿಲ್ಪಾಚಾರ್ಯನ ಈ ಮಾತನ್ನು ಅಕ್ಕಣ್ಣ ದೃಢಪಡಿಸಿದ. ಅಕ್ಕಣ್ಣ ಮಂತ್ರಿಗೆ ಈ ರೀತಿಯ ಅಭಿಪ್ರಾಯ ಮೊದಲೇ ಇತ್ತು. ಆದರೆ ಮಹಾರಾಜರು ತನ್ನನ್ನು ಅಪಾರ್ಥಮಾಡಿಕೊಳ್ಳಬಹುದೆಂಬ ಭಯದಿಂದ ಅದನ್ನು ಹೇಳಲಿಲ್ಲ. ಸಹಜ ವೈರಾಗ್ಯ ಶೀಲನಾದ ಜಕ್ಕಣನ ಬಗ್ಗೆ ಮಹಾರಾಜರಿಗೆ ಭಕ್ತಿಗೌರವಗಳು ಇದ್ದುದರಿಂದಲೇ ಸರಳವಾಗಿ ಆ ವಿಷಯವನ್ನು ಮಹಾರಾಜರಿಗೆ ಆತ ತಲುಪಿಸಿದ್ದ. ರಾಜ್ಯದ ಶ್ರೇಯಸ್ಸಿಗಾಗಿ ಹೇಳುತ್ತಿದ್ದಾರೆ ಎಂದು ನಂಬಿದ ಮಹಾರಾಜರು ಈ ಸಲಹೆಯನ್ನು ಒಪ್ಪಿದರು.

ಸಭೆಯನ್ನು ಮುಗಿಸುತ್ತಿರುವಂತೆಯೇ ಭಟನೊಬ್ಬ ಬಂದು "ಪ್ರಭೂ, ದೇವೋಜ ಶಿಲ್ಪಾಚಾರ್ಯರು ತಮ್ಮ ಆಗಮನಕ್ಕಾಗಿ ಕಾಯುತ್ತಿರುವುದಾಗಿ ತಿಳಿಸಿದ್ದಾರೆ" ಎಂದು ಬಿನ್ನವಿಸಿದ.

ಅಲ್ಲಿದ್ದವರಿಗೇನೂ ಅರ್ಥವಾಗಲಿಲ್ಲ. ಆದರೂ ಮಹಾರಾಜರ ಇಷ್ಟದಂತೆ ಎಲ್ಲರೂ ಕುದುರೆಗಳನ್ನು ಏರಿ ಹೊಯ್ಸಳೇಶ್ವರ ದೇವಾಲಯದಿಂದ ಸ್ವಲ್ಪ ದೂರದಲ್ಲಿ ನಿರ್ಮಾಣ ವಾಗುತ್ತಿದ್ದ ಬಸದಿಯ ಬಳಿಗೆ ಬಂದರು. ಅವರನ್ನು ಅಲ್ಲಿ ದೇವೋಜನೇ ಸ್ವಾಗತಿಸಿದ. ಜೈನ ತೀರ್ಥಂಕರರ ವಿಗ್ರಹಗಳೊಂದಿಗೆ ರೂಪಿಸಿದ್ದ ಬಸದಿಯನ್ನು ತೋರಿಸಿದ.

ಅವುಗಳಲ್ಲಿ ಮಹತ್ತರವಾದ ಶಿಲ್ಪಗಳು ಎಲ್ಲರ ಕಣ್ಣಿಗೂ ಹಬ್ಬವನ್ನುಂಟುಮಾಡಿದವು. ಪಾರ್ಶ್ವನಾಥ ಸ್ವಾಮಿದೇವಾಲಯ. ಅದರಲ್ಲಿ ಅದ್ಭುತವಾದ ಶಿಲ್ಪಗಳು ಕಣ್ಣೆವೆ ಹಾಕದೆ ನಿರುಕಿಸಬೇಕು. ಆ ದೇವಾಲಯದ ಸ್ಥಂಭದ ಮೇಲೆ ಹೂಗಳು, ಬಳ್ಳಿಗಳು ಮೂರ್ತಿಗಳು ಏನೂ ಇಲ್ಲ. ಕಂಭಗಳೆಲ್ಲಾ ಕನ್ನಡಿಗಳಂತೆ ಮಿರುಗುತ್ತಿವೆ. 'ಅವುಗಳಲ್ಲಿ ಪ್ರತಿಬಿಂಬವನ್ನು ನೋಡಿಕೊಳ್ಳುಬಹುದು' ಎಂದು ದೇವೋಜ ಹೇಳಿದಾಗ ಮಹಾರಾಜರು ತಮ್ಮ ಪ್ರತಿಬಿಂಬವನ್ನು ಒಂದು ಕಂಭದಲ್ಲಿ ನೋಡಿದರು. ಅವರ ಮುಖ ಚಕಿತಗೊಂಡಿತು. "ಆಚಾರ್ಯರೇ, ಇದೇನು ವಿಚಿತ್ರ ! ನನಗೇನೂ ಮತಿಭ್ರಮಣೆ ಆಗಿಲ್ಲ ತಾನೇ ? ನನ್ನ ಪ್ರತಿಬಿಂಬ ಕೇವಲ ಸೊಂಟದಿಂದ ಮೇಲ್ಭಾಗಕ್ಕೆ ಮಾತ್ರವೇ ಕಾಣಿಸುತ್ತದೆಯಲ್ಲಾ.... ಸೊಂಟದಿಂದ ಕೆಳಭಾಗ ತಲೆಕೆಳಗಾಗಿ ಮೇಲ್ಭಾಗದೊಂದಿಗೆ ಸೇರಿಕೊಂಡಿದೆಯಲ್ಲಾ ! ಇದು ನನಗೆ ಮಾತ್ರ ಹಾಗೆ ಕಾಣಿಸುವುದೋ ನಿಮ್ಮ ಪ್ರತಿ ಬಿಂಬಗಳು ಹಾಗೆಯೇ ಇವೆಯೋ ?" ಎಂದು ಉದ್ಗರಿಸಿದರು ಮಹಾರಾಜರು.

ನಂತರ ಗಂಗರಾಜ, ಮಹಾಮಂತ್ರಿ, ಜಕ್ಕಣಾಚಾರ್ಯ, ಸೋಮನದಂಡನಾಥರು ತಮ್ಮ ಪ್ರತಿಬಿಂಬಗಳನ್ನು ಆ ಕಂಭದಲ್ಲಿ ನೋಡಿಕೊಂಡರು. ಅವರ ಪ್ರತಿಬಿಂಬಗಳು ಅದೇ ರೀತಿ ಕಾಣಿಸುತ್ತಿದ್ದವು. ಇನ್ನೊಂದು ಕಂಭದಲ್ಲಿ ತಮ್ಮ ಬಿಂಬಗಳನ್ನು ನೋಡಿಕೊಂಡರು. ಅದರಲ್ಲಿ ಎತ್ತರದಲ್ಲಿ ಅರ್ಧಭಾಗವೇ ಕಾಣಿಸುತ್ತಿತ್ತು. ಒಂದರಲ್ಲಿ ಬಲ ಅರ್ಧಭಾಗ ಕಾಣಿಸಿದರೆ ಇನ್ನೊಂದರಲ್ಲಿ ಎಡ ಅರ್ಧಭಾಗ ಕಾಣಿಸುತ್ತಿತ್ತು. ಇನ್ನೊಂದು ಕಂಭದಲ್ಲಿ ಎರಡು ಬಲಪಾರ್ಶ್ವಗಳನ್ನೂ ಬೆಸೆದಂತೆ, ಮತ್ತೊಂದರಲ್ಲಿ ಪ್ರತಿಬಿಂಬವು ತಲೆಕೆಳಕಾಗಿ ಕಾಣಿಸುತ್ತಿತ್ತು. ಈ ಆಶ್ಚರ್ಯಕರ ಪ್ರತಿಬಿಂಬ ಸೃಷ್ಟಿಗೆ ಚಕಿತರಾಗಿ ಅದರಲ್ಲಿ ತನ್ಮಯರಾಗಿದ್ದರು.

ಈ ವಿಚಿತ್ರ ಶಿಲ್ಪ ರಹಸ್ಯವೇನು ? ಅದು ಕಲ್ಲಿನಲ್ಲಿರುವ ರಹಸ್ಯವೋ ಅಥವಾ ಅದನ್ನು ಕಂಡರಿಸಿ ರೂಪಿಸಿದ ಶಿಲ್ಪಿಯ ನೈಪುಣ್ಯವೋ ? ಇದೆಲ್ಲಾ ಶಿಲ್ಪಿಗೇ ತಿಳಿದಿರಬೇಕು. ಮಹಾರಾಜರ ಮನದಲ್ಲಿ ರಾಜಧಾನಿಯಲ್ಲಿ ಜೈನ ಶಿಲ್ಪದ ಕೊರತೆ ಇದೆ ಎಂಬುದನ್ನು ಅರಿತು, ಮಹಾರಾಜರ ಆದೇಶವಿಲ್ಲದೆಯೇ ಅದ್ಭುತವಾದ ಬಸದಿಯನ್ನು ನಿರ್ಮಿಸಿದ ದೇವೋಜ ಶಿಲ್ಪಿಯ ದೃಷ್ಟಿ ವೈಶಾಲ್ಯಕ್ಕೆ ಯಾರು ತಾನೇ ಏನನ್ನು ನೀಡಿ ಋಣಮುಕ್ತರಾಗಲು ಸಾಧ್ಯ ? ವೀರಬಲ್ಲಾಳ ಬಸದಿಯನ್ನೆಲ್ಲಾ ನೋಡಿ ಏನೊಂದೂ ಮಾತನಾಡದೆ ತನ್ನ ಕೊರಳಿನಲ್ಲಿದ್ದ ಪಚ್ಚೆಯ ಪದಕದ ರತ್ನಹಾರವನ್ನು ತೆಗೆದು ದೇವೋಜ ಶಿಲ್ಪಾಚಾರ್ಯನ ಕೊರಳಿಗೆ ತೊಡಿಸಿ "ಧನ್ಯೋಸ್ಮಿ" ಎಂದು ಮಾತ್ರವೇ ಹೇಳಿದ.

ಕಲಾರಾಧಕನಿಗೆ ಅದು ಅರಸಕೊಟ್ಟ ಪ್ರತಿಫಲವೇ ? ಅಲ್ಲ. ಮಹಾರಾಜರ ತೃಪ್ತಿಯ ಸಂಕೇತ. ಅವರ ಕೃತಜ್ಞತೆಗೆ ಅದು ನಿದರ್ಶನ. ಮಹಾರಾಜನಾಗಲಿ, ಶಿಲ್ಪಿಯಾಗಲಿ ಶಾಶ್ವತವಲ್ಲ. ಆದರೆ ಆ ಶಿಲ್ಪ ಮಾತ್ರ ಶಾಶ್ವತ. ಅದು ಜಗತ್ತಿನ ಶಿಲ್ಪಕಲಾರಾಧಕರ ದೃಷ್ಟಿಯನ್ನು ಆಕರ್ಷಿಸಿ ತಮ್ಮ ಹಿರಿಯರನ್ನು ಸದಾ ನೆನೆಯುವಂತೆ ಮಾಡುತ್ತಿರುತ್ತದೆ.

## ೭

ಹಿಂದೂ ದೇಶದಲ್ಲಿ ವಿಶಿಷ್ಟಾದ್ವೈತ ಮತವನ್ನು ಪುನರುದ್ಧರಿಸಿ ಪ್ರಚಾರ ಮಾಡಲು ಶ್ರೀ ಪೆರಂಬೂರಿನಲ್ಲಿ ಶ್ರೀರಾಮಾನುಜಾಚಾರ್ಯರು ಅವತರಿಸಿದ್ದರು. ವೇದ-ವೇದಾಂತಗಳನ್ನು ಆಮೂಲಾಗ್ರವಾಗಿ ಅಭ್ಯಾಸಮಾಡಿ, ತಮಗೆ ಮೊದಲೇ ಪ್ರಚಾರದಲ್ಲಿದ್ದ ಶಂಕರಚಾರ್ಯರ ಅದ್ವೈತ ಮತವನ್ನು ಜೀರ್ಣಿಸಿಕೊಂಡಿದ್ದ ಮಹಾಮಹಿಮರು. ಆದರೆ ಶಂಕರಾಚಾರ್ಯರ ಜಗನ್ಮಿಥ್ಯಾವಾದ, ಅದ್ವೈತಸಿದ್ಧಾಂತ ಅವರಿಗೆ ಸರಿಕಾಣಲಿಲ್ಲ. ಸಕಲ ಬ್ರಹ್ಮಾಂಡಗಳನ್ನೂ ಶ್ರೀಮನ್ ಮಹಾವಿಷ್ಣುವೇ ಸೃಷ್ಟಿಸಿದ್ದಾನೆ. ಆ ದೇವನನ್ನು ತಲುಪಲು ಭಕ್ತಿ-ಪ್ರಪತ್ತಿಗಳೇ ಸಾಧನಗಳು ಎಂದು ಅವರು ಕಂಡುಕೊಂಡಿದ್ದರು. ಕುಲಭೇದಗಳಿಗೆ ಕೂಡ ಅವರು ಪ್ರಾಧಾನ್ಯತೆಯನ್ನು ಕೊಡಲಿಲ್ಲ. ಭಕ್ತಿ, ಜ್ಞಾನ, ಸದಾಚಾರಗಳು ಇರುವವನು ಅಂತ್ಯಜನಾದರೂ ಆರಾಧನೀಯನೇ ಎಂಬ ಸಿದ್ಧಾಂತವನ್ನು ನಂಬಿದ್ದವರು. ಅದೇ ನಂಬಿಕೆಯೊಂದಿಗೇ ರಾಮಾನುಜರು ವೈಶ್ಯರಾದ ತಿರುಕಚ್ಚಿ ನಂಬಿಯನ್ನು ಆಶ್ರಯಿಸಿ ಕಂಚಿಯಲ್ಲಿಯ ವರದರಾಜ ಸ್ವಾಮಿಯ ಕೃಪೆಗೆ ಪಾತ್ರರಾದರು. ತನ್ನ ಗುರು ಉಪದೇಶಿಸಿದ ತಿರುಮಂತ್ರವನ್ನು ವರ್ಣಭೇದವನ್ನು ಅನುಸರಿಸದೆ ಎಲ್ಲರಿಗೂ ಉಪದೇಶಿಸುವ ಕಂಕಣವನ್ನು ಕಟ್ಟಿಕೊಂಡರು.

ವೈಷ್ಣವದಲ್ಲಿಯೇ ಕುಲಭೇದಕ್ಕೆ ಪ್ರಾಧಾನ್ಯತೆ ಇಲ್ಲ. ವೈಷ್ಣವರಾದ ಆಳ್ವಾರ್‌ಗಳಲ್ಲಿ ಬ್ರಾಹ್ಮಣರಿಂದ ಚಂಡಾಲ ಜಾತಿಯ ತನಕ ಇದ್ದಾರೆ. ಅವರೆಲ್ಲರೂ ಪೂಜಾರ್ಹರೆಂದು ಆ ಮತವು ಹೇಳುತ್ತದೆ. ಯಾವ ವ್ಯಕ್ತಿಯಾದರೂ ಸರಿಯೇ ಗುಣಗಳನ್ನು, ಪ್ರವರ್ತನೆಯನ್ನು ಅನುಸರಿಸಿ ಮಹಾತ್ಮನಾಗುತ್ತಾನೆ. ಹುಟ್ಟಿನಿಂದ ಮಾತ್ರವೇ ಹಿರಿಯನಾಗುವುದು ಸಾಧ್ಯವೇ?

ರಾಮಾನುಜಾಚಾರ್ಯರು ಶಂಕರಾಚಾರ್ಯರ ಜ್ಞಾನ ಪ್ರಧಾನವಾದ ಅದ್ವೈತವನ್ನು ಸೋಲಿಸಿ, ಶ್ರೀಮನ್ನಾರಾಯಣ ಪರವಾದ ಪರಾತ್ಪರವನ್ನು ಪ್ರತಿ ಪಾದಿಸುವ ವಿಶಿಷ್ಟಾದ್ವೈತವನ್ನು ಸ್ಥಾಪಿಸಿದರು. ಭಕ್ತಿ ಪ್ರಧಾನವಾದ ಆ ಮತವನ್ನು ಪ್ರಚಾರ ಮಾಡಲೆಂದೇ ತಮ್ಮ ಬದುಕನ್ನು ಆ ಮಹನೀಯರು ಮುಡುಪಿರಿಸಿದರು. ತಮಿಳು, ಕರ್ನಾಟಕಗಳಲ್ಲಿ ಮಾತ್ರವೇ ಅಲ್ಲದೆ ಆಂಧ್ರದಲ್ಲೂ ತಮ್ಮ ಮತವನ್ನು ವ್ಯಾಪಕಗೊಳಿಸಬೇಕೆಂಬ ಸಂಕಲ್ಪವನ್ನು ಕೈಗೊಂಡರು. ದೇಶದಲ್ಲೆಲ್ಲಾ ಶ್ರೀಮನ್ನಾರಾಯಣನ ದೇವಾಲಯಗಳನ್ನು, ಆತನ ಅವತಾರ ಮೂರ್ತಿಗಳನ್ನೂ ಪ್ರತಿಷ್ಠಿಸಿ ಭೂಲೋಕವನ್ನು ಎರಡನೆಯ ವೈಕುಂಠವನ್ನಾಗಿ ಮಾಡಬೇಕೆಂದು ಶ್ರೀರಾಮಾನುಜಾಚಾರ್ಯರು ಆಶಿಸಿದ್ದರು.

ತಾನು ಹುಟ್ಟಿದ ತಮಿಳು ನಾಡಿನಲ್ಲಿ ತನ್ನ ಮತದ ಪ್ರಚಾರವನ್ನು ರಾಮಾನುಜಾಚಾರ್ಯರು ಪ್ರಾರಂಭಿಸಿದರು. ಹಲವು ಮಂದಿ ಪಂಡಿತರನ್ನು ವಾದಗಳಲ್ಲಿ ಗೆಲ್ಲುತ್ತಾ ತಮ್ಮ ಮತ ಸಿದ್ಧಾಂತಗಳನ್ನು ಅವರು ಸ್ವೀಕರಿಸುವಂತೆ ಮಾಡುತ್ತಿದ್ದರು. ಪಂಡಿತ, ಪಾಮರ ಎಂಬ ಭೇದವಿಲ್ಲದೆ ಎಲ್ಲರೂ

ರಾಮಾನುಜ ಮತವನ್ನು ಸ್ವೀಕರಿಸತೊಡಗಿದರು. ಇದರಿಂದ ಅದುವರೆವಿಗೂ ಚೋಳದೇಶದಲ್ಲಿ ಇದ್ದ ಶೈವ ಮತಕ್ಕೆ ದೊಡ್ಡ ಆಘಾತವುಂಟಾಯಿತು. ಶ್ರೀಸಾಮಾನ್ಯರಂತೂ ತಾವು ಶೈವದಲ್ಲಿರಬೇಕೇ ವೈಷ್ಣವರಾಗುವುದು ಒಳ್ಳೆಯದೇ ಎಂದು ಯೋಚಿಸಿ ತೊಡಗಿದರು.

ಶೈವ ಮತಾಭಿಮಾನಿಯಾದ ಚೋಳರಾಜನಿಗೆ ರಾಮಾನುಜರ ಈ ಪ್ರಯತ್ನವನ್ನು ಸಹಿಸುವುದು ಸಾಧ್ಯವಾಗಲಿಲ್ಲ. ವೈಷ್ಣವ ಮತದ ಪ್ರಚಾರವನ್ನು ನಿಲ್ಲಿಸಿ ಎಂದು ಅನೇಕ ಬಗೆಗಳಲ್ಲಿ ಚೋಳರಾಜ ರಾಮಾನುಜರಲ್ಲಿ ಮನವಿಮಾಡಿಕೊಂಡ. ಆದರೆ ಆಚಾರ್ಯರು ಈ ಮಾತಿಗೆ ಕಿವಿಕೊಡಲಿಲ್ಲ. 'ನಾನು ನಂಬಿರುವ ಸಿದ್ಧಾಂತವನ್ನು ಕುರಿತು, ನಾನು ದರ್ಶಿಸಿರುವ ದೇವರನ್ನು ಕುರಿತು ನನ್ನ ನೆರೆಹೊರೆಗೆ ಹೇಳುವುದು ನನ್ನ ಕರ್ತವ್ಯ. ಅವರನ್ನು ಸಂಸಾರ ಸಮುದ್ರದಿಂದ ಪಾರುಮಾಡುವುದು ದೋಷವಲ್ಲ. ಅಲ್ಲವೇ ?' ಎಂದು ಚೋಳರಾಜನಿಗೆ ಉತ್ತರ ಹೇಳಿದರು. ಚೋಳ ಅರಸರೂ ವೈಷ್ಣವ ಮತವನ್ನು ಸ್ವೀಕರಿಸಿ ಧನ್ಯರಾಗಬೇಕೆಂದು ಮನವಿಮಾಡಿಕೊಂಡರು!

ಪರಂಪರೆಯಾಗಿ ತಾನು ನಂಬಿದ್ದ ಶೈವ ಮತವನ್ನು ಕೇವಲ ಒಬ್ಬ ಪಂಡಿತನ ಮಾತು ಕೇಳಿ ತಾನು ನಂಬದ ದೇವರನ್ನು ಉಪಾಸಿಸುವವನೇ ಚೋಳರಾಜ ? ಮಹಾರಾಜ ಅಂಗೀಕರಿಸಲಿಲ್ಲ. ಅರಸನ ಆಜ್ಞೆಯನ್ನು ಧಿಕ್ಕಾರ ಮಾಡಿದ್ದಾರೆಂದು, ನೂತನ ಮತ ಪ್ರಚಾರದಿಂದ ರಾಜ್ಯದಲ್ಲಿ ಶಾಂತಿ ಭಂಗವಾಗುವ ಅವಕಾಶಗಳು ಬಹುವಾಗಿವೆ ಎಂದು ದೋಷಾರೋಪಣೆ ನಡೆಸಿ ಚೋಳರಾಜನು ರಾಮಾನುಜರಿಗೆ ನಾನಾ ಹಿಂಸೆಗಳನ್ನು ಕೊಡಲು ಪ್ರಾರಂಭಿಸಿದ. ಎಲ್ಲಾ ಹಿಂಸೆಗಳನ್ನು ಸಹಿಸಿಕೊಂಡು ತನ್ನ ದೈವದ ಆದೇಶವೆಂದು ತಮ್ಮ ಮತ ಪ್ರಚಾರ ಕಾರ್ಯವನ್ನು ಮುಂದುವರಿಸುತ್ತಲೇ ಇದ್ದರು.

ಇದರಿಂದ ಬೇಸರಗೊಂಡ ಚೋಳರಾಜನು ರಾಮಾನುಜರನ್ನು ಕೊಲ್ಲುವಂತೆ ಅಪ್ಪಣೆ ಮಾಡಿದ. ಈ ವಿಷಯ ಚೋಳರಾಜ್ಯದಲ್ಲಿಯೂ, ನೆರೆಹೊರೆಯ ರಾಜ್ಯಗಳಲ್ಲಿಯೂ ವ್ಯಾಪಿಸಿತು. ತಮ್ಮ ಪ್ರಾಣ ಉಳಿಸಿಕೊಳ್ಳಲು ರಾಮಾನುಜಾಚಾರ್ಯರು ಸ್ವದೇಶದಿಂದ ಓಡಿಹೋಗಬೇಕಾದ ಪರಿಸ್ಥಿತಿ ಉದ್ಭವವಾಯಿತು.

ಚೋಳರಾಜನು ತನ್ನ ರಾಜ್ಯದಲ್ಲಿ ಶೈವಮತವನ್ನು ಭದ್ರಗೊಳಿಸುವ ಯೋಚನೆಮಾಡಿದ. ಆಗ ಆತನಿಗೆ ಜಕ್ಕಣಾಚಾರ್ಯನ ನೆನಪಾಯಿತು. 'ಆತನು ನಾಗಲಿಂಗ ಸ್ಥಪತಿಯ ಮಗ. ಇವರ ಕುಟುಂಬವು ವೈದಿಕ ಶೈವಕ್ಕೆ ಸೇರಿರುವ ಸ್ಥಪತಿಗಳ ಕುಟುಂಬ. ಇವರು ಶಾಕ್ತ ಪೂಜಾಪರಾಯಣರೂ ಹೌದು. ಇವರಿಂದ ಶೈವ ಶಿಲ್ಪಗಳನ್ನು ತನ್ನ ರಾಜ್ಯದಲ್ಲಿ ರೂಪಿಸಿದರೆ ಚೆನ್ನಾಗಿರುತ್ತದೆ. ಬಾಯಿಂದ ಶಿವ ಪರಾತ್ಪರ ತತ್ವವನ್ನು ಎಷ್ಟೇ ಹೇಳಿದರೂ ಜಕ್ಕಣಾಚಾರ್ಯನ ಒಂದು ಶಿಲ್ಪವು ಸಾವಿರ ಉಪದೇಶಗಳಿಂತಲೂ, ನೂರು ಪುಸ್ತಕಗಳಿಗಿಂತಲೂ ಪ್ರಭಾವಶಾಲಿ ಯಾಗಬಲ್ಲದು. ಶಿಥಿಲವಾಗುತ್ತಿರುವ ಶೈವ ಮತದಲ್ಲಿ ಶಕ್ತಿಯನ್ನು ಸ್ಥಾಪಿಸಿ ಪುನರುತ್ಥಾನಗೊಳಿಸಲು ಆ ಶಿಲ್ಪಾಚಾರ್ಯನೇ ಬೇಕು. ಆದರೆ ಆತ ತನಗೆ ಈಗ ದೊರೆಯುವುದು ಹೇಗೆ ? ತನ್ನ ವಿರೋಧಿ ಮಾತ್ರವಲ್ಲ, ಜೈನಮತದ ಹೊಯ್ಸಳ ವೀರಬಲ್ಲಾಳನ ಹೊಯ್ಸಳ ರಾಜ್ಯದ ಆ ಶಿಲ್ಪಿಶೇಖರನು ತನ್ನ ರಾಜ್ಯಕ್ಕೆ ಬರುವುದು ಹೇಗೆ ? ಆತನನ್ನು ಇಲ್ಲಿಗೆ ಬರಮಾಡಿಕೊಳ್ಳುವುದು ಹೇಗೆ ? ಎಂದು ಚೋಳರಾಜನು ಗಂಭೀರವಾಗಿ ಚಿಂತಿಸಿದ. ಕೊನೆಗೆ ಒಂದು ಉಪಾಯ ಹೊಳೆಯಿತು

'ವೀರಬಲ್ಲಾಳ ಶಿಲ್ಪಕಲಾಭಿಮಾನಿ. ಶಿಲ್ಪಕಲೆ ಯಾವ ರಾಜ್ಯದಲ್ಲಿ ವಿಸ್ತಾರವಾದರೂ ಸರಿಯೆ ಅದಕ್ಕೆ ನೆರವಾಗಬೇಕೆಂಬುದು ಅವನ ಸಂಕಲ್ಪ. ಅದಕ್ಕೆ ಅವನು ಎಂದೂ ಅಡ್ಡಿಯಾಗಲಾರ. ಚೋಳಮಂಡಲದಲ್ಲಿ ಜಕ್ಕಣಾಚಾರ್ಯನ ನೇತೃತ್ವದಲ್ಲಿ ಹೊಸ ದೇವಾಲಯಗಳು ರೂಪಿಸಬೇಕಾಗಿದೆ ಎಂದು ಶಿಲ್ಪಾಚಾರ್ಯನನ್ನು ಆಹ್ವಾನಿಸಿದರೆ ಆಯಿತು. ಒಂದು ವೇಳೆ ವೀರಬಲ್ಲಾಳ ಒಪ್ಪದೆ ಇದ್ದರೂ ನೂತನ ಶಿಲ್ಪಗಳ ನಿರ್ಮಾಣಕ್ಕೆ ಕಂಕಣ ಕಟ್ಟಿರುವ ಶಿಲ್ಪಾಚಾರ್ಯನೇ ಮಹಾರಾಜರನ್ನು ಹೇಗೋ ಒಪ್ಪಿಸಿ ಬಂದೇ ಬರುತ್ತಾನೆ. ನಂತರ ಚೋಳಮಂಡಲದಲ್ಲಿ ಶೈವ ಶಿಲ್ಪಗಳೊಂದಿಗೆ ಶೈವ ಮತದ ಪ್ರಚಾರವೂ ತಾನಾಗಿಯೇ ನಡೆಯುತ್ತದೆ'

ಈ ರೀತಿಯ ತೀರ್ಮಾನವಾಗುತ್ತಲೇ ಚೋಳರಾಜನು ತನ್ನ ಅಭಿಪ್ರಾಯವನ್ನು ತಿಳಿಸುತ್ತಾ ಜಕ್ಕಣಾಚಾರ್ಯರನ್ನು ಅಹ್ವಾನಿಸುತ್ತಾ ವಿನಯ ಪೂರ್ವಕ ಲೇಖವನ್ನು ಸಿದ್ಧಪಡಿಸಿ ಚಾರನೊಂದಿಗೆ ಕಳುಹಿಸಿದ.

# ೮

ಜಕ್ಕಣಾಚಾರ್ಯನಿಗೆ ಮಹಾಮಂತ್ರಿ ಪದವಿಯನ್ನು ನೀಡಿ ತನ್ನ ಆಸ್ಥಾನದಲ್ಲಿರಿಸಿಕೊಂಡರೆ ತನ್ನ ರಾಜ್ಯಕ್ಕೆ ಯಾವ ವಿಪತ್ತೂ ಇರುವುದಿಲ್ಲ ಎಂದು ವೀರಬಲ್ಲಾಳ ಭೂಪತಿಯ ಭಾವನೆ. ಆದರೆ ಈ ಆಸೆ ಎಷ್ಟು ಮಾತ್ರ ನೆರವೇರಬಲ್ಲುದು ? ಜಕ್ಕಣಾಚಾರ್ಯನು ಮಂತ್ರಿಪದವಿಯನ್ನೇನು ಮಹಾರಾಜನ ಸಿಂಹಾಸನವನ್ನೇ ಬೇಡ ಎನ್ನುವಷ್ಟು ನಿರ್ಲಿಪ್ತನು. ಆಸ್ಥಾನ ಶಿಲ್ಪಿಯಾಗಿರಲು ಬಹುಕಾಲ ಅಂಗೀಕರಿಸದ ಜಕ್ಕಣಾಚಾರ್ಯ ಕೊನೆಗೆ ಹೇಗೋ ಅಂಗೀಕರಿಸಿದ್ದ. ತಾನು ಯಾವ ಪದವಿಯಲ್ಲಿದ್ದರೂ ತನ್ನ ಸ್ವೇಚ್ಛೆಗೆ ಭಂಗ ಬರಕೂಡದು. ತನಗೆ ತನ್ನ ವ್ರತ, ತಪೋನುಷ್ಠಾನ, ದಾನಗಳಿಗೆ ಸಂಪೂರ್ಣವಾದ ಸ್ವಾತಂತ್ರ್ಯ ಇರಬೇಕು. ತಾನು ಯಾವುದೇ ಬೇರೆಯ ರಾಜ್ಯಕ್ಕೆ ಯಾವುದೇ ಶಿಲ್ಪ ಕಾರ್ಯ ನೆರವೇರಿಸಲು ಹೋಗಲು ತನಗೆ ಅಡ್ಡಿ ಇರಕೂಡದು. ಮುಂತಾದ ಎಲ್ಲಾ ನಿಯಮಗಳನ್ನೂ ಮಹಾರಾಜರು ಅಂಗೀಕರಿಸಿದ ನಂತರವೇ ಆ ಗೌರವದ ಸ್ಥಾನವನ್ನು ಜಕ್ಕಣಾಚಾರ್ಯ ಅಂಗೀಕರಿಸಿದ್ದ. ಜಕ್ಕಣಾಚಾರ್ಯನಂತಹವರು ಯಾರ ಆಸ್ಥಾನದಲ್ಲಿದ್ದರೂ ಅದು ಆ ಆಸ್ಥಾನಕ್ಕೆ ಸಲ್ಲುವ ಮರ್ಯಾದೆಯೇ ಹೊರತು, ಆ ಸ್ಥಾನದಿಂದ ಜಕ್ಕಣಾಚಾರ್ಯನಿಗೆ ಯಾವ ಮರ್ಯಾದೆಯೂ ಹೆಚ್ಚುವಂತಹುದಾಗಿರಲಿಲ್ಲ.

ಇತ್ತೀಚೆಗೆ ರಾಜಕಾರಣದಲ್ಲೂ ಜಕ್ಕಣಾಚಾರ್ಯನು ಭಾಗವಹಿಸಬೇಕಾಗಿ ಬಂದದ್ದು ವೈಯಕ್ತಿಕವಾಗಿ ಆತನಿಗೆ ಇಷ್ಟವಿರಲಿಲ್ಲ. ಆದರೆ ಅದು ದೇಶಸೇವಾಕಾರ್ಯವಾದುದರಿಂದ ಮಾಡದೆ ಬೇರೆ ಮಾರ್ಗವಿರಲಿಲ್ಲ. **ತಮ್ಮ ಬುದ್ಧಿಶಕ್ತಿಯನ್ನು, ಅನುಭವವನ್ನು, ತಿಳಿವನ್ನು ಸದಾ ಲೋಕೋಪಕಾರಕ್ಕೆ ಬಳಸಲೆಂದೇ ವಿದ್ಯಾವಂತರಾದವರು ಪ್ರಯತ್ನಿಸುತ್ತಿರುತ್ತಾರೆ.** ಈಗ ಜಕ್ಕಣಾಚಾರ್ಯನು ಪ್ರಾರಂಭಿಸಿದ್ದ ಶಿಲ್ಪ ಕಾರ್ಯಗಳೂ ಕೂಡ ಬಹುಮಟ್ಟಿಗೆ ಮುಕ್ತಾಯಕ್ಕೆ ಬರುತ್ತಿದ್ದವು. ಉಳಿಕೆಯ ಕೆಲಸವನ್ನು ದೇವೋಜ ಮಾಡಿ ಮುಗಿಸಬಲ್ಲನೆ. ಸೌಪರ್ಣೀದೇವಿಗೆ ನವಮಾಸಗಳಾಗಿದ್ದುದರಿಂದ ಕುಟುಂಬ ಸಮೇತರಾಗಿ ಜಕ್ಕಣಾಚಾರ್ಯ ಕ್ರೀಡಾಪುರಕ್ಕೆ ಹೊರಟ... ಮಹಾರಾಜರಿಗೆ ಜಕ್ಕಣಾಚಾರ್ಯನನ್ನು ಬೀಳ್ಕೊಡುವ ಮನಸ್ಸಿಲ್ಲ. ಸದಾ ರಾಜಧಾನಿಯಲ್ಲಿಯೇ ಇರಬೇಕೆಂಬುದು ಅವರ ಬಯಕೆ. ಆದರೆ ಶಿಲ್ಪಾಚಾರ್ಯನಿಗೆ ಅದು ಇಷ್ಟವಿಲ್ಲ. ಅವಶ್ಯಕವಾದಾಗ ಬರುತ್ತೇನೆ ಎಂದು ಹೇಳಿದ. ತನ್ನ ಶಿಲ್ಪವಿದ್ಯಾಗುರುಕುಲವನ್ನು ನಿರ್ವಹಿಸುವ ಹೊಣೆಗಾರಿಕೆಯೂ ಆ ಶಿಲ್ಪಾಚಾರ್ಯನ ಮೇಲೆಯೇ ಇತ್ತಲ್ಲವೇ?

ಸೌಪರ್ಣೀದೇವಿಯು ತಾಯಿಯಾಗುತ್ತಾಳೆ ಎಂಬ ಸುದ್ದಿ ಬಂಧು-ಮಿತ್ರರಲ್ಲಿ, ಶಿಷ್ಯ, ಪ್ರಶಿಷ್ಯರಲ್ಲಿ ಹರಡಿ ಸಂತೋಷ ಉತ್ಸಾಹಗಳನ್ನು ಮೂಡಿಸಿತು. ಎಲ್ಲರಲ್ಲೂ ವಿಶೇಷವಾದ ಲವಲವಿಕೆ. ಆಕೆಗೆ ಪ್ರಸವಕಾಲ ಸಮೀಪಿಸಿತು.

ವಿಶಾಲವಾದ ಸುಂದರ ಸೌಧದಲ್ಲಿ ಸೌಪರ್ಣೀದೇವಿಯ ಹೆರಿಗೆಗಾಗಿ ಒಂದು ಪ್ರತ್ಯೇಕವಾದ ಕೋಣೆಯನ್ನು ಸಜ್ಜುಗೊಳಿಸಲಾಗಿತ್ತು. ಅಲ್ಲಿರಿಸಬೇಕಾದ ಎಲ್ಲಾ ಪರಿಕರಗಳನ್ನು ಸಾಮಗ್ರಿಗಳನ್ನು ಇರಿಸಲಾಯಿತು. ವೃದ್ಧಾಂಗನೆಯರು, ದಾದಿಗಳು, ಅನುಭವಜ್ಞರು ಸೌಪರ್ಣೀದೇವಿಯ ಶುಶ್ರೂಷೆಗೆ ನಿಂತರು. ಎಲ್ಲರೂ ಪ್ರಸವ ಸಮಯಕ್ಕಾಗಿ ಎದುರು ನೋಡುತ್ತಿದ್ದರು. ಮುಂಜಾನೆಯ ಸೂರ್ಯನು ತನ್ನ ಬಂಗಾರದ ಕಿರಣಗಳನ್ನು ಹೊರಚೆಲ್ಲುತ್ತಾ ಇದ್ದರೆ, ಗಾಳಿ ಮೆಲುವಾಗಿ ಬೀಸುತ್ತಾ ತಂಪೆರೆಯುತ್ತಿತ್ತು. ಹೇಮಾವತಿಯ ಪವಿತ್ರಜಲದಲ್ಲಿ ಮಿಂದು ಮಡಿಯುಟ್ಟ ದುಂಬಿಯು ಪ್ರತಿಹೂವನ್ನು ಪ್ರವೇಶಿಸಿ ಮಧುವಿನ ಸವಿನೋಡಿ ಹೊರಬರುತ್ತಿತ್ತು. ಪ್ರಕೃತಿಯೆಲ್ಲಾ ಸೌಂದರ್ಯ ಪುಲಕಿತಗೊಂಡಿತ್ತು. ಜೋತಿಷ್ಯಾಗ್ರಗಣ್ಯನಾದ ಜಕ್ಕಣಾಚಾರ್ಯ ಸ್ನಾನಾದಿಗಳನ್ನು ಬೆಳಗಿನ ಆಹ್ನಿಕ, ಅನುಷ್ಠಾದಿಗಳನ್ನು ಮುಗಿಸಿ ಆ ಕೋಣೆಯ ಹೊರ ಬಾಗಿಲಿನ ಬಳಿ ಕಂಠ ಮತ್ತು ತಾಳೆಗರಿಯನ್ನು ಸಿದ್ಧವಾಗಿರಿಸಿಕೊಂಡು ದರ್ಭಾಸನದ ಮೇಲೆ ಕುಳಿತ. ಮಗು ನೆಲಕ್ಕೆ ಬೀಳುತ್ತಲೇ ಒಂದು ನಿಂಬೇಹಣ್ಣನ್ನು ತನ್ನತ್ತ ಉರುಳಿಸಬೇಕೆಂದು ಒಬ್ಬ ದಾದಿಗೆ ಮೊದಲೇ ಸೂಚನೆ ಕೊಟ್ಟಿದ್ದ.

ಒಳಗೆ ಕೋಣೆಯಲ್ಲಿ ಪ್ರಸವ ವೇದನೆಯನ್ನು ಅನುಭವಿಸುತ್ತಿದ್ದ ಈ ಸಾಧ್ವಿಗೆ ಸ್ವಲ್ಪ ಹೊತ್ತಿಗೇ ದೇವರ ಅನುಗ್ರಹವಾಗಿ ಸುಖ ಪ್ರಸವವಾಯಿತು. ಅಲ್ಲಿದ್ದವರೆಲ್ಲಾ 'ಗಂಡು ಮಗು' ಎಂದು ಉದ್ಗರಿಸಿದರು. ಕೂಡಲೇ ದಾದಿಯು ನಿಂಬೇಹಣ್ಣನ್ನು ಆಚಾರ್ಯನ ಕಡೆಗೆ ಉರುಳಿಸಿದಳು. ಉರುಳುತ್ತಾ ಬಂದ ನಿಂಬೆಹಣ್ಣು ಅದರ ಮಾರ್ಗಕ್ಕೆ ಅಡ್ಡಲಾಗಿ ನಿಂತ ಬೀಸುವ ಕಲ್ಲಿಗೆ ಸೋಂಕಿ ಮತ್ತೆ ಹಿಂದಕ್ಕೆ ಉರಳಿಕೊಂಡು ಹೋಯಿತು. ದಾದಿಗೆ ಕೂಡಲೇ ಅದು ಗೊತ್ತಾಗಲೇ ಇಲ್ಲ. ಕೆಲವು ನಿಮಿಷಗಳ ನಂತರ ನಿಂಬೇಹಣ್ಣು ಇನ್ನೂ ಕೋಣೆಯಲ್ಲೇ ಇರುವುದನ್ನು ಗಮನಿಸಿದ ದಾದಿ ಅಲ್ಲಿಗೆ ಹೋಗಿ ಅದನ್ನು ಮತ್ತೆ ಉರುಳಿಸಿದಳು. ಆದ ತಪ್ಪನ್ನು ಆಚಾರ್ಯರಿಗೆ ತಿಳಿಸಬೇಕೆಂದುಕೊಂಡಳಾದರೂ ಅಲ್ಲಿದ್ದ ತುರ್ತುಕೆಲಸಗಳು, ಮಗು ಹುಟ್ಟಿರುವ ಸಂಭ್ರಮಗಳ ಒತ್ತಡದಲ್ಲಿ ತರುವಾಯ ಹೇಳಿದರಾಯಿತು ಎಂದುಕೊಂಡು ತನ್ನ ಕೆಲಸದಲ್ಲಿ ಮುಳುಗಿದಳು.

ವಿಧಿ ನಿಯಂತ್ರಣದಂತೆಯೇ ಮನುಷ್ಯನ ಬುದ್ಧಿ ಕೆಲಸ ಮಾಡುತ್ತದೆ ಎಂಬುದು ಸುಳ್ಳಲ್ಲ.

ಜಕ್ಕಣಾಚಾರ್ಯನು ತಾಳೆ ಗರಿಯ ಮೇಲೆ ಜಾತಕ ಚಕ್ರವನ್ನು ಲಿಖಿಸುತ್ತಿದ್ದ. ಆದರೆ ಆತನ ಮುಖಮಾತ್ರ ಕಪ್ಪಿಟ್ಟಿದೆ. ಸಂತೋಷ ಕಾಣದಾಗಿದೆ. ತನ್ನದೇನಾದರೂ ದೋಷವೇನೋ ಎಂದು ನಾಲ್ಕಾರು ಬಾರಿ ಮತ್ತೆ ಲೆಕ್ಕ ಹಾಕಿದ. ಗಣಿತದಿಂದ ಲೆಕ್ಕಿಸಿ ತಾಳೆನೋಡಿದ. ಗ್ರಹಸ್ಫುಟದಲ್ಲಿ ಗುಣಿಸಿದ. ಷಡ್‌ಬಲಗಳಲ್ಲಿ ಪರೀಕ್ಷಿಸಿದ. ಶಿಶುವಿನ ಜಾತಕವು ಶ್ರೇಷ್ಠವಾದುದೇ, ಅಂತಹ ಅದ್ಭುತ ಜಾತಕವನ್ನು ಆತನು ಇದುವರೆವಿಗೂ ಕಂಡಿರಲಿಲ್ಲ. ಆದರೆ ಜಾತಕ ಎಷ್ಟೇ ಒಳ್ಳೆಯದಾಗಿದ್ದರೂ ಅವನು ಜಾರಿಣೀಭವನಾಗಿರಬೇಕಲ್ಲವೇ ? ಇದು ಹೇಗೆ ಸಾಧ್ಯ ? ಪತಿವ್ರತಾಲೋಕಕ್ಕೇ ಆದರ್ಶ ಪ್ರಾಯಳಾಗಿರುವ ಸೌಪರ್ಣೀದೇವಿಯನ್ನು ಆ ರೀತಿ ಅನುಮಾನದಿಂದ ಕಾಣುವುದು ಎಂದರೆ ಅದಕ್ಕಿಂತಲೂ ಮಹಾಪರಾಧ ಬೇರಿಲ್ಲ. ಅಗ್ನಿಗೆ ಗೆದ್ದಲು ಹಿಡಿಯಬಹುದು, ಪವಿತ್ರೋದಕವು ಅಪವಿತ್ರವಾಗಬಹುದು, ಪಂಚ ಭೂತಗಳು ತಮ್ಮ ಧರ್ಮವನ್ನು ಬಿಟ್ಟು ವ್ಯವಹರಿಸಬಹುದು ಆದರೆ ಸೌಪರ್ಣೀದೇವಿ ಮಾತ್ರ ಈ ರೀತಿಯ ಆರೋಪಕ್ಕೆ ಸರ್ವಥಾ ಯೋಗ್ಯಳಲ್ಲ. ಇಂತಹ

ದೋಷವನ್ನು ಆಕೆಯ ಮೇಲೆ ಹೊರಿಸಿದರೆ ಜಕ್ಕಣ ಎಷ್ಟೇ ದೊಡ್ಡವನಾದರೂ ಲೋಕದ ಧಿಕ್ಕಾರವನ್ನು ಎದುರಿಸಬೇಕಾದುದೇ. ಎಂತಹ ವಿರೋಧಿಯಾದರೂ ಆಕೆಯ ಶೀಲ, ಗುಣಗಳನ್ನು ಶಂಕಿಸುವುದಿಲ್ಲ. ಹಾಗಿದ್ದರೆ ಶಾಸ್ತ್ರವೇ ತಪ್ಪಾಗಿರಬೇಕು. ಶಾಸ್ತ್ರದಲ್ಲಿ ಅಸಾಧಾರಣ ಪಾಂಡಿತ್ಯಗಳಿಸಿರುವ ತಾನೇ ಅದನ್ನು ನಂಬದಿದ್ದರೆ ಇನ್ನಾರು ತಾನೇ ಶಾಸ್ತ್ರವನ್ನು ನಂಬಲು ಸಾಧ್ಯ ?

ಜಕ್ಕಣಾಚಾರ್ಯನ ಹೃದಯದಲ್ಲಿ ದೊಡ್ಡ ಬಿರುಗಾಳಿ ಎದ್ದಿತು. ಸಾಧ್ವಿಯಾದ ಹೆಂಡತಿಯನ್ನು ಅನುಮಾನಿಸುವುದೇ ? ಅಥವಾ ಶಾಸ್ತ್ರವನ್ನು ನಿಂದಿಸುವುದೇ ? ಆತ ಯಾವ ಕಡೆಯೂ ತೀರ್ಮಾನಿಸಲಾರದಾದ. ಬಂಧುಗಳು, ಆಳುಗಳು, ಶಿಷ್ಯರು ಎಲ್ಲರೂ ಬಹುಸಂಭ್ರಮದಿಂದ ಓಡಾಡುತ್ತಿದ್ದಾರೆ. ಅವರ್‍ಯಾರಿಗೂ ತಮ್ಮ ಆಚಾರ್ಯನ ಹೃದಯದಲ್ಲಿ ಎದ್ದಿದ್ದ ಈ ಬಿರುಗಾಳಿ ಬಗ್ಗೆ ಗಮನವೇ ಇರಲಿಲ್ಲ. ಎಷ್ಟೇ ರೀತಿ ಯೋಚಿಸಿದರೂ ಜಕ್ಕಣಾಚಾರ್ಯನಿಗೆ ಶಾಸ್ತ್ರದ ಮೇಲಿನ ನಂಬಿಕೆಯೇ ಬಲಗೊಂಡಿತು. ಆದರೂ ಮಹಾಸಾಧ್ವಿಯಾದ ತನ್ನ ಪತ್ನಿಯ ಮೇಲೆ ಹೃದಯ ಪೂರ್ವಕ ದೋಷಾರೋಪಣೆ ನಡೆಸಲಾರದೆ ಇದೆಲ್ಲಾ ವಿಧಿವಿಲಾಸ ಎಂದು ಮಾತ್ರವೇ ಭಾವಿಸಿದ.

ಇದಕ್ಕೂ ಸ್ವಲ್ಪ ಮೊದಲೇ ಚೋಳಭೂಪಾಲನು ಜಕ್ಕಣಾಚಾರ್ಯನಿಗೆ ಕಳುಹಿಸಿದ್ದ ಆಹ್ವಾನ ತಲುಪಿತ್ತು. ದೇಶದಲ್ಲಿ ನಡೆಯುತ್ತಿದ್ದ ಮತಗಳ ಮಧ್ಯೆಯ ಉನ್ಮಾದ ವರ್ತನೆ, ದುರಭಿಮಾನದ ಮಾತುಗಳು ಆತನ ಮನವನ್ನು ಈಗಾಗಲೇ ಕಲಕಿತ್ತು. ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುವ ಏಕೈಕ ಭಗವದ್ವಸ್ತುವಾದ ಪರಮಾತ್ಮ ತತ್ತ್ವವನ್ನು ಮನುಷ್ಯರು ಅರ್ಥಮಾಡಿಕೊಳ್ಳದೆ ಇರುವುದಕ್ಕೆ ಆತ ಬಹುವಾಗಿ ಚಿಂತಿಸಿದ್ದ. ಶಿಲ್ಪ ನಿರ್ಮಾಣದೊಂದಿಗೇ ಮತವಿರೋಧವನ್ನು ಪರಿಹರಿಸಿ ಸಮನ್ವಯದ ಮಾರ್ಗವೊಂದನ್ನು ತೋರಬೇಕಾದ ಅವಶ್ಯಕತೆಯು ಬಹುವಾಗಿದೆ ಎಂಬುದನ್ನು ಜಕ್ಕಣಾಚಾರ್ಯ ಗುರ್ತಿಸಿದ್ದ. ಶಿಲ್ಪ ನಿರ್ಮಾಣದ ಮಾತು ಹೇಗಾದರೂ ಇರಲಿ ಶ್ರೀ ರಾಮಾನುಜಾಚಾರ್ಯರಿಗೆ ಒದಗಿರುವ ಸಂಕಟವನ್ನು ಪರಿಹರಿಸ ಬೇಕಾಗಿರುವುದು ತನ್ನ ಧರ್ಮ ಎಂದು, ಅದಕ್ಕಾಗಿಯಾದರೂ ತಾನು ಚೋಳಮಂಡಲಕ್ಕೆ ಹೋಗಲೇ ಬೇಕಾಗಿದೆ ಎಂದುಕೊಂಡ.

'ರಾಮಾನುಜರು ಕಾರಣಜನ್ಮರು. ಅವರು ಸಾಯಬಾರದು. ಅಂತಹವರು ದೀರ್ಘಾಯುಷ್ಕರಾಗಿ ತಮ್ಮ ಹುಟ್ಟಿನ ಗುರಿಯನ್ನು ತಲುಪಬೇಕು. ಹಾಗಾಗದಿದ್ದರೆ ಲೋಕಕ್ಕೇ ಅಪಾರವಾದ ನಷ್ಟ. ಇದಕ್ಕಾಗಿ ನಿನ್ನ ಪಾಲಿನ ಕೆಲಸವನ್ನು ನೀನು ನಿರ್ವಹಿಸಲೇಬೇಕು. ನಂತರ ನಿನ್ನ ಕುಟುಂಬದ ಸಮಸ್ಯೆ. ಮೊದಲಿಗೆ ವಿಶ್ವಕುಟುಂಬದ ಹಿತವನ್ನು ಕಾಪಾಡು. ಅದೇ ಈಗ ಬಹುಮುಖ್ಯ' ಎಂದು ಜಕ್ಕಣಾಚಾರ್ಯನ ಒಳಮನದಲ್ಲಿ ಯಾರೋ ಹೇಳಿದಂತೆ ಕೇಳಿಸಿತು.

ಈ ಪರಿಸ್ಥಿತಿಯಲ್ಲಿ ಅಂತರಾತ್ಮನ ಮಾತೇ ಸಾಧು ಎನಿಸಿತು. ಪ್ರಸ್ತುತದಲ್ಲಿ ಗೃಹ ಪರಿತ್ಯಾಗವೇ ತನ್ನ ಕರ್ತವ್ಯ ಎಂದುಕೊಂಡ. ತಾಳೇ ಗರಿ, ಕಂಠವನ್ನು ಅಲ್ಲಿಯೇ ಬಿಟ್ಟು ಆ ಮುಂಬೆಳಗಿನಲ್ಲಿಯೇ ಮನೆಯಿಂದ ಹೊರಕ್ಕೆ ಹೊರಟ ಆಚಾರ್ಯ.

# ೬

ದ್ವಾರಸಮುದ್ರವು ವಿಜಯೋತ್ಸವದ ಸಂತೋಷದಿಂದ ವಿಜೃಂಭಿಸಿತು. ಬೀದಿಗಳೆಲ್ಲವೂ ಅಲಂಕೃತವಾಗಿದ್ದವು. ಮನೆ ಮನೆಗೂ ಮಾವಿನ ಎಲೆಯ ತೋರಣಗಳು. ಮನೆಯ ಅಂಗಳಗಳನ್ನು ಕಸ್ತೂರಿಯ ಕಲಸಿನಲ್ಲಿ 'ಸಾರಿಸಿ ಸುಂದರವಾದ ರಂಗವಲ್ಲಿಗಳಿಂದ ಅಲಂಕರಿಸಿದ್ದರು. ಅಲ್ಲಲ್ಲಿ ನೃತ್ಯ-ಗೀತ-ವಾದ್ಯ ಮೇಳಗಳು ನಡೆಯುತ್ತಿದ್ದವು. ಬೀದಿಗಳಲ್ಲಿ ಬಾಲಕರು ಹಿರಿಯರು ಸೇರಿಕೊಂಡು 'ನೊಣಂಬವಾಡಿಗೊಂಡ, ತಲಕಾಡು ಗೊಂಡ, ವೀರಗಂಗ ವೀರಬಲ್ಲಾಳ ಮಹಾರಾಜರಿಗೆ ಜಯವಾಗಲಿ' 'ಶಿಲ್ಪಕಲಾ ಪೋಷಕನಿಗೆ ಜಯವಾಗಲಿ' 'ಮಹಾ ಸೇನಾಧಿಪತಿ ಗಂಗಾರಾಜನಿಗೆ ಜಯವಾಗಲಿ' ಎಂದು ಜಯಕಾರ ಮಾಡುತ್ತಿದ್ದರು. ಇದರೊಂದಿಗೆ ಹೊಯ್ಸಳರಾಜ್ಯದ ವಿಜಯಗೀತೆಯನ್ನು ಹಾಡುತ್ತಾ ಇದ್ದರು. ರಾಜಧಾನಿಯಲ್ಲಿರುವ ಯುವಕರೆಲ್ಲರೂ ಯಾವುದೋ ದೊಡ್ಡ ಕಾರ್ಯಕ್ರಮಕ್ಕೆ ಹೋಗಬೇಕೆಂದು ಬೇಗಬೇಗ ತಮ್ಮ ಕೆಲಸಗಳನ್ನು ಮುಗಿಸುತ್ತಿದ್ದರು. ಸ್ತ್ರೀಯರೂಕೂಡ 'ಆ ರತ್ನಾಭಿಷೇಕ ಮಹೋತ್ಸವವನ್ನು ನಾವು ಕಣ್ಣಾರೆ ಕಂಡು ಪುನೀತರಾಗಬೇಕು' ಎಂದು ಕಾತರರಾಗಿ ಮನೆಗೆಲಸಗಳನ್ನು ಬೇಗಬೇಗ ಮುಗಿಸುತ್ತಿದ್ದರು. ರಾಜಧಾನಿಯಲ್ಲಿಯ ಉತ್ಸಾಹ ವರ್ಣಿಸುವುದು ಸಾಧ್ಯವಿರದಷ್ಟು ಸಂಭ್ರಮ, ಸಡಗರಗಳು ತುಂಬಿದ್ದವು.

ಗಂಗರಾಜನು ಚೋಳರನ್ನು ಓಡಿಸಿ ಸೇಲಂ, ಕೊಯಮತ್ತೂರಿನ ಭಾಗಗಳನ್ನು ವಶಪಡಿಸಿಕೊಂಡು ವಿಜಯಲಕ್ಷ್ಮಿಯನ್ನು ವರಿಸಿ ಹಿಂದಿರುಗಿ ಬಂದಿದ್ದುದೇ ಈ ಉತ್ಸವಗಳಿಗೆ ಕಾರಣವಾಗಿತ್ತು. ರಾಜ್ಯದ ಗೆಲುವಿಗೆ ಕಾರಣರಾದ ಎಲ್ಲರನ್ನೂ ಯಥೋಚಿತವಾಗಿ ಸನ್ಮಾನಿಸಬೇಕೆಂಬುದು ಆ ಉತ್ಸವದ ಉದ್ದೇಶವಾಗಿತ್ತು. ದಕ್ಷಿಣಾಪಥದ ಶಿಲ್ಪ ಚಕ್ರವರ್ತಿ, ಶಿಲ್ಪಕಲಾಜ್ಯೋತಿಯಾದ ಜಕ್ಕಣಾಚಾರ್ಯಗೆ ಈ ಸಂದರ್ಭದಲ್ಲಿ ರತ್ನಾಭಿಷೇಕವನ್ನು, ದೇವೋಜ ಶಿಲ್ಪಾಚಾರ್ಯನಿಗೆ ಕನಕಾಭಿಷೇಕವನ್ನು ನಡೆಸಬೇಕೆಂದು ವೀರಬಲ್ಲಾಳ ಮಹಾರಾಜರು ಮುಹೂರ್ತವನ್ನು ನಿರ್ಣಯಿಸಿದ್ದರು. ಎಲ್ಲಾ ಸಮಾರಂಭಗಳೂ ಮಹಾರಾಜರ ರಾಜಸಭೆ ನಡೆಯುವ ವಿಜಯ ಮಂಟಪದಲ್ಲಿಯೇ ಏರ್ಪಾಟಾಗಿತ್ತು. ಅಂದು ಮಂಟಪದ ಅಲಂಕರಣವನ್ನು ವರ್ಣಿಸಲು ಸಾಧ್ಯವಿರಲಿಲ್ಲ. ಐನೂರಕ್ಕೂ ಹೆಚ್ಚು ಮಂದಿ ಶಿಲ್ಪಿಗಳೂ, ಚಿತ್ರಕಾರರೂ, ವಾಸ್ತುಕಲಾ ವಿಶಾರದರೂ ಆ ಮಂಟಪದಲ್ಲಿ ಉಪಸ್ಥಿತರಿದ್ದರು. ಗೋಡೆಗಳ ಮೇಲೆ ಮಹಾಪುರುಷರ ಚಿತ್ರಗಳು, ಜಿನ ಮತ್ತು ಹಿಂದೂ ಧರ್ಮಗಳ ಹಲವಾರು ಘಟ್ಟಗಳ ಚಿತ್ರಗಳು ಅಲ್ಲಿದ್ದವು.

ಸಂಜೆ ನಾಲ್ಕು ಗಂಟೆಗೆ ಸಭೆ ಕೂಡಿತು. ಈ ಅಭಿಷೇಕೋತ್ಸವಕ್ಕೆ ಆಂಧ್ರ, ಕಳಿಂಗ, ಚೋಳ, ಪಾಂಡ್ಯ, ಕೇರಳಾದಿ ದೇಶಗಳಿಂದಲೂ ಶಿಲ್ಪಿಗಳು, ಕಲಾವಿದರು, ನಿರೀಕ್ಷೆಗೂ ಮಿಗಿಲಾಗಿ ಬಂದಿದ್ದರು. ಜಕ್ಕಣಾಚಾರ್ಯನಂತಹ ಶಿಲ್ಪಮಾರ್ತಂಡನ ರತ್ನಾಭಿಷೇಕವೆಂದರೆ ಯಾರು ತಾನೆ ಬರಲು ತವಕಿಸುವುದಿಲ್ಲ ? ದಾಕ್ಷಿಣಾತ್ಯ ಶಿಲ್ಪದಲ್ಲಿ ಪ್ರತ್ಯೇಕವೆನಿಸುವ ಹೊಯ್ಸಳ ಶೈಲಿಯನ್ನು ರೂಪಿಸಿ

ಶಿಲಾಶಿಲ್ಪವನ್ನು ಅತ್ಯಂತ ವಿಸ್ತಾರವಾಗಿ ಬೆಳೆಸಿದ ಸ್ಥಪತಿ ಜಕ್ಕಣಾಚಾರ್ಯ. ಈ ಬಗ್ಗೆ ಪೆಂಡೋಟದ ಮಹಾರಾಜರು ಕೇಳಿದ್ದರು. ಪೆಂಡೋಟದ ಶಿಲ್ಪಿಗಳೇನು ಸಾಮಾನ್ಯರಲ್ಲ. ಅಮರಾವತಿ, ನಾಗಾರ್ಜುನಕೊಂಡದ ಶಿಲ್ಪಗಳನ್ನು ನಿರ್ಮಿಸಿದವರು. ಸಾಂಚಿ, ಸಾರನಾಥಗಳಲ್ಲಿ ಬೌದ್ಧಶಿಲ್ಪವನ್ನು ಸ್ಥಾಪಿಸಿದ ಮಹಾಶಿಲ್ಪಿಗಳ ವಂಶಕ್ಕೆ ಸೇರಿದವರು. ಗಾಂಧಾರ ಶೈಲಿಗಿಂತಲೂ ಆಂಧ್ರ ಶೈಲಿ ಅಥವಾ ಅಮರಾವತಿ ಶೈಲಿ ಎಂದು ಗುರ್ತಿಸುವಂತಹ ಪ್ರತ್ಯೇಕ ಶೈಲಿಯ ಪ್ರವರ್ತಕರಾಗಿದ್ದವರ ವಂಶಜರು. ಅವರಿಗೆ ಹೊಸದಾದ ಹೊಯ್ಸಳ ಶೈಲಿಯನ್ನು ನೋಡಬೇಕೆಂಬ ಬಯಕೆಯಾಗಿತ್ತು. ಇದರೊಂದಿಗೆ ಜಕ್ಕಣಾಚಾರ್ಯ ಅದ್ಭುತ ಶಿಲ್ಪಕಲಾ ಶಾಸ್ತ್ರಜ್ಞನೆಂದು, ಶಿಲ್ಪಾಚಾರ್ಯನಲ್ಲಿ ಇರಬೇಕಾದ ಶಾಸ್ತ್ರೋಕ್ತವಾದ ಎಲ್ಲಾ ಲಕ್ಷಣಗಳೂ ಆತನಲ್ಲಿ ಮೂರ್ತೀಭವಿಸಿವೆ ಎಂದೂ, ವಿಶೇಷವಾದ ಆಧ್ಯಾತ್ಮಿಕ ಸಂಪತ್ತು ಆತನಲ್ಲಿ ಉಂಟೆಂದೂ ಕೇಳಿದ್ದು, ಇಂತಹ ಮಹಾನುಭಾವನನ್ನು ದರ್ಶಿಸಿ, ಆತನ ಸನ್ಮಾನ ಸಮಾರಂಭದಲ್ಲಿ ಭಾಗವಹಿಸಿ ಧನ್ಯರಾಗಬೇಕೆಂದು ಅವರು ಆಗಮಿಸಿದ್ದರು.

ಇದಕ್ಕೆ ಪೂರಕವಾಗಿ ದೇವೋಜ ಶಿಲ್ಪಾಚಾರ್ಯನಿಗೆ ಆಂಧ್ರದೇಶದಲ್ಲಿ ಬಾಂಧವ್ಯವೂ ಇತ್ತು. ಆದ್ದರಿಂದ ಅವರಿಗೆ ವೀರಬಲ್ಲಾಳರ ಆಹ್ವಾನ ತಲುಪಿತ್ತು. ಕಾರ್ಯಂಪೂಡಿಯಿಂದ ನಾಪೋಜು, ಪೋಕೋಜು, ಲುಲ್ಲಪಾಚಾರ್ಯರೂ, ಕಾಕತೀಯ ರಾಜ್ಯದಿಂದ ತ್ರಿಲೋಚನಾಚಾರ್ಯ, ವಿಶ್ವೇಶ್ವರ ಸ್ಥಪತಿ, ಗನ್ನಮಾಚಾರ್ಯರು ತಮ್ಮ ಶಿಷ್ಯರೊಂದಿಗೆ ಬಂದಿದ್ದರು. ಅಲಂಪುರದಲ್ಲಿ ಶಿಲ್ಪಸೌಂದರ್ಯಕ್ಕೆ ಪ್ರಖ್ಯಾತವಾಗಿದ್ದ ವಿಶ್ವಬ್ರಹ್ಮದೇವಾಲಯವನ್ನು ನಿರ್ಮಿಸಿ ಪ್ರಸಿದ್ಧರಾಗಿದ್ದ ಕಳಾಧರ ಸ್ಥಪತಿಯ ವಂಶಜರು ಬಂದಿದ್ದರು. ಉತ್ಕಳದಿಂದ ಜಗತ್‌ಪ್ರಸಿದ್ಧರಾಗಿದ್ದ ಶಿಲ್ಪವಂಶೀಯರು ಬಂದಿದ್ದರು. ಚೋಳರಾಜ್ಯದಿಂದ ಆಸ್ಥಾನ ಶಿಲ್ಪಿಗಳು ಬರಲು ರಾಜಕೀಯವಾದ ಕಾರಣಗಳು ತಡೆಯಾಗಿದ್ದರೂ ಕೆಲವು ಶಿಲ್ಪಕುಮಾರರು ಬಂದಿದ್ದರು. ಪಾಂಡ್ಯರಾಜ್ಯದಿಂದ ಮಹಾಶಿಲ್ಪಿ ವೆಂಕಟರಮಣ ಸ್ಥಪತಿಗಳು ಬಂದಿದ್ದರು. ಇನ್ನೂ ಅನೇಕ ಪಂಡಿತೋತ್ತಮರು, ಕವಿಗಳು ಉಚಿತಾಸನಗಳಲ್ಲಿ ಮಂಡಿಸಿದ್ದರು. ಎಲ್ಲರೂ ಮಹಾಶಿಲ್ಪಿಯ ಬರವಿಗಾಗಿ ಕಾಯುತ್ತಿದ್ದರು. ಅಂತಃಪುರದ ರಾಣೀವಾಸವು ಸಭೆಗೆ ಕಾಣಿಸದಂತೆ ಉಚಿತ ಸ್ಥಳಗಳಲ್ಲಿ ಸಭಾಕಲಾಪವನ್ನು ನೋಡಲು ಕಾತರದಿಂದ ಕುಳಿತಿದ್ದರು.

ವಂದಿಮಾಗಧರು 'ಸಮಧಿಗತ ಪಂಚಮಹಾಶಿಲ್ಪ ಮಹಾಮಂಡಲೇಶ್ವರ ದ್ವಾರಾವತೀ ಪುರವರಾಧೀಶ್ವರಾ ಯದುವಂಶಾಂಬರ ದ್ಯುಮಣಿ ಸಾಮಂತ ಚೂಡಾಮಣಿ ರಾಜಿರಾಜಿತ ಪಾದಾಂಭೋಜ ಸಮರನಿಶ್ಶಂಕ ಪ್ರತಾಪ ಚಕ್ರವರ್ತಿ ಹೊಯ್ಸಳ ವೀರಬಲ್ಲಾಳ ದೇವ ಚಕ್ರವರ್ತಿ ಬಹುಪರಾಕ್, ತಲಕಾಡುಗೊಂಡ, ನೊಣಂಬವಾಡಿಗೊಂಡ, ವೀರಗಂಗ, ವೀರಬಲ್ಲಾಳ ದೇವ ಚಕ್ರವರ್ತಿ ಬಹುಪರಾಕ್....' ಎಂದು ಮಹಾರಾಜರ ಆಗಮನವನ್ನು ಸೂಚಿಸುತ್ತಾ ಪರಾಕು ಹೇಳುತ್ತಿದ್ದರು.

ಸಭೆಯನ್ನು ಪ್ರಾರಂಭಿಸಲಾಯಿತು. ಜಕ್ಕಣಾಚಾರ್ಯ ಮತ್ತು ದೇವೋಜರಿಬ್ಬರೂ ಬರುವುದರಲ್ಲಿ ಸ್ವಲ್ಪ ತಡವಾಗುವುದೆಂದು ತಿಳಿಸಿ ಉಳಿದವರಿಗೆ ಸಲ್ಲಿಸಬೇಕಾಗಿದ್ದ ಗೌರವಗಳನ್ನು ಸಲ್ಲಿಸಲಾಯಿತು. ಮಹಾರಾಜರ ಅಪ್ಪಣೆಯನ್ನು ಪಡೆದು ಗಂಗರಾಜನು ಹೀಗೆ ಮಾತನಾಡಿದ :

"ಇಂದಿನ ವಿಜಯೋತ್ಸವಕ್ಕೆ ಹೊಯ್ಸಳ ರಾಜ್ಯದ ಆಸ್ಥಾನ ಶಿಲ್ಪಿಗಳಾದ ಜಕ್ಕಣಾಚಾರ್ಯರೇ ಪ್ರಧಾನ ಕಾರಣಕರ್ತರಾಗಿದ್ದಾರೆ. ಅವರ ರಾಜಕೀಯ ಚಾತುರ್ಯ, ದೂರದೃಷ್ಟಿಯೇ ನಮ್ಮನ್ನೆಲ್ಲಾ

ಆಪತ್ತಿನಿಂದ ರಕ್ಷಿಸಿದೆ. ಜೈನಮತದ ಧ್ವಜಗಳನ್ನು ಬಿಟ್ಟು ಕೇಸರಿವರ್ಣದ ಹೈಂದವ ಧ್ವಜಗಳನ್ನು ನಮ್ಮ ಸೈನ್ಯದವರು ಧರಿಸಿರುವುದನ್ನು ಕಂಡ ಶತ್ರುಸೈನ್ಯ ನಮ್ಮ ಅರಸರು ಹಿಂದುವಾಗಿದ್ದಾರೆ ಎಂಬ ಭ್ರಮೆಗೆ ಸಿಲುಕಿದರು. ಪ್ರಧಾನವಾಗಿ ಮತದ ದುರಭಿಮಾನದಿಂದ ಹೋರಾಡಲು ನಿಂತಿದ್ದ ಅವರಲ್ಲಿ ನಾವು ಹಿಂದೂಗಳ ವಿರುದ್ಧವೇ ಹೋರಾಡುತ್ತಿದ್ದೇವೆ ಎಂಬ ಕಲ್ಪನೆ ಮೂಡಿ ಅವರ ತೋಳ್‌ಬಲವು ಕುಂದಿ, ಈ ಹೋರಾಟ ನಿಷ್ಪ್ರಯೋಜಕ ಎಂದು ಅವರಿಗೇ ಭಾಸವಾಗಿ ಉತ್ಸಾಹವು ಕಡಿಮೆಯಾಯಿತು. ನಮ್ಮ ಸೈನ್ಯವು ಪೂರ್ಣವಾಗಿ ವಿಜೃಂಭಿಸಿತು. ಚೋಳ ದಂಡನಾಥರು ಸಂಧಿಗೆ ಸಿದ್ಧರಾದರು. ಆದರೆ ನಾವು ಅದಕ್ಕೆ ಒಪ್ಪಲಿಲ್ಲ. ಇದಕ್ಕೆ ಕಾರಣ ಜಕ್ಕಣಾಚಾರ್ಯರ ಶಿಷ್ಯರು ನಮಗೆ ರಚಿಸಿಕೊಟ್ಟಿದ್ದ ಅಭೇದ್ಯವಾದ ವ್ಯೂಹಗಳು. ಅವರು ತೋರಿದ ಸಮರೋಪಾಯ ನೀತಿ ನಮಗೆ ಜಯವನ್ನು ತಂದುಕೊಟ್ಟಿತು.

"ರಾಜಕಾರಣದಲ್ಲಿ ನಿರಾಸಕ್ತರಾಗಿದ್ದು ನಿರ್ಲಿಪ್ತರಾಗಿ ವರ್ತಿಸುವ ಆಚಾರ್ಯರ ಉಪಾಯವು ಇಂಥಾ ದೊಡ್ಡ ಪ್ರಯೋಜನವನ್ನು ತಂದುಕೊಡುತ್ತದೆ ಎಂದು ನಾನು ಭಾವಿಸಿರಲಿಲ್ಲ. ಅವರು ಬೂದಿಮುಚ್ಚಿದ ಕೆಂಡದಂತೆ. ಆ ಮಹನೀಯರ ಆಶೀರ್ವಾದವೇ ಈ ಮಹಾಸಾಮ್ರಾಜ್ಯದ ರಕ್ಷಾಕವಚವಾಗಬಲ್ಲದು ಎಂಬುದು ಈಗ ನನಗೆ ಮನವರಿಕೆಯಾಗಿದೆ. ಆಚಾರ್ಯರು ಇಂತು ನಮ್ಮ ಇಂದಿನ ವಿಜಯೋತ್ಸವಕ್ಕೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣಕರ್ತರಾಗಿದ್ದಾರೆ. ಇಂದು ಅವರಿಗೆ ನಡೆಯುತ್ತಿರುವ ಈ ರತ್ನಾಭಿಷೇಕವು ಅವರ ಕಲಾ ಸೇವೆಗೆ ಮಾತ್ರವೇ ಅಲ್ಲ ಹೊಯ್ಸಳ ಸಾಮ್ರಾಜ್ಯದ ಸ್ಥಿರೀಕರಣಕ್ಕೂ ಕೂಡ ಎಂದು ನಾನು ಸಂತೋಷದಿಂದ ಹೇಳುತ್ತೇನೆ. ಆದ್ದರಿಂದ ಅಂತಹ ಮಹನೀಯರಿಗೆ ಮೊದಲು ನನ್ನ ಅನಂತ ನಮಸ್ಕಾರಗಳನ್ನು ಅರ್ಪಿಸಿ ನಂತರ ಪ್ರಶಸ್ತಿಗಳ ವಿತರಣೆಯನ್ನು ನಡೆಸಲು ಉಪಕ್ರಮಿಸುತ್ತೇನೆ."

ಅಷ್ಟರಲ್ಲಿ ರಾಜಭಟರು ಬಂದಿದ್ದವರನ್ನೆಲ್ಲಾ ಉಚಿತಾಸನಗಳಲ್ಲಿ ಕುಳ್ಳಿರಿಸಿದರು. ಕೆಲವು ನಿಮಿಷಗಳಲ್ಲಿ ಪಚ್ಚೆಗಳ ಪಲ್ಲಕ್ಕಿಯಲ್ಲಿ ದೇವೋಜ ಶಿಲ್ಪಾಚಾರ್ಯ ಅಲ್ಲಿಗೆ ಬಂದ. ಆತನೊಂದಿಗೆ ಪುರೋಹಿತರು ಸ್ವಸ್ತಿಮಂತ್ರಗಳನ್ನು ಹೇಳುತ್ತಾ ಬರುತ್ತಿದ್ದರು. ನೃತ್ಯ-ಗೀತಾದಿಗಳೂ ನಡೆಯುತ್ತಿದ್ದವು. ಪಲ್ಲಕ್ಕಿಯನ್ನು ಸಭಾಂಗಣದಲ್ಲಿ ತಂದು ನಿಲ್ಲಿಸಿದರು. ಕೂಡಲೇ ವೀರಬಲ್ಲಾಳರೇ ಎದ್ದುಬಂದು ಆದರದಿಂದ ದೇವೋಜ ಶಿಲ್ಪಾಚಾರ್ಯನನ್ನು ಆಹ್ವಾನಿಸಿ ಕರೆದುಕೊಂಡು ಬಂದು ತಮ್ಮ ಸಿಂಹಾಸನದ ಬಲಗಡೆಗೆ ಇದ್ದ ಚಿನ್ನದ ಸಿಂಹಾಸನದ ಮೇಲೆ ಕೂರಿಸಿದರು. ಅದರ ಪಕ್ಕದಲ್ಲಿಯೇ ಮಹಾರಾಜರ ಸಿಂಹಾಸನಕ್ಕೆ ಹತ್ತಿರವಾಗಿ ರತ್ನಸಿಂಹಾಸನವೊಂದು ಪ್ರತ್ಯೇಕವಾಗಿ ಅಲಂಕರಿಸಲಾಗಿತ್ತು.

ಇನ್ನು ಜಕ್ಕಣಾಚಾರ್ಯ ಮಾತ್ರ ಬರಬೇಕು 'ಈಗಾಗಲೇ ಸಮಯ ಮೀರಿದೆ ಆದರೂ ಆತ ಇನ್ನೂ ಬರಲಿಲ್ಲ. ಇದಕ್ಕೆ ಕಾರಣವೇನು ? ಜಕ್ಕಣಾಚಾರ್ಯನಿಗೆ ಈ ರೀತಿಯ ರತ್ನಾಭಿಷೇಕ ಮುಂತಾದುವು ಹಿಡಿಸುವುದಿಲ್ಲ. ಆತ ಪ್ರಾಪಂಚಿಕ ಭೋಗಗಳಿಗೆ ದೂರನಾದವನು. ವಿರಾಗಿ. ಏನೋ ಕರ್ಮವಶಾತ್ ಸಂಸಾರಿಯಾಗಿದ್ದಾನೆ ಅಷ್ಟೆ. ಆತನನ್ನು ಗೃಹಸ್ಥ ಸಂನ್ಯಾಸಿ ಎಂದು ಕರೆಯಬಹುದು. ಅನೇಕರು ಈಗಾಗಲೇ ಆತನನ್ನು ಹಾಗೆಯೇ ಕರೆಯುತ್ತಾರೆ. ಈ ಸನ್ಮಾನ ತನಗೆ ಬೇಡವೆಂದು ತಿರಸ್ಕರಿಸಿ ಬರಲು ನಿರಾಕರಿಸಿದ್ದಾನೆಯೇ? ಅಥವಾ ಬೇರೆನಾದರೂ ಅಡ್ಡಿ ಉಂಟಾಗಿದೆಯೇ ?' ಎಂದು ಬಗೆಬಗೆಯಾಗಿ ಜನರು ಯೋಚಿಸುತ್ತಿದ್ದರು. ಅಷ್ಟರಲ್ಲಿ ಆತುರದಿಂದ

ಒಬ್ಬ ಪುರುಷ ಅಲ್ಲಿಗೆ ಬಂದ. ಆತನ ಮುಖ ಬಿಳಿಚಿಕೊಂಡಿತ್ತು. ದ್ವಾರಪಾಲಕ ಆತನನ್ನು ಮಹಾರಾಜರ ಸನ್ನಿಧಿಗೆ ಕರೆದು ತಂದ. ಈ ಮೊದಲೇ ಮಹಾರಾಜರಿಗೆ ಪರಿಚಿತವಾಗಿರುವವನಂತೆ ನಮಸ್ಕರಿಸಿದ.

"ಪ್ರಭೂ, ಜಕ್ಕಣಾಚಾರ್ಯ ಮನೆಯಲ್ಲಿಲ್ಲ. ನಿನ್ನೆ ಬೆಳಗ್ಗೆಯೇ ರಾಜಧಾನಿಯನ್ನು ಬಿಟ್ಟು ಎಲ್ಲಿಯೋ ಹೊರಗೆ ಹೋದನಂತೆ. ಯಾರಿಗೂ ಈ ಬಗ್ಗೆ ಏನೂ ತಿಳಿಯದು. ನಿನ್ನೆ ತಾನೇ ಆಚಾರ್ಯರಿಗೆ ಗಂಡುಮಗನು ಹುಟ್ಟಿದ್ದಾನೆ. ಶಿಷ್ಯರೆಲ್ಲಾ ಆತನಿಗಾಗಿ ಶೋಧಿಸುತ್ತಿದ್ದಾರೆ. ಆದರೆ ಆತ ಎಲ್ಲಿದ್ದಾರೆ ಎಂಬುದು ಯಾರಿಗೂ ಗೊತ್ತಾಗಿಲ್ಲ...."

ಈ ಮಾತುಗಳನ್ನು ಕೇಳಿದ ಮಹಾರಾಜರೂ ಪೆಚ್ಚಾದರು. ಅವರ ಮುಖವು ಬಿಳಿಚಿಕೊಂಡಿತು. ಸಭೆಯಲ್ಲಿ ಪಿಸುಮಾತು ಪ್ರಾರಂಭವಾಯಿತು.

'ವೈರಾಗ್ಯ ಶೀಲನಾದ ಜಕ್ಕಣಾಚಾರ್ಯ ತನಗೆ ಗಂಡುಮಗು ಆಯಿತೆಂಬುದನ್ನು ಕೇಳುತ್ತಲೇ ಗೃಹಸ್ಥ ಧರ್ಮ ಸಫಲಗೊಂಡಿತೆಂದು ಅದನ್ನು ತ್ಯಜಿಸಿ ತೀರ್ಥಯಾತ್ರೆ ಕೈಗೊಂಡಿರಬೇಕು. ತಪಸ್ಸಿನಿಂದ ಈ ಜನ್ಮದಲ್ಲಿಯೇ ಮುಕ್ತಿ ಪಡೆಯಲು, ಯೋಗದಿಂದ ತನ್ನ ಜನ್ಮವನ್ನು ಪಾವನ ಮಾಡಿಕೊಳ್ಳಲು ಹಿಮಾಲಯಕ್ಕೆ ಹೋಗಿರಬಹುದು..... ಈ ರತ್ನಾಭಿಷೇಕಕ್ಕೆ ಅವರು ಒಪ್ಪಿಕೊಂಡಿರಲಿಲ್ಲವಂತೆ. ಅದಕ್ಕೆ ಹೀಗೆ ತಪ್ಪಿಸಿಕೊಂಡಿದ್ದಾರೆ....' ಎಂದು ಅಲ್ಲಿದ್ದವರು ಪಿಸುಗುಟ್ಟಿಕೊಂಡರು.

ಈಗ ಮಹಾರಾಜರ ಕರ್ತವ್ಯವೇನು ? ಮಹಾರಾಜರ ಮನಸ್ಸು ಕಳವಳಗೊಂಡಿತ್ತು. ಶಾಂತಲಾದೇವಿ ಈ ವಿಷಯವನ್ನು ಕೇಳಿ ಮೂರ್ಛಿತಳಾದಳು. ಆಕೆ ಕಲ್ಪಿಸಿಕೊಂಡಿದ್ದ ಕನಸಿನ ಅರಮನೆ ತಟ್ಟನೆ ಕುಸಿದು ಬಿದ್ದಂತಾಗಿತ್ತು. 'ಇನ್ನು ಆ ಶಿಲ್ಪಿಯೋಗೀಶ್ವರನನ್ನು ದರ್ಶಿಸುವ ಸೌಭಾಗ್ಯ ತನಗೂ, ತನ್ನ ಪ್ರಜೆಗಳಿಗೂ ಇಲ್ಲವೇ ?' ಎಂದು ಆಕೆಯ ಮನ ವಿಲಪಿಸಿತು.

ವೀರಬಲ್ಲಾಳ ಮಹಾ ಗಂಭೀರಚಿತ್ತನಾದವನು. ಜಕ್ಕಣಾಚಾರ್ಯ ಇಲ್ಲವೆಂಬ ಸುದ್ದಿ ಕೇಳಿಯೂ, ತನ್ನ ಅಂತರಂಗದಲ್ಲಿ ದೊಡ್ಡ ಬಿರುಗಾಳಿಯೇ ಎದ್ದಿದ್ದರೂ ಆ ಬಗ್ಗೆ ಯಾವುದೇ ಭಾವವು ತನ್ನ ಮುಖದ ಮೇಲೆ ವ್ಯಕ್ತವಾಗಲು ಆತನು ಅವಕಾಶವನ್ನೇ ಕೊಡಲಿಲ್ಲ. "ಆಚಾರ್ಯರು ವಾನಪ್ರಸ್ಥಾಶ್ರಮ ಸ್ವೀಕರಿಸಿ ತಪಸ್ಸಿಗಾಗಿ ಹೋಗಿರಬೇಕು. ಈ ಮಾತನ್ನು ಮನೆಯಲ್ಲಾಗಲಿ, ತಮ್ಮಲ್ಲಾಗಲಿ ಹೇಳಿದರೆ ಹೋಗಗೊಳಿಸವೆಂದು ಹೀಗೆ ಯಾರಿಗೂ ಏನೊಂದನ್ನೂ ತಿಳಿಸದೆ ಹೋಗಿರಬೇಕು. ಈ ಸಂಘಟನೆಯಿಂದ ಸಭೆಯು ನಿರುತ್ಸಾಹ ಗೊಳ್ಳಬಾರದು. ಇಂದಿನ ವಿಜಯೋತ್ಸವದ ಸಮಾರಂಭವು ಯಶಸ್ವಿಯಾಗಿ ನಡೆಯಬೇಕು" ಎಂದು ಸಭೆಯಲ್ಲಿ ಮನವಿಮಾಡಿಕೊಂಡರು ಮಹಾರಾಜರು.

ಆ ಸಭೆಯ ಇನ್ನೊಂದು ಕಾರ್ಯಕ್ರಮ ದೇವೋಜ ಶಿಲ್ಪಿಗೆ ಕನಕಾಭಿಷೇಕ. ಆ ಕಾರ್ಯಕ್ರಮ ಪ್ರಾರಂಭವಾಯಿತು. ತನ್ನ ಗುರು ಇಲ್ಲದ ಈ ಸಂದರ್ಭದಲ್ಲಿ ತಾನು ಕನಕಾಭಿಷೇಕವನ್ನು ಮಾಡಿಸಿಕೊಳ್ಳುವುದು ಆತನಿಗೆ ಇಷ್ಟವಿಲ್ಲ. ಆದರೆ ಇದನ್ನು ತಪ್ಪಿಸುವುದು ಹೇಗೇ ? ಇದು ಮಹಾರಾಜರ ಬಯಕೆ ಅಲ್ಲವೇ ? ತನ್ನ ಆಚಾರ್ಯನಿಗೆ ಇರುವಂತೆಯೇ ಮಹಾರಾಜರಿಗೂ ಅಪ್ಪಣೆ ಮಾಡುವ ಅಧಿಕಾರವಿಲ್ಲವೇ ? ಅಥವ ತನ್ನ ಆಚಾರ್ಯ ಈ ಸಮಾರಂಭಕ್ಕೆ ತಪ್ಪಿಸಿಕೊಳ್ಳಬೇಕೆಂದೇ

ಈಗ ಕಾಣೆಯಾಗಿದ್ದಾನೆಯೇ? ಈ ತಾಕಲಾಟದಲ್ಲಿಯೇ ದಾಸೋಜ ಶಿಲ್ಪಾಚಾರ್ಯ ಎದ್ದುನಿಂತು ಇಂತು ನುಡಿದ :

"ಪ್ರಭುಗಳ ಸನ್ನಿಧಿಯಲ್ಲಿ, ಹಿರಿಯರ ಹಾಗೂ ಕಲಾಪ್ರೇಮಿಗಳ ಸಾನ್ನಿಧ್ಯದಲ್ಲಿ ನನ್ನ ಗೌರವ ಪೂರ್ವಕ ಪ್ರಣಾಮಗಳು. ತಮ್ಮೆಲ್ಲರ ಪ್ರೇಮಾದರಗಳೇ ನನಗೆ ಬಹುದೊಡ್ಡದಾದ ಗೌರವ. ಅದೇ ನನಗೆ ಕನಕಾಭಿಷೇಕ. ಅಭಿಮಾನ-ಪ್ರೇಮಗಳನ್ನು ಮೀರಿಸುವ ಬಂಗಾರ ಬೇರೆ ಯಾವುದಿದೆ? ನನಗೆ, ನಿಮಗೆ, ಸಮಸ್ತ ಲೋಕಗಳಿಗೆ ಪೂಜನೀಯನಾದವನು ವಿಶ್ವಕರ್ಮ ಭಗವಾನನು. ಆ ದೇವಾಧಿ ದೇವನ ಚಿತ್ರಪಟವು ಈ ಸಭಾಂಗಣದಲ್ಲಿಯೇ ಇದೆ. ಆ ಚಿತ್ರಪಟಕ್ಕೆ ಕನಕಾಭಿಷೇಕವನ್ನು ನಡೆಸಿದರೆ ನಾವೆಲ್ಲರೂ ಪಾವನರಾಗುತ್ತೇವೆ. ನನ್ನ ಗುರುಗಳಿಗೆ ಸಲ್ಲದ ಗೌರವ ಸನ್ಮಾನಗಳು ಕಿರಿಯನಾದ ನನಗೇಕೆ ? ನನ್ನಂತಹ ಅನೇಕ ಶಿಲ್ಪಾರಾಧಕರನ್ನು ಸೃಷ್ಟಿಸಿ ತನ್ನ ಸೃಷ್ಟಿ ಸಾಮರ್ಥ್ಯವನ್ನು ನಮ್ಮಲ್ಲಿ ಮೂಡಿಸಿರುವ ಆ ಜಗತ್ ಶಿಲ್ಪಿಗೇ ಪೂಜೆ, ಗೌರವಗಳನ್ನು ಸಲ್ಲಿಸಲು ಪ್ರಭುಗಳು ಅನುಗ್ರಹಿಸಬೇಕು, ಹಾಗಾದರೆ ಆ ದೇವನ ಅಂಶವನ್ನು ತಮ್ಮಲ್ಲಿ ರೂಪಿಸಿಕೊಂಡಿರುವ ಎಲ್ಲಾ ಶಿಲ್ಪಿಗಳಿಗೂ ಗೌರವವನ್ನು ಸಲ್ಲಿಸಿದಂತಾಗುತ್ತದೆ..."

ಮಹಾಮಂತ್ರಿಗಳು ಎದ್ದುನಿಂತು "ಪ್ರಭುಗಳ ಸನ್ನಿಧಿಯಲ್ಲಿ ಪ್ರಣಾಮಗಳು. ಈಗ ಯಾರೂ ಚಿಂತಿಸಬೇಕಾಗಿಲ್ಲ. ಶಿಲ್ಪರ್ಷಿಗಳಾದ ಜಕ್ಕಣಾಚಾರ್ಯರು ಋಷಿಕಲ್ಪರು ; ಮಹಾ ಮಹಿಮರು. ಅವರು ಮನೆಯನ್ನು ಬಿಟ್ಟಿದ್ದಾರೆ ಎಂದರೆ ಯಾವುದೋ ದೊಡ್ಡ ಲೋಕೋಪಕಾರ ಸಂಕಲ್ಪ ಅವರಲ್ಲಿ ಮೂಡಿದೆ ಎಂದು ನಾವು ಗ್ರಹಿಸಬೇಕು. ಕೂಡಲೇ ಅದರ ಫಲವೇನೆಂಬುದು ನಮಗೆ ಗೊತ್ತಾಗುವುದು ಸಾಧ್ಯವಿಲ್ಲ. ಅಂತಹ ಮಹಾತ್ಮರನ್ನು ಆದರಿಸಿ ಕಲಾವಿದರ-ವೀರರ ಪೂಜೆಯನ್ನು ನಾವು ಮಾಡಬೇಕಾದದ್ದೇ. ಆ ಮಹಾಶಿಲ್ಪಿಯ ಈ ಚಿತ್ರಪಟವನ್ನು ರತ್ನಸಿಂಹಾಸನ ಮೇಲಿರಿಸಿ ರತ್ನಪುಷ್ಪಗಳಿಂದ ಪೂಜಿಸಬಹುದು. ಕಣ್ಣಿಗೆ ಕಾಣಿಸದ ದೇವರನ್ನು ನಾವು ಇದೇ ರೀತಿ ಸಾಕಾರ ಗೊಳಿಸಿಕೊಂಡು ತಾನೇ ಪೂಜಿಸುತ್ತೇವೆ? ಈ ಸಂದರ್ಭದಲ್ಲಿ ನಮ್ಮ ಬಳಿ ಇಲ್ಲದವರಿಗೂ ನಾವು ಅದೇ ರೀತಿಯಾಗಿ ಗೌರವವನ್ನು ಸಲ್ಲಿಸಬಹುದಾಗಿದೆ. ಇದರಿಂದ ನಮ್ಮ ಸಂಕಲ್ಪವು ಸಿದ್ಧಿಗೊಳ್ಳುತ್ತದೆ. ದೇವೋಜ ಶಿಲ್ಪಾಚಾರ್ಯರು ಈ ಬಗ್ಗೆ ವ್ಯಾಕುಲಚಿತ್ತರಾಗಬೇಕಾಗಿಲ್ಲ. ಇದು ಪ್ರಭುಗಳಿಗೂ, ಸಭೆಗೂ ಸಮ್ಮತಿ ಎಂದು ನಾನು ಭಾವಿಸುತ್ತೇನೆ" ಎಂದು ಹೇಳಿದರು.

ಸಭೆ ತನ್ನ ಅಂಗೀಕಾರವನ್ನು ಕರತಲಧ್ವನಿಯಿಂದ ಸೂಚಿಸಿತು. ಮಹಾರಾಜರು ಅಂಗೀಕಾರದಿಂದ ತಲೆದೂಗಿ ಗಂಭೀರವಾಣಿಯಲ್ಲಿ ಇಂತು ನುಡಿದರು : "ಮಹಾ ಮಂತ್ರಿಗಳ ಸಮಯೋಚಿತ ಪ್ರಜ್ಞೆ, ವೀರಪೂಜಾ ಸಂಕಲ್ಪ ಅದ್ಭುತವಾಗಿದೆ. ಈ ಸಮಯದಲ್ಲಿ ನಾವು ಇನ್ನೊಂದು ರೀತಿಯೂ ಯೋಚಿಸಿದೆವು. ಬಾಹುಬಲಿಯ ಮೂರ್ತಿಯ ನಿರ್ಮಾಣವನ್ನು ಪ್ರಾರಂಭಿಸಿದ ಬಮ್ಮೋಜ ಶಿಲ್ಪಾಚಾರ್ಯರು ದಕ್ಷಿಣಾ ಪಥದಲ್ಲಿಯೇ ಬಹುದೊಡ್ಡ ಮಹಾಶಿಲ್ಪಾಚಾರ್ಯರು. ಇದು ಎಲ್ಲರೂ ಬಲ್ಲ ವಿಷಯವೇ. ಈ ಪೂರ್ವದಲ್ಲಿಯೇ ಅವರ ಶಿಲ್ಪಕಲಾ ಸೇವೆಯನ್ನು, ಪ್ರಾವೀಣ್ಯತೆಯನ್ನು ಪುರಸ್ಕರಿಸಿಕೊಂಡು ಅನೇಕ ಶಿಲ್ಪಿಗಳ ಸಮ್ಮುಖದಲ್ಲಿ ಅವರಿಗೆ **ಕಲಿಯುಗ ವಿಶ್ವಕರ್ಮ** ಎಂಬ ಬಿರುದನ್ನು ಸಮರ್ಪಿಸಿರುವುದು ಬಹುಪ್ರಸಿದ್ಧವಾಗಿರುವ ಸಂಗತಿ ಅಂತಹ ಮಹಾಶಿಲ್ಪಿಯ ನಂತರ ಈಗ ನಾವು ಜಕ್ಕಣಾಚಾರ್ಯರನ್ನು ಕಾಣುತ್ತಿದ್ದೇವೆ. ಆ ಗುರುವಿಗೆ

ತತ್ಸಮಾನನಾದ ಮಹಾಶಿಲ್ಪಿ ಜಕ್ಕಣಾಚಾರ್ಯರು. ಅವರನ್ನು ಈ ಸಭೆಯಲ್ಲಿ **ಕಲಿಯುಗ ವಿಶ್ವಕರ್ಮ** ಎಂಬ ಬಿರುದಿನಿಂದ ಗೌರವಿಸಬೇಕೆಂದು ಬಯಸಿದ್ದೆವು. ಆದ್ದರಿಂದ ಈ ಸಭೆಗೆ ನೆರೆ ನಾಡುಗಳಿಂದಲೂ ಅಲ್ಲಿಯ ಮಹಾಶಿಲ್ಪಿಗಳನ್ನು ಆಹ್ವಾನಿಸಿದ್ದು. ಮೊದಲಿಗೆ ಈ ಬಿರುದನ್ನು ಆಚಾರ್ಯರಿಗೆ ಸಮರ್ಪಿಸಲು ತಮ್ಮೆಲ್ಲರ ಅಂಗೀಕಾರವನ್ನು ಕೋರುತ್ತೇವೆ."

ಸಭಿಕರು "ಕಲಿಯುಗ ವಿಶ್ವಕರ್ಮನಿಗೆ ಜಯವಾಗಲಿ. ಕಲಾಪ್ರೇಮಿ ಮಹಾರಾಜರು ಚಿರಾಯುವಾಗಲಿ" ಎಂದು ಹರ್ಷೋದ್ಗಾರ ಮಾಡಿದರು.

ಆಂಧ್ರದೇಶದಿಂದ ಆಹ್ವಾನವನ್ನು ಅಂಗೀಕರಿಸಿ ಬಂದಿದ್ದ ಪೆಂದೋಟ ಶಿಲ್ಪಿ ಮಾರ್ಕಂಡೇಯ ಸ್ಥಪತಿ ಎದ್ದು ನಿಂತು ಇಂತು ನುಡಿದ : "ನಮ್ಮ ಆಂಧ್ರದೇಶದವರಿಗೆ ಬಹುಸಂತೋಷವನ್ನು ಉಂಟುಮಾಡುತ್ತಿರುವ ವಿಷಯ. ಬಹು ಶ್ರಮ ಪ್ರಯಾಸಗಳಿಂದ ಇಲ್ಲಿಗೆ ಬಂದರೂ ಆ ಮಹಾಶಿಲ್ಪಿಯ ದರ್ಶನಭಾಗ್ಯವು ನಮಗೆ ದೊರೆಯಲಿಲ್ಲವೆಂದು ನಾವು ಬಹುವಾಗಿ ಚಿಂತಿತರಾಗಿದ್ದೇವೆ. ಕೊನೆಗೆ ಚಿತ್ರದಲ್ಲಿಯಾದರೂ ಆ ಮಹಾನುಭಾವನ ದರ್ಶನವನ್ನು ಮಾಡಿ ಅವರ ತೇಜಸ್ಸು ನಾವುಕಂಡಂತಾಗಿದೆ. ಇಂತಹ ಮಹಾಶಿಲ್ಪಿಯನ್ನು ಪಡೆದಿರುವ ಈ ನಾಡು, ಅವರನ್ನು ಗೌರವಿಸುತ್ತಿರುವ ಈ ರಾಜ್ಯ ಧನ್ಯ. ತಮಗೆಲ್ಲಾ ನಮ್ಮ ಹೃತ್ಪೂರ್ವಕವಾದ ಅಭಿನಂದನೆಗಳು."

ಕ್ರಮವಾಗಿ ಇತರ ರಾಜ್ಯಗಳಿಂದ ಬಂದಿದ್ದ ಶಿಲ್ಪಿಗಳು, ಇತರ ಪ್ರಮುಖರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ನಂತರ ಜಕ್ಕಣಾಚಾರ್ಯನ ಚಿತ್ರಕ್ಕೆ ರತ್ನಾಭಿಷೇಕ, ದೇವೋಜ ಶಿಲ್ಪಾಚಾರ್ಯನಿಗೆ ಕನಕಾಭಿಷೇಕ ಸಾಂಗವಾಗಿ, ಶಾಸ್ತ್ರೋಕ್ತವಾಗಿ ನಡೆಯಿತು. ಆ ರತ್ನರಾಶಿಯನ್ನು, ಸ್ವರ್ಣಮುದ್ರಿಕೆ ಗಳನ್ನು ಬಂದಿದ್ದ ಶಿಲ್ಪವರ್ಯರಿಗೆ, ಗಣ್ಯರಿಗೆ ಕರ್ಪೂರ ತಾಂಬೂಲಗಳೊಂದಿಗೆ ಸಮರ್ಪಿಸಿ ಗೌರವಿಸಲಾಯಿತು.

ಈ ಶುಭ ಸಮಾರಂಭಕ್ಕೆ ಕಾವೇರಿಪಟ್ಟದಿಂದ ಗಾಯತ್ರೀ ಪೀಠಾಧಿಪತಿಗಳು ಕಳುಹಿಸಿದ್ದ ಆಶೀರ್ವಚನವನ್ನು ಸಭೆಯ ಸಮಕ್ಷಮದಲ್ಲಿ ಓದಲಾಯಿತು. ಆನೇಗೊಂದಿಯಿಂದ ಸರಸ್ವತೀ ಪೀಠಾಧಿಪತಿಗಳಾದ ಬ್ರಹ್ಮಾನಂದ ಸ್ವಾಮಿಗಳು ಕಳುಹಿಸಿಕೊಟ್ಟಿದ್ದ ಮಹಾಪ್ರಸಾದ , ಆಶೀರ್ವಾದಗಳನ್ನು ಸ್ವೀಕರಿಸಲಾಯಿತು. ಬೀಜಾಪುರದಿಂದ ವೇದ ಭಾಷ್ಯಾಚಾರ್ಯರು, ಸಾವಿತ್ರೀ ಪೀಠಾಧಿಪತಿಗಳು ಆದ ಶ್ರೀ ಭೂಧರ ಸ್ವಾಮಿಗಳು ಸಭೆಯನ್ನು ಉದ್ದೇಶಿಸಿ ಹೇಳಿದ ಅಮೋಘ ಆಶೀರ್ವಚನವನ್ನು ಸಭೆಯು ಬಹು ಗೌರವದಿಂದ ಸ್ವೀಕರಿಸಿತು. ಪೆಂದೋಟಪುರವರಾಧೀಶರ, ಪಾಟೂರು ಶಿಲ್ಪಿ ಪ್ರಭುಗಳ ಅಭಿನಂದನೆ, ಇತರ ಸಾಮಂತರಾಜರಿಂದ ಉಪಾಯನಗಳನ್ನು ಆದರದೊಂದಿಗೆ ಸ್ವೀಕರಿಸಲಾಯಿತು.

# ೧೦

ಕಳೆದ ಇಪ್ಪತ್ತು ವರ್ಷಗಳಿಂದಲೂ ಹೊಯ್ಸಳ ಸಾಮ್ರಾಜ್ಯವು ಬಹುವಾದ ಪ್ರಗತಿ, ಉಚ್ಛ್ರಾಯವನ್ನು ಸಾಧಿಸಿತ್ತು. ಗಂಗರಾಜನ ಸೇನಾಧಿಪತ್ಯ, ಅಕ್ಕಣ್ಣನ ಬುದ್ಧಿಚಾತುರ್ಯ ನಿಸ್ವಾರ್ಥ ಮನೋಕಾಮನೆಯಿಂದ ದೇಶದ ಸೇವೆಯನ್ನು ನಡೆಸುತ್ತಿದ್ದ ಜಕ್ಕಣಾಚಾರ್ಯ ಮುಂತಾದ ಅನೇಕರ ಒತ್ತಾಸೆ ಸಹಕಾರಗಳಿಂದ, ಬಹು ಪರಾಕ್ರಮಿಯಾದ ಮಹಾರಾಜ ವೀರಬಲ್ಲಾಳ ಭೂಪನು ನೆರೆಹೊರೆಯ ಸಣ್ಣಪುಟ್ಟ ರಾಜ್ಯಗಳನ್ನೆಲ್ಲಾ ತನ್ನ ವಶಕ್ಕೆ ತೆಗೆದುಕೊಂಡು ತನ್ನ ರಾಜ್ಯವನ್ನು ಸಾಮ್ರಾಜ್ಯವನ್ನಾಗಿ ಪರಿವರ್ತಿಸಿಕೊಂಡಿದ್ದ. ಜಕ್ಕಣಾಚಾರ್ಯ, ದೇವೋಜಶಿಲ್ಪಿ, ಅನಂತಕೀರ್ತಿ ಸ್ಥಪತಿ ಮುಂತಾದವರಿಂದ ಸ್ವರ್ಗಶಿಲ್ಪವೇ ಆ ರಾಜ್ಯದಲ್ಲಿ ವ್ಯಾಪಿಸಿತ್ತು. ದ್ವಾರ ಸಮುದ್ರ, ವೇಲಾಪುರಿ, ಮಹಿಷಪುರಗಳು ವಿಸ್ತಾರಗೊಂಡಿದ್ದವು. ಶಾಂತಲಾಪುರ, ಜಕ್ಕಣಪುರ ಮುಂತಾದ ಹೊಸ ನಗರಗಳ ನಿರ್ಮಾಣ ನಡೆದಿತ್ತು. ಕಾವೇರಿ ತುಂಗೆಯರ ಪವಿತ್ರ ಜಲದಿಂದ ಕರ್ನಾಟಕವು ಸಸ್ಯಶ್ಯಾಮಲವಾಗಿತ್ತು. ರಾಜ್ಯದಲ್ಲಿ ಚಿತ್ರ, ಶಿಲ್ಪ, ಸಂಗೀತ, ನೃತ್ಯ ಮುಂತಾದುವು ಅದ್ಭುತವಾಗಿ ಆದರಿಸಲ್ಪಟ್ಟು ಅಭಿವೃದ್ಧಿಗಳಿಸಿದ್ದವು.

ಕನ್ನಡ ಸಾಹಿತ್ಯವು ಬಹುವಿಸ್ತಾರಗೊಳ್ಳುತ್ತಿತ್ತು. ಇವೆಲ್ಲಕ್ಕೂ ಮಿಗಿಲಾಗಿ ಪಟ್ಟಮಹಿಷಿ ಶಾಂತಲಾದೇವಿ, ಕೀರ್ತಿಮತಿಯರು ಬಹು ಸುಂದರವಾದ ಮಕ್ಕಳಿಗೆ ಜನ್ಮವಿತ್ತು ಪೋಷಿಸುತ್ತಿದ್ದರು. ಇವರಿಂದ ಹೊಯ್ಸಳವಂಶ ಉಳಿದಿತ್ತು. ದಾನ ಧರ್ಮಾದಿ ಸತ್ಕಾರ್ಯ ಪ್ರವೃತ್ತರಾಗಿ, ಪ್ರಜಾಹಿತ ಪರಾಯಣರಾಗಿ ಪ್ರಜಾಸೇವೆಯನ್ನು ತಮ್ಮ ನಿತ್ಯ ಪೂಜೆಯನ್ನಾಗಿಸಿಕೊಂಡಿದ್ದರು ಮಹಾರಾಜರು. ಅವರಿಗೆ ಜಕ್ಕಣಾಚಾರ್ಯ ಇಲ್ಲವೆಂಬ ಕೊರತೆಯ ವಿನಾ ಬೇರೆಯಾವ ಕೊರತೆಯೂ ಇರಲಿಲ್ಲ. ಆದರೂ ಆ ಮಹಾಶಿಲ್ಪಿಯ ಕುಮಾರನು ದೊಡ್ಡವನಾಗಿ ಬೆಳೆಯುತ್ತಾ ಬಂದಿದ್ದಾನೆ. ತಂದೆಯ ಸ್ಥಳದಲ್ಲಿ ನಿಂತು ಮಹಾಶಿಲ್ಪನಿರ್ಮಾಣ ನಡೆಸುವ ಸಾಮರ್ಥ್ಯವನ್ನು ಗಳಿಸಿಕೊಳ್ಳುತ್ತಿದ್ದಾನೆ.

ಎಲ್ಲಾ ಕಾಲವು ಒಂದೇ ರೀತಿಯಾಗಿ ಇರುವುದು ಸಾಧ್ಯವಿಲ್ಲ ಅಲ್ಲವೇ ? ಕಾಲಚಕ್ರವನ್ನು ತಿರುಗಿಸುವ ಸೂರ್ಯಚಂದ್ರರಿಗೇ ಉದಯ-ಅಸ್ತಗಳಿರುವಾಗ ಸಾಧಾರಣ ಮಾನವರ ಗತಿ ಇನ್ನೇನು? ನಿನ್ನೆಯವರೆವಿಗೂ ಯಾವುದೇ ಚಿಂತೆ-ಕೊರತೆ ಇಲ್ಲದ ಶಾಂತಲಾದೇವಿ- ವೀರಬಲ್ಲಾಳರ ಬದುಕಿನಲ್ಲಿ ಇದ್ದಕ್ಕಿದ್ದಂತೆಯೇ ದೊಡ್ಡ ದುಃಖವು ಆವರಿಸಿತ್ತು. ಯಾವ ಪುತ್ರನು ಮುಂದೆ ಹೊಯ್ಸಳ ಸಾಮ್ರಾಜ್ಯದ ಮಹಾರಾಜನಾಗಬೇಕಾಗಿತ್ತೋ, ಯಾರಿಗೆ ಮಹಾರಾಜರು ತಮ್ಮ ಅಣ್ಣನ ಹೆಸರನ್ನು ಇರಿಸಿ ಸಂತೋಷಿಸಿದ್ದರೋ, ಆ ಮುದ್ದಿನ ರಾಜಕುಮಾರ ನರಸಿಂಹದೇವನನ್ನು ದುರದೃಷ್ಟವಶಾತ್ ಬ್ರಹ್ಮರಕ್ಷೋಭೂತ ಆವರಿಸಿತ್ತು. ಅದು ಇತರ ಸಾಮಾನ್ಯ ಭೂತಗಳಂತಲ್ಲ. ಹಿಡಿದರೆ ಬಿಡುವುದು ಕಷ್ಟ .

ಹದಿನೈದು ವರ್ಷಗಳ ಎಳೆಯ ವಯಸ್ಸು. ಎಲ್ಲಾ ವಿದ್ಯೆಗಳಲ್ಲಿ, ಕಲೆಗಳಲ್ಲಿ, ಧನುರ್ವಿದ್ಯೆಗಳಲ್ಲಿ ಕುಶಲಿಯಾಗಿದ್ದ. ಯಾವುದಕ್ಕೂ ಕೊರತೆ ಕಾಣದ ಅರಮನೆಯ ಜೀವನ. ಆದರೂ ಪೂರ್ವಜನ್ಮದ ಕರ್ಮವನ್ನು ಅನುಭವಿಸದೆ ಬೇರೆಯ ಮಾರ್ಗ ಯಾವುದು ತಾನೇ ಇದೆ ? ರಾಜಕುಮಾರ ವಿಜಯದಶಮಿಯಂದು ಮಧ್ಯಾಹ್ನ ಆಯುಧ ಪೂಜೆಯಲ್ಲಿ ಪಾಲ್ಗೊಂಡಿದ್ದ. ಅಂದು ಸಂಜೆ ಶಮೀ ಪೂಜೆ ನಡೆಸಿದ್ದ ಸಪ್ತಮಿಯಿಂದಲೇ ತಾಯಿ ರಾಣೀವಾಸದಲ್ಲಿ ಏರ್ಪಡಿಸಿದ್ದ ಸರಸ್ವತೀ ಪೂಜೆಯಲ್ಲಿ, ದುರ್ಗಾದೇವಿ ಪೂಜೆಯಲ್ಲಿ, ಮುತ್ತೈದೆ ಪೂಜೆಯಲ್ಲಿ ಪಾಲ್ಗೊಂಡು, ಹಿರಿಯರೆಲ್ಲರ ಆಶೀರ್ವಾದಗಳನ್ನು ಪಡೆದುಕೊಂಡಿದ್ದ. ಅಂತಹವನು ಆ ರಾತ್ರಿಗೇ ಇಂತಹ ತೊಂದರೆಗೆ ಗುರಿಯಾಗಿದ್ದಾನೆ. ಇದ್ದಕ್ಕಿದ್ದಂತೆಯೇ ಕನವರಿಸುತ್ತಾ ಎದ್ದಾಗ ಅಸ್ವಸ್ಥನಾಗಿದ್ದಾನೆ ಎಂಬುದು ಗೊತ್ತಾಯಿತು. ಇದಕ್ಕೆ ಕಾರಣವನ್ನು ಯಾರು ತಾನೇ ಹೇಳಬಲ್ಲರು ? ರಾಜಸೂಯಯಾಗದಲ್ಲಿ ಅವಭೃತ ಸ್ನಾನದಿಂದ ಪವಿತ್ರವಾಗಿದ್ದ ದ್ರೌಪದಿಯ ಕೇಶರಾಶಿಗೆ ದುಶ್ಶಾಸನನ ಹಿಡಿತಕ್ಕೆ ಸಿಕ್ಕಿ ನರಳುವುದು ತಪ್ಪಿತೇ? ಆ ಮಹಾಯಜ್ಞ ಫಲಕ್ಕೆ ವಿರೋಧವಾಗಿ ಅವರು ವನವಾಸಕ್ಕೆ ಹೋಗುವುದು ತಪ್ಪಿತೇ? ಆದ್ದರಿಂದ ಈ ಕಾರ್ಯ- ಕಾರಣ ಸಂಬಂಧವು ಆ ದೇವರೊಬ್ಬನಿಗೇ ಗೊತ್ತಾಗಬೇಕು. ಇಲ್ಲವೇ ಯಾರಾದರೂ ಮಹಾ ಯೋಗೀಶ್ವರನು ಹೇಳಬಹುದೇನೋ ? ಯಾವ ಕಾಲದಲ್ಲಿ, ಯಾವ ಜೀವಿಗಳಿಗೆ ಯಾವ ಕರ್ಮವು ಯಾವ ಫಲವನ್ನು ನೀಡುತ್ತದೆ ಎಂಬುದನ್ನು ಸಾಮಾನ್ಯ ಮಾನವರು ಅರಿಯಲು ಸಾಧ್ಯವಿಲ್ಲ. ಹೊರಕ್ಕೆ ಕೆಲವು ಕಾರಣಗಳು ಕಾಣಿಸಬಹುದು, ಹಲವು ಕಾರಣಗಳು ಮನಸ್ಸಿಗೆ ಬರಬಹುದು. ಇನ್ನೂ ಕೆಲವು ಕಾರಣಗಳು ಯೋಚಿಸಿದರೆ ಸ್ಫುರಿಸಬಹುದು. ಆದರೂ ಇವೆಲ್ಲಕ್ಕೂ ಮೂಲವಾದ ಆದಿಕಾರಣವು ಅಗಮ್ಯವಾಗಿ ಅದು ಚಿಂತನೆಗೆ, ಕಲ್ಪನೆಗೆ ನಿಲುಕದೆ ಬಹುದೂರದಲ್ಲಿರುತ್ತದೆ.

ಜ್ಯೋತಿಷ್ಯರು ನೋಡಿದರು. ಗ್ರಹ ಜಪ ದಾನಗಳನ್ನು ಮಾಡಿದರು. ಪ್ರಾಯಶ್ಚಿತ್ತ ಹೋಮಗಳು ನಡೆದವು. ಮಾಂತ್ರಿಕರು ಬಂದು ಪೂಜೆಗಳನ್ನು ಮಾಡಿದರು. ದೇಶ- ದೇಶಾಂತರದ ಘನವೈದ್ಯರೆಲ್ಲಾ ಬಂದು ಪರೀಕ್ಷಿಸಿದರು. ಅರಮನೆಗೆ ಬಂದ ಸಾಧುಗಳು ಹೇಳಿದ ಎಲ್ಲಾ ಉಪಚಾರಗಳೂ ನಡೆದವು. ಮಹಾರಾಜರು ಜೈನ, ಬೌದ್ಧರಲ್ಲಿ ಪ್ರಖ್ಯಾತರಾದ ಮಂತ್ರವೇತ್ತರನ್ನು ಕರೆಯಿಸಿ ಚಿಕಿತ್ಸೆಗಳನ್ನು ಮಾಡಿಸಿದರು. ಕಂಡಕಂಡವರು ಹೇಳಿದ್ದೆಲ್ಲಾ ಮಾಡಿದರು. ತೀರ್ಥಕ್ಷೇತ್ರ ದರ್ಶನವನ್ನೂ ಮಾಡಿಬಂದರು. ದಾನ- ಪೂಜೆ-ವ್ರತಗಳಿಗೆ ಲೆಕ್ಕವೇ ಇಲ್ಲ. ಆದರೆ ಪ್ರಯೋಜನ ಮಾತ್ರ ಶೂನ್ಯ. ರಾಜಕುಮಾರನನ್ನು ಹಿಡಿದಿದ್ದ ಬ್ರಹ್ಮರಕ್ಷಸ ಬಿಡಲಿಲ್ಲ.

ಶಾಂತಲಾದೇವಿಯ ದುಃಖಕ್ಕೆ ಮೇರೆಯೇ ಇರಲಿಲ್ಲ. ಮಹಾರಾಜರ ಮುಖ ಮ್ಲಾನವಾಗಿತ್ತು. ಪ್ರಜೆಗಳು ಅರಮನೆಯ ಈ ದುಃಖದಲ್ಲಿ ಪಾಲುದಾರರಾಗಿದ್ದರು. ಆದರೆ ಕೀರ್ತಿಮತಿಯನ್ನು ಮಾತ್ರ ಈ ದುಃಖ ಆವರಿಸಲಿಲ್ಲ. ಈ ಬಗ್ಗೆ ಜನರು ಬಗೆಬಗೆಯಾಗಿ ಮಾತನಾಡಿಕೊಳ್ಳುತ್ತಿದ್ದರು.

"ಮಹಾರಾಣಿಯು ಈಗ ದುಃಖವನ್ನು ಅನುಭವಿಸುತ್ತಿರುವುದರಿಂದ ಕಿರಿಯರಾಣಿ ತನಗೆ ಲಾಭವಿದೆ ಎಂದು ಭಾವಿಸಿದ್ದಾಳೆ. ರಾಜಕುಮಾರ ಉಳಿಯದಿದ್ದರೆ ತನ್ನ ಮಗನೇ ಯುವರಾಜನಾಗುತ್ತಾನೆ. ತಾನು ರಾಜಮಾತೆಯಾಗುತ್ತಾಳೆ ! ಹಿರಿಯನಾದ ನರಸಿಂಹದೇವ ಇರುವಾಗ ಕಿರಿಯನಾದ ವರ್ಧಮಾನ ಹೇಗೆ ತಾನೇ ಯುವರಾಜನಾಗಬಲ್ಲ ? ಆದ್ದರಿಂದ ಈ ಯೋಜನೆ ಫಲಿಸಲು ಕೀರ್ತಿಮತಿಯೇ ರಾಜಕುಮಾರನಿಗೆ ಏನಾದರೂ ಮಾಟ-ಮಂತ್ರವನ್ನು ಮಾಡಿಸಲು ಬಹುದಿನಗಳಿಂದ ಹೊಂಚುಹಾಕುತ್ತಿದ್ದಳು. ಆಕೆಯ ಬಯಕೆ ಈಡೇರಿಸಲು ಶಾಂತಲಾದೇವಿಯ ಅಂತಃಪುರಕ್ಕೆ ದೇವತಾ ಪೂಜೆಗಳಿಗಾಗಿ ಬರುತ್ತಿದ್ದ ಪುರೋಹಿತರನ್ನು ಆಕೆ

ಹಿಡಿದಳು. ಮೊದಲಿಗೆ ಅವರು ಇದನ್ನು ಅಂಗೀಕರಿಸದೆ ಇದ್ದರೂ ವೀರಬಲ್ಲಾಳ ಮಹಾರಾಜನನ್ನು ಭ್ರಷ್ಟ ಜೈನನನ್ನಾಗಿ ಮಾಡಬೇಕೆಂದು ಕಾಯುತ್ತಿದ್ದ ವೈದಿಕರು ಈ ಅವಕಾಶವನ್ನು ಬಳಸಿಕೊಳ್ಳಲು ಪ್ರಯತ್ನಿಸಿದರು. ಹಾಗೇನಾದರೂ ಆದರೆ ಮಹಾರಾಜ ತೊಂದರೆಗೆ ಸಿಕ್ಕಾಗ ಕೊಚ್ಚಿ ಹೋಗುವವನಿಗೆ ಹುಲ್ಲೇ ಆಧಾರವಾಗುತ್ತದೆ. ಆಗ ವೈದಿಕ ಮತಕ್ಕೆ ಮತ್ತೆ ಬರುವಂತೆ ಮಾಡಬಹುದು.

"ಹೀಗೆ ಚಿಕ್ಕರಾಣಿ ಒಂದನ್ನು ಆಶಿಸಿದ್ದರೆ ಅದಕ್ಕಿಂತಲೂ ದೊಡ್ಡದಾದ ಇನ್ನೊಂದರ ಲಾಭಕ್ಕಾಗಿ ಈ ಘೋರ ಕಾರ್ಯವನ್ನು ನಡೆಸಿದ್ದರು. ಆ ಸಂದರ್ಭದಲ್ಲಿ ಅವರು ಯಾವ ಮಂತ್ರ ಪ್ರಯೋಗಿಸಿದರೋ, ಯಾವ ಮದ್ದು ಕೊಟ್ಟಿದ್ದರೋ, ಯಾವ ಮೂಲಿಕೆ ಪ್ರಯೋಗಿಸಿದ್ದರೋ ಅದರ ಫಲ ಮಾತ್ರ ಬಹು ಕ್ರೂರವಾಗಿಯೇ ಇತ್ತು. ನರಸಿಂಹದೇವನಿಗೆ ಚಿತ್ತ ಚಾಂಚಲ್ಯ ಏರ್ಪಟ್ಟಿತು. ಇದು ಬ್ರಹ್ಮರಕ್ಷೋಭೂತವೆಂದು ಅವರೇ ಪ್ರಚಾರ ಮಾಡಿದರು. ತಮ್ಮ ಇಷ್ಟವನ್ನು ನೆರವೇರಿಸಿಕೊಳ್ಳಲು ಮನುಷ್ಯರು ಎಂಥಾ ನೀಚ ಕೆಲಸಗಳನ್ನು ಮಾಡಬಲ್ಲರು ಎಂಬುದಕ್ಕೆ ಇದೇ ಒಂದು ಉದಾಹರಣೆಯಾಗಿತ್ತು. ಮತಾಂಧತೆಯು ಎಷ್ಟೊಂದು ದುಷ್ಟ ಕೆಲಸಗಳನ್ನು ಮಾಡಿಸುತ್ತದೆ ?!"

"ಅಯ್ಯೋ, ಮಂತ್ರವೂ ಅಲ್ಲ. ಮಾಟವೂ ಅಲ್ಲ. ಎಲ್ಲಾ ಪೂರ್ವಜನ್ಮದ ಕರ್ಮಫಲ" ವೆಂದು ಇನ್ನು ಕೆಲವರು ಹೇಳುತ್ತಿದ್ದಾರೆ. ಸತ್ಯ ಯಾರಿಗೆ ಗೊತ್ತಿದೆ ? ಆಯಾ ಸ್ಥಿತಿಗಳಿಗೆ ಅನುಸಾರ ಮನುಷ್ಯನು ಊಹಿಸಬಲ್ಲ ಅಷ್ಟೇ! ಅವರ ಬಾಯನ್ನು ಮುಚ್ಚಲು ಯಾವ ಸಾಧನೆಯೂ ಇಲ್ಲ ಅಲ್ಲವೇ ?

ಶಾಂತಲಾದೇವಿ ತನ್ನ ಕುಮಾರನ ಆರೋಗ್ಯಕ್ಕಾಗಿ ಸಾವಿರ ದೇವರಲ್ಲಿ ಹರಕೆ ಹೊತ್ತಳು. ಕೀರ್ತಿಮತಿಯು ನರಸಿಂಹದೇವನ ಅನಾರೋಗ್ಯ ಸ್ಥಿರವಾಗಲಿ ಎಂದು ಪ್ರಾರ್ಥಿಸುತ್ತಿದ್ದಳು. ಮಾತ್ಸರ್ಯ, ಸ್ವಾರ್ಥಗಳು ಎಂಥಾ ಹೇಯ ಕೃತ್ಯಗಳನ್ನಾದರೂ ಮಾಡಿಸುತ್ತವೆ. ಈ ಸ್ವಾರ್ಥದ ಗಳಿಕೆಯ ಆಸೆಯಲ್ಲಿ ಕೀರ್ತಿಮತಿಯು ಸ್ತ್ರೀ ಸಹಜವಾದ ಮಾರ್ದವತೆ, ಕರುಣೆ, ಸಹಾನುಭೂತಿಗಳನ್ನು ಕಳೆದುಕೊಂಡಿದ್ದಳೇ ? ಏನಾದರೇನು ಮನುಷ್ಯರ ಬಯಕೆಗಳು ಊಹೆಗಳು, ಆಸೆಗಳು ಸಂಕಲ್ಪಗಳು, ವಿಧಿಯನ್ನು, ಕರ್ಮಫಲವನ್ನು ಬದಲಿಸುವುದು ಸಾಧ್ಯವೇ?

ಶಾಂತಲಾದೇವಿಗೆ ಒದಗಿದ ಈ ವಿಪತ್ತಿಗಾಗಿ ಸೌಪರ್ಣೀದೇವಿಯು ದುಃಖಿಸಿದಳು. ಪತಿಯು ದೂರ ಹೋಗಿರುವುದರಿಂದ ಆಕೆಯೂ ದುಃಖಿತಳೇ ಅಲ್ಲವೇ ? ಕಷ್ಟದಲ್ಲಿರುವವರಿಗೆ ಕಷ್ಟಗಳ ನೋವಿನ ಅರಿವಿರುತ್ತದೆ. ಸೌಪರ್ಣೀದೇವಿ ತನ್ನ ದುಃಖವನ್ನು ಮಹಾರಾಣಿಗೆ ತಿಳಿಸಿದಳು. ಆ ಸಂದರ್ಭದಲ್ಲಿ "ಶ್ರೀ ಮದ್ರಾಮಾನುಜಾಚಾರ್ಯರು ಸಾಕ್ಷಾತ್ ವಿಷ್ಣುವಿನ ಅಂಶಾವತಾರಿಗಳು. ಆ ಮಹಾಮಹಿಮರಿಂದ ರಾಜಕುಮಾರನಿಗೆ ಶುಭವಾಗುತ್ತದೆ. ಮಹಾರಾಜರು ಈ ಬಗ್ಗೆ ಪ್ರಯತ್ನಿಸಿದರೆ ಶುಭಪ್ರದ" ಎಂದು ಸೂಚಿಸಿದಳು.

ಈ ಸೂಚನೆಯು ಶಾಂತಲಾದೇವಿಗೆ ಬಹುವಾಗಿ ಹಿಡಿಸಿತು. ಜಕ್ಕಣಾಚಾರ್ಯರ ಸಲಹೆ ಕೇಳಲು ಅವರು ಈಗಿಲ್ಲ. ಆತನ ಪತ್ನಿಯ ಈ ಸಲಹೆಯು ಶಿಲ್ಪಿಯೇ ಹೇಳಿರುವುದಾಗಿ ಭಾವಿಸಿದಳು. ಶ್ರೀ ರಾಮಾನುಜಾಚಾರ್ಯರನ್ನು ಕಾಣಬೇಕೆಂದುಕೊಂಡಳು. ಈ ಭಾವನೆಯೇ ಆಕೆಯಲ್ಲಿ ಸಂತೋಷವನ್ನು ಮೂಡಿಸಿತ್ತು.

## ೧೧

ಜಕ್ಕಣಾಚಾರ್ಯನು ಚೋಳಮಂಡಲವನ್ನು ಸೇರಿದ. ಚೋಳ ಭೂಪಾಲನು ಆ ಮಹನೀಯನಿಗೆ ಅದ್ಭುತವಾದ ಸ್ವಾಗತವನ್ನು ನೀಡಿ ಗೌರವಿಸಿ ಸತ್ಕರಿಸಿದ. ತನ್ನ ಬೇಡಿಕೆಯನ್ನು ಮನ್ನಿಸಿ ಅದನ್ನು ನಡೆಸಿಕೊಡಲು ಮಹಾಶಿಲ್ಪಾಚಾರ್ಯನೇ ಬಂದಿರುವುದರಿಂದ ಇನ್ನು ತನ್ನ ರಾಜ್ಯದಲ್ಲಿ ವೈಷ್ಣವ ಮತವು ಬೇರು ಸಹಿತವಾಗಿ ನಾಶವಾಗುತ್ತದೆ ಎಂದು ಆ ಭೂಪಾಲನು ನಂಬಿದ. ಇನ್ನು ರಾಮಾನುಜರ ಶಿಷ್ಯರ ಗರ್ವವು ಅಡಗಿಹೋಗುತ್ತದೆ ಎಂದು ಭಾವಿಸಿದ. ಆದರೆ ಜಕ್ಕಣಾಚಾರ್ಯನು ಸಕಲ ಮತಗಳಲ್ಲೂ ಸಮ ಬುದ್ಧಿ ಇರುವ, ಮತ ಪಕ್ಷಪಾತದಿಂದ ಬಹುದೂರ ಇರುವ, ಸಮತಾ ದೃಷ್ಟಿ ಸಂಪನ್ನನೆಂಬುದು ಆ ಭೂಪಾಲನಿಗೆ ತಿಳಿದಿರಲಿಲ್ಲ.

ಅಂದು ರಹಸ್ಯಾಲೋಚನಾಗಾರದಲ್ಲಿ ಜಕ್ಕಣಾಚಾರ್ಯ ಮತ್ತು ಚೋಳ ಭೂಪಾಲ ಇಬ್ಬರೂ ಸಮಾವೇಶಗೊಂಡರು. ಚೋಳ ಭೂಪಾಲನು ರಾಮಾನುಜಾಚಾರ್ಯರ ಸ್ವಮತ ಪ್ರಚಾರವನ್ನು ವಿವರಿಸಿದ. ತನ್ನ ರಾಜ್ಯದಲ್ಲಿ ಶೈವವೇ ಪ್ರಜೆಗಳಿಂದ ಮಾನ್ಯವಾಗಿರುವ ಮತ. ಆದ್ದರಿಂದ ಇಲ್ಲಿ ಬೇರೆಯ ಮತವು ವರ್ಧಿಸುವುದು, ಶೈವಮತದೊಂದಿಗೆ ಸ್ಪರ್ಧಿಯಾಗಿ ನಿಲ್ಲುವುದು ತಮಗೆ ಸಂತೋಷಕರವಾದುದಲ್ಲವೆಂದು ಸೂಚಿಸಿದ. ರಾಮಾನುಜರು, ಅವರ ವೈಷ್ಣವ ಪ್ರಚಾರಕರು ಸರ್ವನಾಶವಾಗಬೇಕೆಂದು ತನ್ನೆಲ್ಲಾ ಕೋಪವನ್ನು ಕಕ್ಕಿದ.

ಚೋಳಭೂಪಾಲನ ಎಲ್ಲಾ ಮಾತುಗಳನ್ನು ಗಂಭೀರವಾಗಿ ಕೇಳಿದ ನಂತರ ಜಕ್ಕಣಾಚಾರ್ಯ ಕಿರು ನಗೆಯೊಂದಿಗೆ "ಪ್ರಭೂ, ಇಂದು ಮತವಿದ್ವೇಷದ ಪಿಶಾಚಿ ಬಾಯನ್ನು ತೆರೆದು ನಾಲಿಗೆಯನ್ನು ಚಾಚಿ, ತಲೆಗೂದಲನ್ನು ಕೆದರಿಕೊಂಡು ವೀರ ತಾಂಡವವನ್ನು ನಡೆಸುತ್ತಿದೆ. ಎಷ್ಟೋ ಮಂದಿ ಅದಕ್ಕೆ ಆಹಾರವಾಗುತ್ತಿದ್ದಾರೆ. ಯಾವ ಸತ್ಯದ ದೃಷ್ಟಿಯೂ ಅವರಲ್ಲಿ ಇಲ್ಲವಾದರೂ ತಮ್ಮ ಮತವೇ ದೊಡ್ಡದೆಂಬ ಅಹಮಿಕೆಯಿಂದ, ಇತರ ಮತಗಳನ್ನು ಕೀಳಾಗಿ ಕಾಣುತ್ತಿದ್ದಾರೆ. ಮತ ಪಿಶಾಚಿಗೆ ತಾವೂ ಸೇರಿದಂತೆ ಎಲ್ಲರೂ ಆಹುತಿಯಾಗುತ್ತೇವೆ ಎಂಬುದರ ಕಲ್ಪನೆ ಅವರಲ್ಲಿಲ್ಲ. ಎಲ್ಲಾ ಮತಗಳಲ್ಲಿಯೂ ಸ್ವಲ್ಪ ಸತ್ಯ ಇದ್ದೇ ಇರುತ್ತದೆ. ಭೌತವಾದ ಈ ಭೋಗ ಸಂಪದವೇ ಪ್ರಧಾನ ಎಂದು ಯಾವ ಮತವೂ ನಮಗೆ ಹೇಳುವುದಿಲ್ಲ. ಸತ್ಯ-ದಯೆ-ಅಹಿಂಸೆ-ಶೌಚಗಳು ಎಲ್ಲಾ ಮತಗಳ ಮೂಲಸೂತ್ರಗಳಲ್ಲಿರುವ ಅಂಶಗಳು. ಜೀವವನ್ನು ಈ ಸಂಸಾರ ಬಂಧನದಿಂದ ಬಿಡಿಸಿ 'ಕತ್ತಲೆಯಿಂದ ಬೆಳಕಿನೆಡೆಗೆ ಪ್ರಯಾಣಮಾಡಿ' ಅಮೃತ ಸ್ಥಿತಿಯನ್ನು ತಲುಪುವುದರಲ್ಲಿ ನೆರವಾಗುವುದೇ ಎಲ್ಲ ಮತಗಳೂ ಮಾಡುವ ಪ್ರಯತ್ನ. ಇವುಗಳಲ್ಲಿ ಹೊರ ಆಚಾರಗಳಲ್ಲಿ ಸ್ವಲ್ಪ ಬದಲಾವಣೆಗಳು ಇರುವುದು ಸಾಧ್ಯವಿದೆ. ಆ ರೀತಿಯ ಭೇದಗಳಿಗೇ ಪ್ರಾಧಾನ್ಯತೆ ನೀಡಿ ಗುಂಪುಗಳಾಗಿ ವಿಭಾಗಿತಗೊಂಡು ಮನುಷ್ಯರು ಹಾಳಾಗಬಾರದು...." ಎಂದು ವಿನಯವಾಗಿಯೇ ಹೇಳಿದ.

"ಆಚಾರ್ಯ, ನಿಮ್ಮ ಮಾತು ಬಹುವಿಚಿತ್ರವಾಗಿದೆ. ಶಿವ-ಕೇಶವರಲ್ಲಿ ಭೇದವಿಲ್ಲ ಎನ್ನುತ್ತೀರಾ? ಶೈವ-ವೈಷ್ಣವ ಎರಡೂ ಒಂದೇ ಎಂದು ಹೇಳುತ್ತೀರಾ ? ಹಾಗಿದ್ದರೆ ಇಷ್ಟೊಂದು ಬೇರೆಬೇರೆ ನಾಮರೂಪಗಳು ಇರುವುದರ ಕಾರಣವೇನು ? ಇಷ್ಟೊಂದು ಪುರಾಣಗಳಲ್ಲಿ ಆಯಾ ದೇವತೆಗಳ ಪ್ರಭಾವವನ್ನು ಅಷ್ಟು ವಿವರಿಸಿರುವುದೇಕೆ?" ಎಂದು ಕೇಳಿದ ಚೋಳಭೂಪಾಲ.

"ನಮ್ಮ ಪುರಾಣಗಳು ದೇವರನ್ನು ಅನೇಕ ಹೆಸರುಗಳಿಂದ ವಿವರಿಸಿರುವುದು ನಿಜವೇ. ವೇದವೂ ಕೂಡ ಅದೇ ರೀತಿಯಾಗಿ ವರ್ಣಿಸಿದೆ. ಅಷ್ಟುಮಾತ್ರಕ್ಕೆ ನಾವು ಈ ಭೇದವನ್ನು ಮಹತ್ತರವಾಗಿ ಪರಿಗಣಿಸಬಾರದು. ವೇದವೇ **ಏಕಂ ಸತ್** ಎಂದು ಹೇಳಿದೆ. ಮೂಲಭೂತವಾದ ಆ ವಸ್ತುವನ್ನೇ ಸಾಧಕರ ಅನುಕೂಲಕ್ಕಾಗಿ ನಾನಾ ವಿಧವಾದ ಹೆಸರುಗಳಿಂದ, ರೂಪಗಳಿಂದ ವ್ಯವಹರಿಸಲಾಗುತ್ತಿದೆ. ಈ ಜಗತ್ತಿನ ಸೃಷ್ಟಿ ನಡೆಸಿ ಇದರ ಎಲ್ಲಾ ಲೀಲೆಗಳಿಗೂ ಕಾರಣವಾಗಿರುವ ತತ್ತ್ವವು ಒಂದೇ. ಆದರೂ ಅದು ಲೋಕವನ್ನು ಸೃಷ್ಟಿಸುವಾಗ, ಪೋಷಿಸುವಾಗ, ನಾಶಗೊಳಿಸುವಾಗ ಇನ್ನೂ ಇತರ ಕರ್ಮಗಳನ್ನು ನಿರ್ವಹಿಸುವಾಗ ಬ್ರಹ್ಮ, ವಿಷ್ಣು, ಶಿವ ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತದೆ. ವ್ಯಷ್ಟಿ ದೃಷ್ಟಿಯಿಂದ ನೋಡಿದಾಗ ಪ್ರತ್ಯೇಕವಾಗಿ ಕಾಣಿಸಿದರೂ ಸಮಷ್ಟಿ ದೃಷ್ಟಿಯಿಂದ ಅದು ಒಂದೇ. ಅದ್ವೈತವಾಗಿ, ಸಚ್ಚಿದಾನಂದವಾಗಿ ಕಾಣಿಸುತ್ತದೆ. ಈ ಭಾವವು ಸಮಗ್ರವಾದ ತತ್ತ್ವಚಿಂತನೆ ಮಾಡಿ, ವಿಶಾಲ ದೃಷ್ಟಿಯನ್ನು ಅಳವಡಿಸಿಕೊಂಡವರಿಗೆ ಮಾತ್ರವೇ ಉಂಟಾಗುತ್ತದೆ. ಭಗವಂತನಿಗೆ ಸ್ತ್ರೀ-ಪುಂ-ನಪುಂಸಕಾದಿ ಅಂತರಗಳು ಇಲ್ಲ. ಈ ಲಿಂಗ ಭೇದವು ಶರೀರ ಸಂಬಂಧವಾದುದು. ತತ್ತ್ವಜ್ಞರು ಇದಕ್ಕೆ ಪ್ರಾಧಾನ್ಯತೆ ಕೊಡುವುದಿಲ್ಲ. ವೇದ, ಉಪನಿಷತ್ತು, ಪುರಾಣಾದಿಗಳನ್ನು ಅಧ್ಯಯನ ಮಾಡುವವರು ಪಕ್ಷಪಾತ ದೃಷ್ಟಿಯಿಂದಲೇ ಅಧ್ಯಯನ ಮಾಡುತ್ತಾರೆ. ಪರಮಾತ್ಮನನ್ನು ಅನುಭವ ಪೂರ್ವಕವಾಗಿ ಕಂಡುಕೊಂಡವರು ತತ್ತ್ವವೇತ್ತರು ಸ್ಪಷ್ಟವಾಗಿ ಈ ಎಲ್ಲಾ ಅಂತರಗಳನ್ನು, ತರ-ತಮಗಳನ್ನು ಗ್ರಹಿಸಿ ಆ ಸಮಗ್ರ ತತ್ತ್ವದಲ್ಲಿ ಲೀನವಾಗುತ್ತಾರೆ. ಆಗ ಅವರಲ್ಲಿ ಅಂತರಗಳು, ಭಾವ ಭೇದಗಳು ಇರುವುದಿಲ್ಲ. ಈ ನಾನಾವಿಧ ನಾಮರೂಪ ಭೇದಗಳಿಗೆ ಒಳ್ಳೆಯ ಸಮನ್ವಯ ಮಾರ್ಗವನ್ನು ಶಿಲ್ಪಶಾಸ್ತ್ರವು ತೋರುತ್ತದೆ. ಸಾಧಕರ ಹಿತಕ್ಕಾಗಿ, ಉಪಾಸಕರ ಪ್ರಯೋಜನಾರ್ಥವಾಗಿಯೇ ಪರಮ ನಿರ್ಗುಣ ಪರಬ್ರಹ್ಮನಿಗೆ ರೂಪಕಲ್ಪನೆಯನ್ನು ಮಾಡಲಾಗಿದೆ ಎಂದು ಶಾಸ್ತ್ರವೇ ಹೇಳುತ್ತದೆ. ವಸ್ತುತಃ ಅಚಿಂತ್ಯವಾದ ತತ್ತ್ವಕ್ಕೆ ಚಿಂತನೆಯ ಪರಿಧಿಯಲ್ಲಿ ಸಿಲುಕುವ ನಾಮ ರೂಪಗಳನ್ನು ಆಪಾದಿಸಿರುವುದರಿಂದಲೇ ಈ ತತ್ತ್ವದ ಸಿದ್ಧಿಯಾಗಿದೆ. **ಆದರೆ ನಾವು ವಿಶಾಲವಾದ ಈ ಶಾಸ್ತ್ರ ಹೃದಯವನ್ನು ಅರ್ಥ ಮಾಡಿಕೊಳ್ಳಲಾರದೆ ಸಂಪ್ರದಾಯದ ದಾಸರಾಗಿ, ಯಾವ ಶಾಸ್ತ್ರ ನಮ್ಮ ನೆರವಿಗಾಗಿ ಹಾಗೆ ಭಿನ್ನಗೊಂಡಿದೆಯೋ ಅದನ್ನು ಗ್ರಹಿಸಲಾರದೆ, ಚುರುಗೊಳಿಸುವ ಅದರ ಉದ್ದೇಶ್ಯವನ್ನು ನಾವೇ ಪೂರೈಸಬೇಕಾಗಿದೆ ಎಂದು ಕಲ್ಪಿಸಿಕೊಂಡು ಆ ಶಾಸ್ತ್ರಕ್ಕೇ ಉಪಕಾರ ಮಾಡುತ್ತಿದ್ದೇವೆ ಎಂಬ ಭ್ರಮೆಯಲ್ಲಿ ಮೂಲ ಐಕ್ಯತೆಯನ್ನೇ ಭಗ್ನಗೊಳಿಸಿ ಧರ್ಮವನ್ನೇ ಸಮಾಧಿ ಮಾಡಲು ನಾವು ಇಂದು ಸನ್ನದ್ಧರಾಗುತ್ತಿದ್ದೇವೆ.** ಈ ಭಿನ್ನತೆಯು ನಮ್ಮ ಅಲ್ಪಮತಿಯ ಗ್ರಹಿಕೆಗಾಗಿ ರೂಪುಗೊಂಡಿದೆ. ಅದು ಸಮಗ್ರದಲ್ಲಿ ಐಕ್ಯವಾದಾಗ ಇರುವುದು ಏಕತೆ ಎಂಬುದನ್ನು ನಾವು ಅರಿಯಬೇಕು! ಆದರೆ ಅದನ್ನು ಗ್ರಹಿಸಲಾರದ ಸ್ಥಿತಿಯನ್ನು ನಾವು ತಲುಪಿದ್ದೇವೆ. ಆದ್ದರಿಂದಲೇ ಅನೇಕ ವಾದಗಳು, ಭೇದಗಳು ಕಾಣಿಸಿಕೊಳ್ಳುತ್ತಿವೆ" ಎಂದು ಆಚಾರ್ಯ ವಿವರಿಸಿ ಹೇಳಿದ.

"ಹಾಗೆಂದರೆ ಬ್ರಹ್ಮ-ವಿಷ್ಣು-ಶಿವ ಎಂಬ ಈ ದೇವತಾ ಭೇದಗಳು ಇಲ್ಲ ಎಂಬುದು ನಿಮ್ಮ ಅಭಿಪ್ರಾಯವೇ ?" ಎಂದು ಕೇಳಿದ ಚೋಳಭೂಪಾಲ.

ಜಕ್ಕಣಾಚಾರ್ಯ ನಿಧಾನವಾಗಿ ಅದೇ ಗಂಭೀರ ಭಾವದಲ್ಲಿ "ಮೂರೇ ಏಕೆ ? ಜಗತ್ತಿನಲ್ಲಿ ಸೃಷ್ಟಿ-ಸ್ಥಿತಿ-ಲಯ-ತಿರೋಧಾನ-ಅನುಗ್ರಹ ಎಂಬ ಐದು ಕಾರ್ಯಗಳು ನಿರಂತರವಾಗಿ ನಡೆಯುತ್ತಿವೆ. ಈ ಐದೂ ಕಾರ್ಯಗಳಿಗೆ ಬ್ರಹ್ಮ, ವಿಷ್ಣು, ಶಿವ, ಇಂದ್ರ, ಸೂರ್ಯರೇ ಕರ್ತರೆಂಬುದು ನಿಮಗೆ ಗೊತ್ತಿರುವ ಸಂಗತಿಯೇ. ಈ ಪಂಚ ಮೂರ್ತಿಗಳ ಸಮಷ್ಟಿ ರೂಪವೇ ವಿಶ್ವಕರ್ಮ ಪರಮೇಶ್ವರ. ಈ ಸಮಷ್ಟಿ ರೂಪವನ್ನು ಸ್ತ್ರೀಯಾಗಿ ಭಾವಿಸಿದಾಗ ಗಾಯತ್ರೀ ಎಂದು ಕರೆಯುತ್ತೇವೆ. ಗಾಯತ್ರೀ ಕೂಡ ಸರಸ್ವತಿ, ಲಕ್ಷ್ಮೀ, ಪಾರ್ವತಿ, ಶಚೀ, ಸಂಜ್ಞಾದೇವಿಯರ ಸಮಷ್ಟಿ ರೂಪವೆಂದೇ ತತ್ತ್ವಜ್ಞರು ಹೇಳುತ್ತಾರೆ. ಈ ರಹಸ್ಯವು ಒಮ್ಮೆಲೆಗೆ ಗೊತ್ತಾಗಿ ಬಿಡುವುದಿಲ್ಲ. ಬಹುಕಾಲದ ತಪಸ್ಸಿನಿಂದ ತಿಳಿಯಬೇಕು. ಪ್ರಧಾನವಾದ ಪರತತ್ತ್ವವನ್ನು ಹಲವು ರೀತಿಗಳಲ್ಲಿ, ಹಲವು ಬಗೆಗಳಲ್ಲಿ ವರ್ಣಿಸುವುದೇ ಶಾಸ್ತ್ರದ ಉದ್ದೇಶ. ಸೃಷ್ಟಿ ರಹಸ್ಯವೇ ಮಾನವನಿಗೆ ಅರ್ಥವಾಗಬೇಕಾಗಿದೆ. ಒಂದೇ ಶಿವಲಿಂಗದಲ್ಲಿ ಮೂಲದಲ್ಲಿ ಬ್ರಹ್ಮಾಂಶ, ಮಧ್ಯದಲ್ಲಿ ವಿಷ್ಣುವಿನ ಅಂಶ, ಕೊನೆಯಲ್ಲಿ ಶಿವಾಂಶಗಳು ಅಡಗಿವೆಯೆಂಬುದನ್ನು ಶಿಲ್ಪ ಶಾಸ್ತ್ರವು ವಿವರವಾಗಿ ಹೇಳುತ್ತದೆ. ವೈಷ್ಣವರೂ ಕೂಡ ಶಿವಾದಿ ಎಲ್ಲಾ ದೇವತೆಗಳು ವಿಷ್ಣುವಿನ ಹೊಟ್ಟೆಯಲ್ಲಿ ಅಡಗಿದ್ದಾರೆ ಎಂದು ಹೇಳುತ್ತಾರೆ. ಈ ವಿಶಾಲ ದೃಷ್ಟಿಯನ್ನು ನಾವು ಅರ್ಥಮಾಡಿಕೊಳ್ಳಬೇಕು." ಎಂದು ಹೇಳಿದ.

"ವಿಶ್ವಕರ್ಮನು ಎಲ್ಲಾ ದೇವತೆಗಳಿಗಿಂತಲೂ ಹೆಚ್ಚಾಗಿದ್ದಾನೆ ಎಂದು ನೀವು ಹೇಳಿದಿರಿ. ಅದೇ ರೀತಿಯಾಗಿ ನಾವು ಶಿವ ಹೆಚ್ಚು ಎಂದು ಭಾವಿಸಬಹುದಲ್ಲವೇ ?" ಎಂದು ಪ್ರಶ್ನಿಸಿದ ಭೂಪಾಲ.

"ವಿಶ್ವಕರ್ಮನ ಸ್ವರೂಪದಲ್ಲೂ, ಹೆಸರಿನಲ್ಲೂ ಈ ರೀತಿಯ ಸಮಷ್ಟಿಭಾವವು ಇದೆ ಎಂದು ಹೇಳಿದ್ದೇನೆಯೆ ಹೊರತು ಆತನೇ ದೊಡ್ಡವನು ಎಂಬ ಅಭಿಪ್ರಾಯವು ನನ್ನದಲ್ಲ. ಈ ಸರ್ವ ಸಮಷ್ಟಿ ಭಾವವನ್ನು ಕೆಲವರು ಶಿವನಿಗೂ ಮತ್ತೆ ಕೆಲವರು ಕೇಶವನಿಗೂ ಇನ್ನೂ ಕೆಲವರು ಶಕ್ತಿದೇವತೆಗೂ, ಮತ್ತೂ ಕೆಲವರು ಬೇರೊಂದು ದೇವರಿಗೂ ಆರೋಪಿಸುತ್ತಾರೆ. ನಮ್ಮ ಪುರಾಣ ವಾಙ್ಮಯವು ಮಾಡಿರುವ ಕೆಲಸವು ಅಷ್ಟೇ. ಶಿವ ಪುರಾಣಗಳು ಶಿವನೇ ದೊಡ್ಡವನು ಎನ್ನುತ್ತವೆ. ವಿಷ್ಣು ಪುರಾಣಗಳು ವಿಷ್ಣುವೇ ದೊಡ್ಡವನು ಎಂದು ಹೇಳುತ್ತವೆ. ಆದ್ದರಿಂದಲೇ ನಾನು ಹೇಳಿದ್ದು **ನಾಮ-ರೂಪಗಳಿಗೆ ಹೆಚ್ಚು ಪ್ರಾಧಾನ್ಯತೆ ಕೊಡದೆ ಮೂಲ ತತ್ತ್ವದತ್ತ ಕಣ್ಣಿರಿಸಬೇಕು** ಎಂದು. ನಾಗಾರ್ಜುನಾಚಾರ್ಯರ ಶೂನ್ಯಸಿದ್ಧಾಂತವು ಈ ನಾಮ-ರೂಪಗಳಿಗೆ ಯಾವುದೇ ಪ್ರಾಧಾನ್ಯತೆಯನ್ನೂ ಕೊಡುವುದಿಲ್ಲ. ಈಶ್ವರ ತತ್ತ್ವದ ಬಗ್ಗೆ ಮಾಧ್ಯಮಿಕಾವಾದವು ಮೌನವಾಗಿದೆ. ಒಂದೇ ಮಣ್ಣಿನಿಂದ ಬೇರೆ ಬೇರೆ ಆಕಾರದ ಮಡಿಕೆಗಳನ್ನು ಕುಂಬಾರ ಮಾಡುವಂತೆ, ಒಂದೇ ಬಂಗಾರದಲ್ಲಿ ಬಗೆಬಗೆಯ ಆಭರಣಗಳನ್ನು ಸ್ವರ್ಣಕಾರ ಮಾಡುವಂತೆ. ಒಂದೇ ಶಕ್ತಿ ಬಗೆಬಗೆಯಾಗಿ ಕಾಣಿಸುತ್ತದೆ ಎಂಬುದು ಮಾತ್ರವೇ ಇದರ ಸಾರ" ಎಂದ ಜಕ್ಕಣಾಚಾರ್ಯ.

"ಆಚಾರ್ಯರೇ, ನೀವು ಹೇಳುತ್ತಿರುವುದೇನೆಂಬುದೇ ನನಗೆ ಅರ್ಥವಾಗುತ್ತಿಲ್ಲ. ಈಗ ನಿಮ್ಮ ಸೂಚನೆ, ನಾವು ಶೈವವನ್ನು ಬಿಟ್ಟು ವೈಷ್ಣವ ಮತವನ್ನು ಸ್ವೀಕರಿಸಬೇಕೆಂಬುದೇ ?" ಎಂದು

ಳಿದ ಚೋಳ ಭೂಪಾಲ.

"ಪ್ರಭು, ತತ್ತ್ವರಹಸ್ಯಗಳನ್ನು ಗ್ರಹಿಸುವುದು ಕಷ್ಟವಾದುದೇ! ಸುಲಭವಾಗಿ ಇವನ್ನು ಹಿಸುವುದು ಸಾಧ್ಯವಿದ್ದರೆ ಇದಕ್ಕಾಗಿ ತಪಸ್ಸೇಕೆ ? ಗುರುವೇಕೆ ? ಬಹು ಪ್ರಯತ್ನದಿಂದಲೇ ಈ ಹಸ್ಯಗಳನ್ನು ಅರಿಯಬೇಕು. ಮತಕಲಹಗಳು, ಅಸೂಯೆ, ದ್ವೇಷಗಳು, ಪರಸ್ಪರ ರ್ಧೆ-ವೈಷಮ್ಯಗಳು, ಯುದ್ಧ ಮುಂತಾದುವುಗಳಲ್ಲಿಯೇ ನಿತ್ಯ ಕಾಲಕ್ಷೇಪ ನಡೆಸುವ ಜಕಾರಣದಲ್ಲಿರುವವರಿಗೆ ಒಂದೇ ಬಾರಿಗೆ ಈ ರಹಸ್ಯಗಳು ಹೇಗೆ ತಾನೇ ಅರ್ಥವಾಗ ಬಲ್ಲವು? ತ್ತ್ವವನ್ನು ಅರಿಯಬೇಕೆಂಬ ಬಯಕೆಯೊಂದಿದ್ದರೆ ತಾನಾಗಿ ಅದು ನಿಮ್ಮನ್ನು ಕರೆದೊಯ್ಯುತ್ತದೆ. ನ್ಯಮತ ದ್ವೇಷವನ್ನು ಬೆಳೆಸಿಕೊಳ್ಳದೆಯೇ ಸ್ವಮತ ನಿಷ್ಠೆಯನ್ನು ವೃದ್ಧಿಸಿಕೊಳ್ಳಬೇಕೆಂಬುದೇ ನನ್ನ ನವಿ..." ಎಂದು ಹೇಳಿದ ಜಕ್ಕಣಾಚಾರ್ಯ.

ಈ ಮಾತಿಗೆ ಚೋಳ ಭೂಪಾಲ ಒಮ್ಮೆಗೇ ಮಾತನಾಡಲಿಲ್ಲ. ಸ್ವಲ್ಪಕಾಲದ ನಂತರ ಹಾಗಿದ್ದರೆ ಈಗ ನಾವೇನು ಮಾಡಬೇಕು ?...ರಾಮಾನುಜಾಚಾರ್ಯರನ್ನು ಏನು ಮಾಡಬೇಕೆನ್ನುತ್ತೀರಿ? ವರಿಗೆ ಮರಣದಂಡನೆ ವಿಧಿಸಬೇಕೆಂದು ಬಹು ಹಿಂದೆಯೇ ನಾವೇ ನಿಶ್ಚಯಿಸಿದ್ದೆವು..." ಎಂದ.

ಈ ಮಾತಿಗೆ ಜಕ್ಕಣಾಚಾರ್ಯರು ಬೆಚ್ಚಿದರು "ಶಾಂತಂ ಪಾಪಂ... ರಾಮಾನುಜಾಚಾರ್ಯರು ಯಾರಿಗೆ ಯಾವ ದ್ರೋಹ ಮಾಡಿದ್ದಾರೆ ? ವಿಷ್ಣುಪಾರಮ್ಯವನ್ನು ಅವರು ಹೇಳುತ್ತಿದ್ದಾರೆ. ಕ್ತಿಮಾರ್ಗವೇ ಶ್ರೇಷ್ಠ ಎಂದು ಉಪದೇಶಿಸುತ್ತಿದ್ದಾರೆ. ಶ್ರೀಮನ್ನಾರಾಯಣನನ್ನು ಪೂಜಿಸಿ ೋಕ್ಷವನ್ನು ಪಡೆಯಿರಿ ಎಂದು ಹೇಳುತ್ತಿದ್ದಾರೆ. ಇದಕ್ಕೆ ಎಲ್ಲರೂ ಅಧಿಕಾರಿಗಳೇ ಎಂದು ವರು ಸಾರುತ್ತಿದ್ದಾರೆ. ವಿಷ್ಣು ಭಕ್ತಿಯನ್ನು ಪ್ರಚಾರ ಮಾಡಿದ್ದೇ ಪಾಪವಾಗಿ ಅವರಿಗೆ ಮರಣದಂಡನೆ ಧಿಸಬೇಕೆಂದರೆ, ನಿಮ್ಮ ರಾಜ್ಯದ ಶೈವ ಮತ ಪ್ರಚಾರಕನೊಬ್ಬ ವೈಷ್ಣವ ರಾಜ್ಯದವರಿಂದ ೊಲ್ಲಲ್ಪಟ್ಟರೂ ತಪ್ಪಿಲ್ಲ ಅಲ್ಲವೇ ? ಇದು ಸರಿ ಎಂದರೆ ಒಂದು ಮತದ ರಾಜ್ಯವನ್ನು ಇನ್ನೊಂದು ತದವರ ರಾಜ್ಯವು ಸಂಪೂರ್ಣವಾಗಿ ನಾಶಮಾಡಬಹುದು ಎಂದು ಅರ್ಥವಾಗುತ್ತದೆ. ಇದು ಷ್ಟು ಅಪಾಯಕಾರಿಯಾದುದೋ ನಾನು ತಮ್ಮಲ್ಲಿ ಪ್ರತ್ಯೇಕವಾಗಿ ವಿವರಿಸಬೇಕಾಗಿಲ್ಲ. ಆದ್ದರಿಂದ ್ಯಕ್ತಿಗಳಿಗೇ ಮತ ಸ್ವಾತಂತ್ರ್ಯವನ್ನು ನೀಡಿ. ಶಾಂತಿಗೆ ಭಂಗ ಬರದಂತೆ ಎಲ್ಲರೊಂದಿಗೆ ಅವರು ಮಭಾವದಿಂದ ಬದುಕುವಂತೆ ಮಾಡಿ. ಪ್ರಜೆಗಳಿಗೆ ಯಾವ ಮತವನ್ನು ಬೇಕಾದರೂ ನುಸರಿಸುವ ಸ್ವಾತಂತ್ರ್ಯವನ್ನು ನೀಡಿ. ಜನರಿಗೆ ಊಟ-ಬಟ್ಟೆಗಳಿಗೆ ಕ್ಷಾಮವಾಗದಂತೆ ಅವರನ್ನು ಪಾಡಿ. ರಾಮಾನುಜಾಚಾರ್ಯರನ್ನು ಮರಣ ದಂಡನೆಗೆ ಗುರಿಮಾಡುವುದು ಸರಿಯಲ್ಲ. ನಿಮಗೆ ಷ್ಟವಿಲ್ಲದೆ ಇದ್ದರೆ ತಮ್ಮ ರಾಜ್ಯದಿಂದ ಅವರನ್ನು ಹೊರಹಾಕಿ. ಅದೇ ಶಿಕ್ಷೆಯಲ್ಲವೇ ?" ಎಂದು ವರಿಸಿ ಹೇಳಿದ.

"ಆಗಲಿ ನೀವು ಹೇಳಿರುವ ಸಲಹೆಗಳನ್ನು ಪರಿಶೀಲಿಸುತ್ತೇವೆ. ನಮ್ಮ ರಾಜ್ಯದಲ್ಲಿ ಶೈವಮತವು ಳೆಯಬೇಕು. ಅದರ ಪ್ರಚಾರದಲ್ಲಿ ನಿಮ್ಮ ನೆರವನ್ನು ಕೋರುತ್ತಿದ್ದೇವೆ. ಅದಕ್ಕೆ ನಿಮ್ಮ ತ್ತರವೇನು ?" ಎಂದು ನೇರವಾಗಿ ಕೇಳಿದ ಚೋಳಭೂಪಾಲ.

"ಪ್ರಭು, ತಮ್ಮ ಮಾತು ನನಗೆ ಒಪ್ಪಿಗೆಯಾಗಲಿಲ್ಲ. ರಾಮಾನುಜಾಚಾರ್ಯ ಪ್ರಾಣಕ್ಕೆ ಪಾಯವಿಲ್ಲ ಎಂದು ಖಚಿತಪಡಿಸಬೇಕು. ರಾಮಾನುಜರನ್ನು ಕೊಂದರೆ ಪ್ರಭುಗಳಿಗೇ ಮಹಾಪಾಪ

ಸಂಕ್ರಮಿಸುತ್ತಿದೆ ಎಂದು ನಾನು ಹೇಳುತ್ತಿದ್ದೇನೆ. ದಯಮಾಡಿ ಮನ್ನಿಸಬೇಕು. ತಮ್ಮ ಒಳಿತಿಗಾಗಿಯೆ ಈ ಮಾತು ಹೇಳುತ್ತಿದ್ದೇನೆ... ಇನ್ನು ಮತ ಪ್ರಚಾರದ ಮಾತು, ಯಾವುದೇ ಮತವನ್ನು ಇದೆ ಶ್ರೇಷ್ಠ ಎಂದು ಪ್ರಚಾರಮಾಡುವುದು ನನ್ನ ಉದ್ದೇಶವಲ್ಲ. ಈ ಅಂಶ ನನ್ನ ಮಾತಿನಿಂದ ಪ್ರಭುಗಳಿ ಮನದಟ್ಟಾಗಿದೆ ಎಂದುಕೊಂಡಿದ್ದೇನೆ. ಮತಗಳ ಮಧ್ಯೆ ಇರುವ ಭಿನ್ನತೆಗಳನ್ನು, ದ್ವೇಷಗಳನ ದೂರಮಾಡಿ ಸರ್ವಮತ ಸಾಮರಸ್ಯವನ್ನು ಬೆಳೆಸುವುದೇ ನಾನು ಬಯಸುವ ಮಾರ್ಗ. ಅದೆ ಮಾರ್ಗದಲ್ಲಿ ಶಿಲ್ಪ ಕಲಾಸೇವೆಯನ್ನು ನಡೆಸುತ್ತಾ ಇದ್ದೇನೆ. ಈಗ ನಾನು ಕಾರ್ಯಾಂತರದಿಂ ವಿಂಧ್ಯಪರ್ವತದ ತನಕ ಹೋಗಬೇಕಾಗಿದೆ. ಆದ್ದರಿಂದ ಪ್ರಭುಗಳು ನನ್ನನ್ನು ಮನ್ನಿಸಿ ಅಪ್ಪ ಕೊಡಬೇಕು. ರಾಮಾನುಜಾಚಾರ್ಯರಿಗೆ ಮಾತ್ರ ನಿಮ್ಮಿಂದ ತೊಂದರೆಯಾಗದಿರಲಿ ಎಂದು ಇನ್ನೊವೆ ಪ್ರಾರ್ಥಿಸುತ್ತೇನೆ" ಎಂದು ಅರಿಕೆ ಮಾಡಿಕೊಂಡ ಜಕ್ಕಣಾಚಾರ್ಯ.

ಚೋಳ ಭೂಪಾಲನಿಂದ ಬೀಳ್ಕೊಂಡ ಜಕ್ಕಣಾಚಾರ್ಯ ಬೇರೆಲ್ಲಿಗೋ ಹೊರಟು ಹೋದ

ಚೋಳ ಭೂಪಾಲನು ಜಕ್ಕಣಾಚಾರ್ಯನ ಬೋಧನೆಯನ್ನು ಕೇಳಿದ್ದ. ಈಗ ರಾಮಾನುಜಾಚಾರ್ಯರನ್ನು ಏನು ಮಾಡಬೇಕೆಂಬುದು ಹೊಳೆಯಲಿಲ್ಲ. ಮರಣದಂಡನ ವಿಧಿಸಬೇಕೆಂದು ಮಾಡಿಕೊಂಡಿದ್ದ ತೀರ್ಮಾನವನ್ನು ಮಾತ್ರ ಈಗ ಸಡಲಿಸಿದ್ದ. ಜಕ್ಕಣಾಚಾ ಹೇಳಿದ ತಾತ್ವಿಕ ಮಾತುಗಳು ಪೂರ್ಣವಾಗಿ ಭೂಪಾಲನಿಗೆ ಅರ್ಥವಾಗಲಿಲ್ಲವಾದರೂ ಆ ಮಾತಿನಲ್ಲಿ ಏನೋ ಸತ್ಯವಿದೆ ಎಂಬುದು ಮಾತ್ರ ಆತನಿಗೆ ಖಚಿತವಾಗಿತ್ತು. ಆದ್ದರಿಂದ ರಾಮಾನುಜಾಚಾರ್ಯರಿಗೆ ಮರಣಶಿಕ್ಷೆ ವಿಧಿಸದೆ, ಕಣ್ಣುಗಳನ್ನು ಕೀಳಿಸಿ ತಮ್ಮ ರಾಜ್ಯದಿಂದ ಹೊರಹಾಕಬೇಕೆಂದು ಆಜ್ಞೆ ಮಾಡಿದ. ಆದರೆ 'ಜಕ್ಕಣಾಚಾರ್ಯನು ತನ್ನ ಶೈವ ಮತದ ಪ್ರಾಧಾನ್ಯತೆಗೆ ರಾಮಾನುಜಾಚಾರ್ಯರೊಂದಿ ವಾದ ಮಾಡಿ ಅವರನ್ನು ಸೋಲಿಸುತ್ತಾನೆ. ತನ್ನ ರಾಜ್ಯದಲ್ಲಿ ಎಲ್ಲಾ ಕಡೆಯೂ ಶಿವಾಲಯಗಳ ಬಹು ಸುಂದರವಾಗಿ ಬೆಳಗುತ್ತವೆ. ಶೈವ ಮತವೇ ಎಲ್ಲರ ಮತವಾಗುತ್ತದೆ' ಎಂದೆಲ್ಲಾ ಕನಸಿ ಗೋಪುರವನ್ನು ನಿರ್ಮಿಸಿಕೊಂಡಿದ್ದ ಚೋಳಭೂಪಾಲನ ಕನಸು ಕನಸಾಗಿಯೇ ಉಳಿಯಿತು.

'ಯಾರೋ ಮಹಾತ್ಮನೊಬ್ಬ ಬಂದು ಚೋಳಭೂಪಾಲನಿಗೆ ತತ್ವಬೋಧನೆ ಮಾಡಿ ತನ ಮರಣದಂಡನೆಯನ್ನು ತಪ್ಪಿಸಿದನಂತೆ' ಎಂಬ ವಿಷಯವು ರಾಮಾನುಜಾಚಾರ್ಯರಿಗೆ ಗೊತ್ತಾಯಿತು ಈ ಹಠಾತ್ ಸಂಘಟನೆಯು ಆ ಶ್ರೀಮನ್ನಾರಾಯಣನ ಅನುಗ್ರಹದಿಂದಲೇ ನಡೆದಿರಬೇಕು ಶ್ರೀಮನ್ ಮಹಾವಿಷ್ಣುವೇ ಮಹಾತ್ಮನ ರೂಪದಲ್ಲಿ ಬಂದು ಶ್ರೀ ವೈಷ್ಣವ ಧರ್ಮದ ಪ್ರಚಾರಕ್ಕಾ ತನಗೆ ಜೀವದಾನವನ್ನು ಕೊಟ್ಟಿರಬೇಕು ಎಂದು ಭಾವಿಸಿದರು. ಇದರಿಂದ ವಿಷ್ಣುವಿನ ಮೇಲಿ ಭಕ್ತಿಯು ಅವರಲ್ಲಿ ದ್ವಿಗುಣಗೊಂಡಿತು.

ರಾಮಾನುಜಾಚಾರ್ಯರ ಶಿಷ್ಯರಲ್ಲಿ ಕೂರನಾಥಾಚಾರ್ಯ ಪರಮಗುರುಭಕ್ತ. ಆಚಾರ್ಯ ಅವತಾರದ ಕಾರಣವು ಆತನಿಗೆ ಸಂಪೂರ್ಣವಾಗಿ ಗೊತ್ತಿತ್ತು. ತಾನೇ ರಾಮಾನುಜಾಚಾ ಎಂದು ಹೇಳಿಕೊಂಡು, ತನ್ನ ಕಣ್ಣುಗಳನ್ನು ತಾನೇ ಕಿತ್ತು ಭಟರಿಗೆ ಅರ್ಪಿಸಿ ತನ್ನ ಗುರುದೇವನಿ ಒದಗಿದ್ದ ವಿಪತ್ತನ್ನು ಪರಿಹರಿಸಿ ತನ್ನ ಲೋಕೋತ್ತರ ಗುರುಭಕ್ತಿಯನ್ನು ಪ್ರದರ್ಶಿಸಿದ.

ರಾಮಾನುಜಾಚಾರ್ಯರು ಚೋಳರಾಜ್ಯವನ್ನು ಬಿಟ್ಟು ನೆರೆಯ ಹೊಯ್ಸಳ ರಾಜ್ಯವನ್ನು ವೈಷ್ಣ ಮತದ ಪ್ರಚಾರಾರ್ಥವಾಗಿ ಪ್ರವೇಶಿಸಿದರು.

# ೧೨

ಮನುಷ್ಯನು ಆಪತ್ತಿನಲ್ಲಿ ಸಿಲುಕಿಕೊಂಡಿರುವಾಗ ಆ ಆಪತ್ತಿನಿಂದ ಹೊರಬರಲು ುತಭೇದಗಳನ್ನು, ವರ್ಗವಿಭೇದಗಳನ್ನು, ವಿರೋಧಗಳನ್ನು, ಅಂತರಗಳನ್ನು ಆತಂಕಗಳನ್ನು ರಿಗಣಿಸುವುದಿಲ್ಲ. ತನ್ನ ಕಷ್ಟವನ್ನು ಪರಿಹರಿಸಿಕೊಳ್ಳಲು ಅನ್ಯಮತವನ್ನು ಸ್ವೀಕರಿಸುವುದು, ರೋಧಿಯಾದವನೇ ನೆರವಿಗೆ ಬಂದರೆ ಅವನ ಸಹಾಯವನ್ನು ಸ್ವೀಕರಿಸಿ ಅವನ ಶ್ರಯದಲ್ಲಿರುವುದು ತೀರಾ ಸಾಧಾರಣವಾದ ಅಂಶ. ಭಿನ್ನಮತದವನಾದರೂ ಕಷ್ಟದಲ್ಲಿರುವವರ ಗ್ಗೆ ಕರುಣೆ ತೋರುವುದು ಅವರ ಕಷ್ಟಗಳನ್ನು ಪರಿಹರಿಸಲು ಪ್ರಯತ್ನಿಸುವುದು ಮಾನವಧರ್ಮದ ೊದಲ ಪಾಠ. ಅದನ್ನು ಮರೆತವರು ಯಾವ ಮತವನ್ನು ಅವಲಂಬಿಸಿದರೂ ಆ ಮತದ ಾಲಿಗೆ ಅವರು ಅನರ್ಹರೇ. ಎಲ್ಲಾ ಮತಗಳಿಗೂ ಮೂಲ ಸೂತ್ರಗಳು ಮಾನವ ಧರ್ಮದ ತ್ವಗಳೇ. ಅಭಿಪ್ರಾಯ ಭೇದಗಳಿದ್ದರೂ ಕಷ್ಟಕಾಲದಲ್ಲಿ ಪರಸ್ಪರ ನೆರವಾಗಿ ಮಾನವತಾ ್ಯೋತಿಯನ್ನು ಉಳಿಸುವುದು ಆದ್ಯ ಕರ್ತವ್ಯ. ಇದರಿಂದ ಜೈನನಾಗಿದ್ದ ವೀರಬಲ್ಲಾಳ ಭೂಪತಿಯು ಾಮಾನುಜಾಚಾರ್ಯರ ಆಶೀರ್ವಾದವನ್ನು ಬೇಡಲು ಸಿದ್ಧವಾದುದರಲ್ಲಿ ಯಾವ ವಿಚಿತ್ರವೂ ಇಲ್ಲ. ೈನರಿಗೆ ಆಚಾರ್ಯರು ನೆರವಾದುದರಲ್ಲೂ ವಿಶೇಷವೇನೂ ಇಲ್ಲ.

ಮಹಾರಾಜರು ಯುವರಾಜನನ್ನು ತನ್ನ ಸೋದರ ನರಸಿಂಹದೇವನ ಪ್ರತಿರೂಪವಾಗಿಯೇ ಾವಿಸಿಕೊಂಡು ಬರುತ್ತಿದ್ದರು. ಮಗನೆಂಬ ಪುತ್ರವಾತ್ಸಲ್ಯ, ಅಣ್ಣನ ಹೆಸರು ಇರಿಸಿರುವುದರಿಂದ ೂಜ್ಯಭಾವನೆ ಮಹಾರಾಜರಲ್ಲಿತ್ತು. ರಾಜಕುಮಾರನ ಆರೋಗ್ಯವನ್ನು ಹಿಂದಕ್ಕೆ ಪಡೆಯಲು ುಹಾರಾಜರು ಯಾವುದೇ ತ್ಯಾಗಕ್ಕೂ ಸಿದ್ಧವಾಗಿದ್ದರು. ಅದರಲ್ಲೂ ಶಾಂತಲಾದೇವಿಯ ಪ್ರಾರ್ಥನೆ, ರಮನೆಯವರ ಬೇಡಿಕೆ, ಪ್ರಜೆಗಳ ವಾಕ್ಯ ಮಹಾರಾಜರ ಮನಸ್ಸಿನ ಮೇಲೆ ಬಹು ಪ್ರಭಾವ ೀರಿತ್ತು. ಮಹಾರಾಜರ ಮನವೂ ಬದಲಾವಣೆಗೊಂಡಿತು. ಜಕ್ಕಣಾಚಾರ್ಯರೇ ಇದ್ದಿದ್ದರೆ ಈ ಪತ್ತಿನಿಂದ ನಿರಾಯಾಸವಾಗಿ ತನ್ನನ್ನು ಪಾರುಮಾಡುತ್ತಿದ್ದರು ಎಂದು ಹಲವು ಬಾರಿ ತನ್ನಲ್ಲಿ ನೇ ಹೇಳಿಕೊಂಡಿದ್ದ. ಮಂತ್ರಶಾಸ್ತ್ರದಲ್ಲಿ ಅವರಿಗೆ ಸಮಾನಾದವರು ಯಾರು ? ಅಂತಹ ೇಧಾವಿ, ಶಿಲ್ಪರ್ಷಿ, ತನ್ನನ್ನು ಕೈಹಿಡಿದು ನಡೆಸುತ್ತಿದ್ದ ನಿಸ್ವಾರ್ಥಿ. ಹಲವು ವ್ರತ, ಪೂಜೆ, ಹರಕೆಗಳ ಲವಾಗಿ ಪಡೆದಿರುವ ಹೊಯ್ಸಳ ವಂಶಾಂಕುರವನ್ನು, ಭಾವೀ ಸಾಮ್ರಾಜ್ಯಾಧೀಶನನ್ನು, ಮ್ಮಂದೆಯೇ ಕಳೆದುಕೊಳ್ಳುವುದು ಸಾಧ್ಯವೇ ?

ರಾಮಾನುಜಾಚಾರ್ಯರು ಅರಮನೆಗೆ ಬಂದರು. ಅವರನ್ನು ಯಥೋಚಿತ ಸತ್ಕಾರಗಳಿಂದ ್ವಾಗತಿಸಿ, ಪೂಜಿಸಿ ನಂತರ ವಿವರಗಳನ್ನು ಅರಿಕೆ ಮಾಡಿಕೊಂಡು ಇಂತು ಹೇಳಿದ :

"ಸ್ವಾಮೀ, ನಮ್ಮ ಪ್ರಿಯಪುತ್ರನ ಗ್ರಹಬಾಧೆಯನ್ನು ತಾವು ನಿವಾರಿಸಬೇಕಾಗಿ ಪ್ರಾರ್ಥನೆ ದೇವರೇ ತಾನಾಗಿ ಕಳುಹಿಸಿರುವ ದೂತರು ನೀವು ಎಂದು ನಾವು ಭಾವಿಸಿದ್ದೇವೆ. ನಮ್ಮ ಪುತ್ರನಿಗೆ ಸೋಂಕಿರುವ ಈ ಜಾಡ್ಯವನ್ನು ನಾಶಮಾಡಿ ನಮ್ಮ ವಂಶವನ್ನು ಕಾಪಾಡಬೇಕೆಂದು ಪ್ರಾರ್ಥಿಸುತ್ತೇನೆ. ನೀವು ಹೇಳಿದಂತೆ ನಾವು ನಡೆಯುತ್ತೇವೆ."

ಈ ಪ್ರಾರ್ಥನೆಯನ್ನು ಕೇಳಿದ ರಾಮಾನುಜಾಚಾರ್ಯರು "ಎಲ್ಲವೂ ಶ್ರೀ ಮನ್ನಾರಾಯಣನ ಕರುಣಾಕಟಾಕ್ಷ. ನಾವು ಮಾಡಬಹುದಾದ ಎಲ್ಲಾ ಪ್ರಯತ್ನಗಳನ್ನೂ ಮಾಡುತ್ತೇವೆ" ಎಂದು ಹೇಳಿದರು.

ಇಪ್ಪತ್ತೊಂದು ದಿನಗಳ ಕಾಲ ಅರಮನೆಯಲ್ಲಿಯೇ ಇದ್ದುಕೊಂಡು ನಾರಾಯಣೋಪಾಸನೆ ಮಾಡಿದರು. ಹಲವು ಮೂಲಿಕೆಗಳ ಚೂರ್ಣಗಳನ್ನೂ ಕೊಟ್ಟರು. ಯಾವ ಚೂರ್ಣದ ಫಲವೋ, ಯಾವ ಮಂತ್ರದ ಫಲವೋ, ಅಥವಾ ಭಗವಂತನ ಅನುಗ್ರಹವೇನೋ ನರಸಿಂಹದೇವನು ಗ್ರಹಬಾಧೆಯಿಂದ ಮುಕ್ತನಾದ. ಗ್ರಹಣದಿಂದ ಮುಕ್ತನಾದ ಪೂರ್ಣಚಂದ್ರನಂತೆ ಕಾಣುತ್ತಿದ್ದ ರಾಜಕುಮಾರನನ್ನು ಕಂಡ ಎಲ್ಲರೂ ಸಂತೋಷಿಸಿದರು. ರಾಮಾನುಜಾಚಾರ್ಯರ ಪ್ರಭಾವವು ಅದ್ಭುತವೆಂದು ರಾಜ್ಯವೆಲ್ಲಾ ದೊಡ್ಡ ಸುದ್ದಿಯಾಗಿ ಹರಡಿತು.

ವೀರಬಲ್ಲಾಳ ಭೂಪತಿಯು ರಾಮಾನುಜಾಚಾರ್ಯರು ತನಗೆ ಮಾಡಿದ ಈ ನೆರವಿಗೆ ಕೃತಜ್ಞತೆಗಳನ್ನು ಅರ್ಪಿಸಿ, ಆಚಾರ್ಯರನ್ನು ಅಪರ ನಾರಾಯಣಮೂರ್ತಿಯನ್ನಾಗಿ ಭಾವಿಸಿ "ಸ್ವಾಮೀ, ಇಷ್ಟೊಂದು ದೊಡ್ಡ ಉಪಕಾರ ಮಾಡಿರುವ ತಮಗೆ ಏನನ್ನು ಅರ್ಪಿಸಿ ಋಣಮುಕ್ತನಾಗಬಹುದು ?! ತಮ್ಮ ಅಭೀಷ್ಟವನ್ನು ತಿಳಿಸಿ ನಮ್ಮನ್ನು ಧನ್ಯನನ್ನಾಗಿ ಮಾಡಬೇಕೆಂದು ಪ್ರಾರ್ಥಿಸುತ್ತೇವೆ..." ಎಂದು ವಿನಯದಿಂದ ಕೇಳಿದ.

ತಮ್ಮ ಅಂತರಂಗವನ್ನು ತೋಡಿಕೊಳ್ಳಲು ರಾಮಾನುಜಾಚಾರ್ಯರಿಗೆ ಒಂದು ಅವಕಾಶ ಸಿಕ್ಕಿತು. "ಮಹಾರಾಜರೇ, ವೈದಿಕ ಮತವು ಸನಾತನವಾದುದು. ಅದು ಬಹುವಿಶಾಲವಾದದ್ದು. ಎಷ್ಟೇ ಮತಗಳು ಬಂದರೂ ಎಲ್ಲವೂ ಅದರಲ್ಲಿಯೇ ಸೇರಿಕೊಳ್ಳಬಲ್ಲವು. ಎಲ್ಲಾ ವೇದಗಳಲ್ಲೂ ಸ್ತುತಿಸಲ್ಪಟ್ಟಿರುವ ಶ್ರೀಮನ್ನಾರಾಯಣನ ಪ್ರಸಾದದಿಂದಲೇ ನಿಮ್ಮ ಕುಮಾರನು ಕುಶಲಿಯಾಗಿದ್ದಾನೆ. ಇದರಲ್ಲಿ ನನ್ನ ಸಾಮರ್ಥ್ಯ ಎಂಬುದೇನೂ ಇಲ್ಲ. ನಾರಾಯಣ ಭಕ್ತ ನಾನಾದ್ದರಿಂದ ಆ ಸ್ವಾಮಿ ನನ್ನ ಕೋರಿಕೆಯನ್ನು ಈಡೇರಿಸಿದ. ಆತನು ಕರುಣಾಮೂರ್ತಿ. ಭಕ್ತ ಜನ ಸುಲಭನು. ಆದ್ದರಿಂದಲೇ ನನ್ನ ದೇವನ ಮಹಿಮೆಯನ್ನು ಹೊಗಳುತ್ತಾ ಎಲ್ಲಾ ಮಾನವ ಧರ್ಮಗಳನ್ನೂ ಬೋಧಿಸುತ್ತಿರುವ ವೈದಿಕಮತವನ್ನು ವಿಸ್ತರಿಸುವುದು ನನ್ನ ಕೆಲಸ. ಆದ್ದರಿಂದ ನಿಮಗೆ ಇಷ್ಟವೂ, ಆಧುನಿಕವೂ ಆದ ಜೈನಮತವನ್ನು ಬಿಟ್ಟು ಸನಾತನವಾದ ವೈದಿಕ ಮತವನ್ನು ಕೈಹಿಡಿಯಿರಿ. ಅದರಲ್ಲೂ ನನಗೆ ಇಷ್ಟವಾಗಿರುವ, ನಾನು ಪ್ರಚಾರ ಮಾಡುತ್ತಿರುವ ವಿಶಿಷ್ಟಾದ್ವೈತಕ್ಕೆ ಬಲವಾದ ಆಸರೆಯಾಗಿ ನಿಂತು ನನಗೆ ನೆರವಾಗಬೇಕೆಂದು ಪ್ರಾರ್ಥನೆ. ಅದೇ ನೀವು ಈ ಸಂಬಂಧದಲ್ಲಿ ತೋರಿಸಬಹುದಾದ ಕೃತಜ್ಞತೆ" ಎಂದು ನೇರವಾಗಿ ಹೇಳಿದರು.

ಈ ಮಾತು ಕೇಳಿದ ಬಲ್ಲಾಳ ಭೂಪತಿ ಚಕಿತನಾದ. ರಾಮಾನುಜಾಚಾರ್ಯರು ತಮ್ಮ ಮತದ ಪ್ರಚಾರಕ್ಕಾಗಿ ಭಟರನ್ನೋ, ಹಣವನ್ನೋ ಕೇಳುತ್ತಾರೆ ಎಂದುಕೊಂಡಿದ್ದ. ಆದರೆ ತನ್ನ ಮತವನ್ನ

ಬದಲಿಸು ಎಂದು ಕೇಳುತ್ತಾರೆ ಎಂದು ನಿರೀಕ್ಷಿಸಿರಲಿಲ್ಲ. ತನಗೆ ಮೊದಲು ಪರಿಚಯವೇ ಇಲ್ಲದ ಆಚಾರ್ಯನು ನೇರವಾಗಿ ಹೀಗೆ ಕೇಳುತ್ತಿರುವುದು ಬಹು ಸಾಹಸದ ವಿಷಯವಾಗಿ ಭಾಸವಾಯಿತು.

'ಆಪತ್ತಿನಲ್ಲಿ ಸಿಲುಕಿರುವ ಮನುಷ್ಯನನ್ನು ಇತರರು ತಮಗೆ ಪ್ರಿಯುವಾದಂತೆ ಬಳಸಿಕೊಳ್ಳುತ್ತಾರೇನೋ ? ತಾನು ರಾಜನಾಗಿದ್ದರೂ ತನ್ನ ಶ್ರೇಯಸ್ಸನ್ನು ಕೋರುತ್ತಿದ್ದವನು, ತನ್ನ ಸಾಮ್ರಾಜ್ಯಾಭ್ಯುದಯಕ್ಕೆ ಹಲವಾರು ಬಗೆಗಳಲ್ಲಿ ನೆರವಾಗುತ್ತಿದ್ದವನು, ತನ್ನನ್ನು ಪ್ರಿಯ ಶಿಷ್ಯನನ್ನಾಗಿ ಭಾವಿಸಿದರೂ ಆಜ್ಞೆಯನ್ನು ಎಂದೂ ನೀಡದವನು, ಜಗತ್ತಿಗೇ ಆದರ್ಶ ಪ್ರಾಯನಾದವನು, ಇದುವರೆವಿಗೂ ಎಂದೂ ಈ ರೀತಿಯಾಗಿ ಮತವನ್ನು ಬದಲಿಸಿಕೋ ಎಂದು ಒಮ್ಮೆಯೂ ಹೇಳಿರಲಿಲ್ಲವಲ್ಲಾ ? ಕೊನೆಗೆ ಎಂತಹ ಸಂದರ್ಭದಲ್ಲೂ ಈ ಬಗ್ಗೆ ಸಣ್ಣ ಸೂಚನೆಯನ್ನೂ ಕೊಡಲಿಲ್ಲವಲ್ಲಾ ! ಹೌದು, ಆತನು ಹಾಗೇಕೆ ಹೇಳುತ್ತಾನೆ ? ಈ ಮತ ತತ್ತ್ವದ ಸಂಕುಚಿತ ವ್ಯಾಪ್ತಿಯಿಂದ ಬಹುದೂರ ಇರುವ ಆತ, ಶೈವ-ವೈಷ್ಣವ, ಜೈನ-ಬೌದ್ಧ-ಹಿಂದೂ ಎಂದು ಚರ್ಚಿಸಲು ಜುಗುಪ್ಸೆ ಪಡುತ್ತಿದ್ದ. ಸಾಧಾರಣರಾದವರ ಕಲ್ಪಿತವಾದ ಈ ರೂಪನಾಮಗಳನ್ನು ದಾಟಿ ಹೋಗಬೇಕೆಂದು ಆತನ ಆಸೆ. ಆತನ ಪ್ರಧಾನ ದೃಷ್ಟಿ, ವಿಶ್ವಸೃಷ್ಟಿಮೂಲ. ಆ ಸೃಷ್ಟಿ ತತ್ತ್ವವನ್ನು ಅರಿತುಕೊಳ್ಳಲು ಮಾನವರು ಯಾವ ಸಾಧನವನ್ನು ಕೈಗೊಂಡರೂ ಆ ಸೃಷ್ಟಿಕರ್ತನನ್ನು ಅರಿತುಕೊಂಡು ಧನ್ಯರಾಗಬೇಕೆಂಬುದೆ ಶಿಲ್ಪಾಚಾರ್ಯನ ಪರಮೋದ್ದೇಶ. ಅಬ್ಬಾ ಎಂತಹ ಗಂಭೀರವಾದ ಭಾವ ?! ಎಂತಹ ಸಮರದೃಷ್ಟಿ ! ಎಂತಹ ನಮ್ರವಾದ ಸುಶೀಲವಾದ ಆಚರಣೆ !'

ಮಹಾರಾಜನ ಮನಃಪಟಲದಲ್ಲಿ ಜಕ್ಕಣಾಚಾರ್ಯ ಕಾಣಿಸಿಕೊಂಡ. ನಾನಾ ಬಗೆಯ ಭಾವನೆಗಳು ಹಾದು ಹೋದವು ಆದರೂ ಈಗ ತನ್ನ ಕರ್ತವ್ಯವೇನು ? ತನಗೆ ದಾರಿ ತೋರಿ ಕರೆದೊಯ್ಯುವ ಆಚಾರ್ಯ ಈಗ ನಮ್ಮೊಂದಿಗೆ ಇಲ್ಲ. ತಾನು ಹಿಂದೂ ಸಂಪ್ರದಾಯವನ್ನು ಬಿಡಲು ಕಾರಣ ಹಿಂಸಾತ್ಮಕವಾದ ಯಜ್ಞಗಳು. ಈಶ್ವರನು ಕರುಣಿಸಿದ ವೇದಗಳಲ್ಲೂ ಜೀವಕೋಟಿಗಳನ್ನು ಸುಟ್ಟು ತಿನ್ನುವ ಸ್ವಾರ್ಥ ಸಂಪಾದಿಸಿಕೋ ಎಂದು ಬೋಧಿಸಲಾಗುತ್ತಿದೆಯೇ ? ಇದು ಆತನಿಗೆ ಸ್ವಲ್ಪವೂ ರುಚಿಸಲಿಲ್ಲ. ಈ ವಿಷಯವನ್ನು ಜಕ್ಕಣಾಚಾರ್ಯನೊಂದಿಗೆ ಅನೇಕ ಬಾರಿ ತಾನು ಚರ್ಚಿಸಿದ್ದ. 'ಹಿಂಸೆಯಿಲ್ಲದ ಸನಾತನವಾದ ವೈದಿಕ ಮತ ಒಂದಿದೆ. ಅದರ ಸ್ವರೂಪವನ್ನು ವೇದಗಳನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿ ಅರ್ಥಮಾಡಿಕೊಂಡರೆ ಮಾತ್ರವೇ ಆಗುತ್ತದೆ. ಈಗಲೇ ಅರ್ಥವಾಗುವುದಿಲ್ಲ.' ಎಂದು ಜಕ್ಕಣಾಚಾರ್ಯ ಹೇಳಿದ್ದ. ಈಗ ತಾನು ಅದನ್ನು ತಿಳಿದುಕೊಳ್ಳುವ ಅವಕಾಶವೂ ಕೂಡ ಇಲ್ಲದಾಯಿತು.

ಎಷ್ಟೇ ಯೋಚಿಸಿದರೂ ಅವರಿಗೆ ಬೇರೆ ಮಾರ್ಗವೇ ಕಾಣಿಸಲಿಲ್ಲ. 'ರಾಜಕುಮಾರ ಘೋರವಿಪತ್ತಿಗೆ ಗುರಿಯಾಗಿ ಹಿಂದೂ ಮತ ಪ್ರಭಾವದಿಂದ ಆರೋಗ್ಯ ಪಡೆದುಕೊಂಡ. ಆದರೂ ಮಹಾರಾಜ ಜೈನಮತವನ್ನು ಬಿಟ್ಟು ವೈದಿಕಮತವನ್ನು ಸ್ವೀಕರಿಸಲಿಲ್ಲ. ಆತನ ಮತಾಭಿಮಾನದ ಮೂರ್ಖತನ ಪರಮಾವಧಿ ಇದು! ಇಂತಹ ಮೂರ್ಖನೇ ನಮಗೆ ರಾಜ ? ಇಂತಹವನ ಆಡಳಿತ ನಮಗೆ ಹೇಗೆ ಪುಣ್ಯಪ್ರದವಾಗಬಲ್ಲದು ?' ಎಂದು ಪ್ರಜೆಗಳು ತನ್ನ ಬಗ್ಗೆ ಜುಗುಪ್ಸೆಯಿಂದ ಆಡಿಕೊಳ್ಳಬಹುದು. ಈ ಜುಗುಪ್ಸೆಯೇ ಮುಂದೆ ಪ್ರಜೆಗಳೆಲ್ಲಾ ಸೇರಿ ಬಂಡಾಯ ಮಾಡಲು ನೆರವಾಗಬಹುದು. ಇದರಿಂದ ಸಾಧುಪ್ರಜೆಗಳಿಗೆ ತೊಂದರೆ ನಷ್ಟಗಳು ಉಂಟಾಗುತ್ತವೆ. ಶಾಂತಿ

ಸೌಖ್ಯಗಳು ದೂರವಾಗುತ್ತವೆ. ಇತ್ತೀಚೆಗೆ ತಾನೇ ಈ ರೀತಿಯ ಬಂಡಾಯವನ್ನು ಎದುರಿಸಬೇಕಾಯಿತು. ಮತ್ತೆ ಅದೇ ರೀತಿಯ ಬಂಡಾಯಕ್ಕೆ ನಾನೇ ಕಾರಣನಾಗಬೇಕೇ ?...' ಹೀಗೆ ಯೋಚಿಸುತ್ತಾ ಹೋದಂತೆಲ್ಲಾ ಭವಿಷ್ಯವೆಲ್ಲಾ ಭಯಂಕರವಾಗಿಯೇ ಭಾಸವಾಯಿತು. ಈ ರೀತಿಯ ಬಂಡಾಯಕ್ಕೆ ಕಾರಣವಾಗಬಹುದಾದ ತಾನು ವೈದಿಕಮತವನ್ನು ಸ್ವೀಕರಿಸಿ ಅದರಲ್ಲಿ ನಡೆಸಬೇಕಾಗಿರುವ ಬದಲಾವಣೆಗಳನ್ನು, ಸಂಸ್ಕಾರಗಳನ್ನು ಮಾಡುವುದೇ ಒಳ್ಳೆಯದಲ್ಲವೇ ? ಎಂದುಕೊಂಡು ಒಂದು ತೀರ್ಮಾನಕ್ಕೆ ಬಂದ.

ರಾಮಾನುಜಾಚಾರ್ಯರು ವೀರಬಲ್ಲಾಳ ಭೂಪಾಲರಿಗೆ ವೈದಿಕ ಮತದ ದೀಕ್ಷೆಯನ್ನು ಕೊಟ್ಟು, ವಿಶಿಷ್ಟಾದ್ವೈತ ಮತ ರಹಸ್ಯವನ್ನು ಇಂತು ಬೋಧಿಸಿದರು :

"ಭೂಪಾಲ, ಸಕಲ ಕಲ್ಯಾಣ ಗುಣಸಂಪನ್ನನಾದ ಶ್ರೀಮನ್ಮಹಾವಿಷ್ಣುದೇವನ ಲೀಲೆಗಳು ಅನಂತವಾದುವು. ಆತನೇ ಮೋಕ್ಷದಾಯಕ. ಮಾನವ ಜೀವನ ಯಾತ್ರೆಯು ಆ ದೇವನನ್ನು ಸೇರಿಕೊಳ್ಳದೆ ಮುಗಿಯುವುದೇ ಇಲ್ಲ. ಜನರೆಲ್ಲಾ ಆ ದೇವನನ್ನು ಆರಾಧಿಸಿ ಮುಕ್ತಿಯನ್ನು ಸಂಪಾದಿಸಲು ವೈಷ್ಣವಾಲಯಗಳನ್ನು ನಿರ್ಮಿಸಬೇಕು. ನೀವೂ ನಿಮ್ಮ ರಾಜ್ಯದಲ್ಲಿ ಶ್ರೇಷ್ಠವಾದ ಶಿಲ್ಪಕಲಾ ಮಯವಾದ ದೇವಾಲಯಗಳನ್ನು ನಿರ್ಮಿಸಿ. ನಾರಾಯಣ ಪ್ರತಿಷ್ಠೆಗಳನ್ನು ಮಾಡಿ. ದೇಶವನ್ನು ಭೂಲೋಕ ವೈಕುಂಠವನ್ನಾಗಿ ಬದಲಿಸಿ. ವಿಷ್ಣುದೇವನ ಅನುಗ್ರಹಕ್ಕೆ ಪಾತ್ರರಾಗ ಬೇಕೆಂಬುದು ನಮ್ಮ ಇಷ್ಟ. ಇಂದಿನಿಂದ ನೀವು ವಿಷ್ಣುವರ್ಧನರು. ಈ ವಿಷ್ಣುವರ್ಧನ ಎಂಬ ಬಿರುದು ಸೂರ್ಯಚಂದ್ರರು ಇರುವವರೆವಿಗೂ ನಿಮ್ಮನ್ನು ಅಖಂಡ ಕೀರ್ತಿವಂತರನ್ನಾಗಿ ಉಳಿಸುತ್ತದೆ. ವಿಷ್ಣುದೇವನ ಅನುಗ್ರಹವು ನಿಮ್ಮ ಮೇಲೆ ಪೂರ್ಣವಾಗಿ ಪ್ರಸರಿಸಲಿ. ಇನ್ನು ನಾವು ಬರುತ್ತೇವೆ" ಎಂದು ಶಿಷ್ಯರೊಂದಿಗೆ ರಾಮಾನುಜಾಚಾರ್ಯರು ಮತ ಪ್ರಚಾರಕ್ಕಾಗಿ ಹೊರಟರು.

ಇದೆಲ್ಲಾ ಕೀರ್ತಿಮತಿಗೆ ಸ್ವಲ್ಪವೂ ಇಷ್ಟವೇ ಆಗಲಿಲ್ಲ. ಆಕೆ ಬಯಸಿದ್ದೇ ಬೇರೆ. ಈಗ ಆದದ್ದೇ ಬೇರೆ. ಆಕೆಯ ಕುಬುದ್ಧಿಯನ್ನು ಬಳಸಿಕೊಂಡು ವೈದಿಕ ಮತದವರು ತಮ್ಮ ಗುರಿಯನ್ನು ಸಾಧಿಸಿಕೊಂಡಿದ್ದರು ! ಈಗ ಚಿಂತಿಸಿದಂತೆಲ್ಲಾ ಜಕ್ಕಣಾಚಾರ್ಯರ ಮಾರ್ಗ, ಆಚರಣೆ, ಬೋಧನೆಗಳು ಕೀರ್ತಿಮತಿಗೆ ಬಹು ಚೆನ್ನಾಗಿವೆ ಎನಿಸುತ್ತಿದ್ದವು. ಆತನು ನಿಜವಾಗಿಯೂ ಈ ಸಾಮ್ರಾಜ್ಯಕ್ಕೆ ಮೂಲಸ್ತಂಭ ಪ್ರಾಯನು ಎಂದು ಈಗ ಆಕೆ ಭಾವಿಸ ತೊಡಗಿದಳು.

# ೧೩

ಭಾರತದಲ್ಲಿಯ ನಗರ, ಪುರ, ಗ್ರಾಮ ಕ್ಷೇತ್ರಗಳ ಇತಿಹಾಸವೇ ಬಹು ವಿಚಿತ್ರ. ಒಂದು ಕ್ಷೇತ್ರದ, ನಗರದ, ಹಿನ್ನೆಲೆಯನ್ನು ಪರೀಕ್ಷಿಸಿದರೆ, ಅವುಗಳಿಗೆ ಸಂಬಂಧಿಸಿದ ಇತಿಹಾಸವನ್ನು ಸಂಗ್ರಹಿಸಿದಾಗ ನಮಗೇ ಆಶ್ಚರ್ಯವಾಗುತ್ತದೆ. ಇಂತಹ ಅದ್ಭುತ ಇತಿಹಾಸಗಳುಳ್ಳ ಕ್ಷೇತ್ರಗಳಲ್ಲಿ ತಿರುಪತಿಯೂ ಒಂದು. ಅತ್ಯಂತ ಪೂರ್ವಕಾಲದಲ್ಲಿ ತಿರುಪತಿಯು ಪ್ರಸ್ತುತ ಕಪಿಲ ತೀರ್ಥ ಇರುವ ಕಡೆ ಇತ್ತು. ಅಲ್ಲಿ ಹಾವುಗಳು ಬಹು ವಿಶೇಷವಾಗಿರುತ್ತಿದ್ದುವಂತೆ. ನಿತ್ಯವೂ ಎಂಟು ಹತ್ತು ಮಂದಿಯಾದರೂ ಹಾವುಗಳಿಂದ ಕಚ್ಚಲ್ಪಡುತ್ತಿದ್ದರಂತೆ. ಆ ಬೆಟ್ಟದ ಮೇಲೆ ಮಲ್ಲಯ್ಯಾಚಾರ್ಯರೆಂಬುವರು ತಪಸ್ಸು ಮಾಡಿಕೊಂಡು ಅಲ್ಲೇ ಇದ್ದರಂತೆ. ಮಹಾ ಮಂತ್ರಜ್ಞರಾದ ಇವರು ನಿತ್ಯವೂ ಹೀಗೆ ಹಾವಿನಿಂದ ಕಚ್ಚಲ್ಪಟ್ಟವರಿಗೆ ಮಂತ್ರೋಪಚಾರ ನಡೆಸಿ ಬದುಕಿಸುತ್ತಿದ್ದರಂತೆ. ಸಮಾಧಿಯಲ್ಲಿದ್ದಾಗ ಅವರು ಹೊರಗಿನಿಂದ ಬಂದವರನ್ನು ಗಮನಿಸುವುದರಲ್ಲಿ ತಡವಾಗುತ್ತಿತ್ತು. ಆಗ ಕೆಲವರು ಸಾಯುತ್ತಿದ್ದರು. ಒಟ್ಟಿನಲ್ಲಿ ನಿತ್ಯವೂ ಒಬ್ಬಿಬ್ಬರು ಹಾವುಗಳಿಗೆ ಬಲಿಯಾಗುತ್ತಿದ್ದರು. ಇದರಿಂದ ಆ ಗ್ರಾಮದ ಜನಸಂಖ್ಯೆ ದಿನೇದಿನೇ ಇಳಿಮುಖವಾಗುತ್ತಿತ್ತು.

ಈ ವಿಪತ್ತಿನಿಂದ ಪಾರಾಗಲು ಆ ಗ್ರಾಮದ ಹಿರಿಯರು ಕೆಲವರು ಯೋಚಿಸಿದರು. ಕೊನೆಗೆ ಅವರೆಲ್ಲಾ ಒಟ್ಟಾಗಿ ಬಂದು "ಈ ಊರಿಗೆ ನಾಗನ ಬಾಧೆ ಇಲ್ಲದಂತೆ ಮಾಡಿ" ಎಂದು ಮಲ್ಲಯ್ಯಾಚಾರ್ಯರನ್ನು ಪ್ರಾರ್ಥಿಸಿದರು.

ಮಲ್ಲಯ್ಯಾಚಾರ್ಯ ಯೋಗದೃಷ್ಟಿಯಿಂದ ಪರಿಶೀಲಿಸಿದ. ವಾಸ್ತುವಿನ ಅಂಶಗಳನ್ನು ಪರಿಶೀಲಿಸಿದ. ಬಹುಹೊತ್ತು ಯೋಚಿಸಿದ ನಂತರ ನಂತರ ಒಂದು ನಿರ್ಧಾರಕ್ಕೆ ಬಂದು, ತಿರುಪತಿಯನ್ನು ಆ ಸ್ಥಳದಿಂದ ಇತ್ತಕಡೆಗೆ ಸರಿಸಿ ಮತ್ತೆ ಗ್ರಾಮವನ್ನು ನಿರ್ಮಿಸಿ ಸ್ಥಾಪಿಸಿದರು. ಹಾಗೆ ಮಾಡುವಾಗ ಆ ಗ್ರಾಮವನ್ನು ಗರುಡಾಕಾರದಲ್ಲಿ ರಚಿಸಿದರು. ಊರಿನ ಮಧ್ಯೆ ಗರ್ಭಶಿಲೆಯನ್ನು ಪ್ರತಿಷ್ಠಾಪಿಸಿದಾಗಲೂ ಮಹಾಗಾರುಡ ಯಂತ್ರವನ್ನು ಸ್ಥಾಪಿಸಿದರು. ಇಪ್ಪತ್ತೊಂದು ದಿನಗಳ ಕಾಲ ಗಾರುಡಮಂತ್ರ ಜಪವನ್ನು ಮಾಡಿ ಆ ಗ್ರಾಮಕ್ಕೆ ಸರ್ಪದ ಬಾಧೆಯೇ ಇಲ್ಲದಂತೆ ಮಾಡಿದರು. ಆ ಯಂತ್ರ ಬಲದಿಂದ, ಮಂತ್ರಸಾಧನೆ ಮತ್ತು ಮಲ್ಲಯಾಚಾರ್ಯರ ತಪಃಶ್ಶಕ್ತಿ ಪ್ರಭಾವದಿಂದ ಅಂದಿನಿಂದ ತಿರುಪತಿಯು ಸಕಲ ಸೌಭಾಗ್ಯಗಳಿಂದ ಶೋಭಾಯಮಾನವಾಗಿ ಪ್ರವರ್ಧಮಾನಕ್ಕೆ ಬರುತ್ತಿದೆ.

ಆ ಗ್ರಾಮಸ್ಥರಿಗೆ ಯಾವುದೇ ರೀತಿಯ ಭೂತ, ಪ್ರೇತ, ಪಿಶಾಚಾದಿಗಳ ಉಪಟಳ ವಿರಬಾರದೆಂದು ತಾನೇ ಆಂಜನೇಯ ಮೂರ್ತಿಯನ್ನು ಕಂಡರಿಸಿ ಪ್ರತಿಷ್ಠೆ ನಡೆಸಿದ. ಅವರು ನಿತ್ಯವೂ ಸ್ನಾನ ಮಾಡುತ್ತಿದ್ದ ಕುಂಟೆಯನ್ನು ಇಂದೂ ಜನರು **ಮಲ್ಲಯಾಚಾರ್ಯರ ಕುಂಟೆ** ಎಂದೇ

ಗುರ್ತಿಸುತ್ತಾರೆ. ಈ ಕುಂಟೆಗೆ ಹತ್ತಿರವಾಗಿಯೇ ಗ್ರಾಮದೇವತೆಯಾದ ಗಂಗಮ್ಮನ ಗುಡಿ ಇದೆ. ಗ್ರಾಮದೇವತೆಯನ್ನೂ ಮಲ್ಲಯ್ಯಾಚಾರ್ಯರೇ ಪ್ರತಿಷ್ಠಿಸಿದ್ದಾರೆ. ಈ ಗಂಗಮ್ಮನ ಜಾತ್ರೆಯನ್ನು ವರ್ಷಕ್ಕೊಮ್ಮೆ ವಿಶ್ವಬ್ರಾಹ್ಮಣರ ಪ್ರಧಾನ ನೇತೃತ್ವದಲ್ಲಿ ಇಂದೂ ನಡೆಸಲಾಗುತ್ತಿದೆ. ಮಲ್ಲಯಾಚಾರ್ಯರು ಕಾಳಿಕಾದೇವಾಲಯವನ್ನೂ ನಿರ್ಮಿಸಿದರು ಎಂದು ಹೇಳುತ್ತಾರೆ. ಅವರೇ ತಿರುಪತಿಯಲ್ಲಿ ಈಗ ಇರುವ ಪಾರ್ಥಸಾರಥಿ ದೇವಾಲಯಕ್ಕೆ ಶಂಕುಸ್ಥಾಪನೆಯನ್ನು ನೆರವೇರಿಸಿದರಂತೆ. ಆದರೆ ದೇವಾಲಯವು ಪೂರ್ಣವಾಗುವುದಕ್ಕೂ ಮೊದಲೇ ಸಿದ್ಧಿಯನ್ನು ಹೊಂದಿದರಂತೆ.

ಭಾರತದ ಶಿಲ್ಪ ಚರಿತ್ರೆಯಲ್ಲಿ ಜಕ್ಕಣಾಚಾರ್ಯನದೇ ಪ್ರತ್ಯೇಕ ಪ್ರಕರಣವಾಗಿರುವಂತೆ, ವೈಷ್ಣವ ಮತದ ಚರಿತ್ರೆಯಲ್ಲಿ ರಾಮಾನುಜಾಚಾರ್ಯರದೇ ಒಂದು ವಿಶೇಷ ಪ್ರಕರಣ. ಅವರು ದ್ವಾರಸಮುದ್ರದಲ್ಲಿ ಮಹಾರಾಜ ವೀರಬಲ್ಲಾಳರನ್ನು ಶ್ರೀ ವೈಷ್ಣವರನ್ನಾಗಿ ಪರಿವರ್ತಿಸಿದ ನಂತರ ಕರ್ನಾಟಕದಲ್ಲಿ ತಮ್ಮ ಮತವನ್ನು ವ್ಯಾಪಕಗೊಳಿಸಿ, ಆಂಧ್ರದೇಶದಲ್ಲಿ ತಮ್ಮ ಅಡಿಯನ್ನು ಇರಿಸಿದ್ದರು. ದೇಶದ ಮೂಲೆಮೂಲೆಗಳಿಗೂ ಹೋಗಿ ಅಲ್ಲಿದ್ದ ವೈಷ್ಣವ ಆಲಯಗಳಿಗೆಲ್ಲಾ ಸಂಸ್ಕಾರವನ್ನು ಒದಗಿಸಿದರು. ಈ ರೀತಿಯ ಸಂದರ್ಭದಲ್ಲಿ ಹಲವಾರು ಶಾಕ್ತ, ಶೈವ ಆಲಯಗಳನ್ನು ಅಲ್ಲಿಯ ತಮ್ಮ ಶಿಷ್ಯರ ಬಲ-ಸಹಕಾರಗಳನ್ನು ಪಡೆದುಕೊಂಡು ವೈಷ್ಣವಾಲಯಗಳನ್ನಾಗಿ ಪರಿವರ್ತಿಸಿದರು. ಕೇವಲ ದಕ್ಷಿಣಾಪಥದವರ ದೃಷ್ಟಿಯನ್ನು ಮಾತ್ರವೇ ಅಲ್ಲ, ಉತ್ತರದವರ ದೃಷ್ಟಿಯನ್ನೂ ತನ್ನ ಕಡೆಗೆ ಸೆಳೆದುಕೊಳ್ಳಲು ಸಮರ್ಥವಾಗಿರುವ ತಿರುಪತಿ ದೇವಸ್ಥಾನವು ರಾಮಾನುಜಾಚಾರ್ಯರಿಂದ ಶ್ರೀ ವೈಷ್ಣವ ಸಂಸ್ಕಾರವನ್ನು ಪಡೆದುಕೊಳ್ಳುತ್ತಿದ್ದ ದಿನಗಳು ಅವು.

ತಿರುಮಲೆಯ ಬೆಟ್ಟದ ಮೇಲಿರುವ ವೆಂಕಟೇಶ್ವರ ಸ್ವಾಮಿಯ ಬಗ್ಗೆ ಹಲವು ಮತದವರು ಹಲವು ಬಗೆಗಳಲ್ಲಿ ಹೇಳಿಕೊಳ್ಳುತ್ತಾರೆ. ಜೈನರು ಈ ದೇವನು ತಮ್ಮ ಆರಾಧನಾಮೂರ್ತಿಯಾದ ಧರಣೇಂದ್ರಮೂರ್ತಿ ಎಂದು, ಆ ದೇವನ ಹೆಂಡತಿಯು ಪದ್ಮಾವತಿ ದೇವಿ ಎಂದು ಹೇಳುತ್ತಾರೆ. ಬೌದ್ಧರು ಬೋಧಿಸತ್ವನ ಮೂರ್ತಿಗಳಲ್ಲಿ ಇದು ಒಂದು ಎಂದು ಹೇಳುತ್ತಾರೆ. ಇದಕ್ಕೆ ಅವರು ಸಿಂಹಳ ದೇಶದ ಬೌದ್ಧ ಗ್ರಂಥಗಳಲ್ಲಿ ಆಧಾರಗಳನ್ನು ಒದಗಿಸುತ್ತಾರೆ. ಕೆಲವರು ಶೈವರು ಅದು ಸುಬ್ರಹ್ಮಣ್ಯಸ್ವಾಮಿ ಎಂದು, ಇನ್ನು ಕೆಲವರು ಅದು ದೇವೀ ಮೂರ್ತಿಯೆಂದು ಹೇಳುತ್ತಾರೆ. ಇದಕ್ಕೆ ಅವರು ನೀಡುವ ಕಾರಣಗಳು ಶುಕ್ರವಾರದಂದು ವಿಶೇಷ ಅಭಿಷೇಕವನ್ನು, ಬಿಲ್ವಾರ್ಚನೆಯನ್ನು ದೃಷ್ಟಾಂತವಾಗಿ ತೋರುತ್ತಾರೆ. ಈ ಮೂರ್ತಿಗೆ ಹಿಂದೆ ಜಡೆ ಇದೆ ಎಂದು ಹೇಳುತ್ತಾರೆ. ಜಡೆಯ ವಿಷಯ ಏನಾದರೂ ಆಗಲಿ ತೋಳುಗಳಲ್ಲಿ ನಾಗಬಂಧ ಇರುವುದು ಮಾತ್ರ ನಿಜ. ಪ್ರಾಚೀನನಾದ ಆಳ್ವಾರರೊಬ್ಬರು 'ನೀನು ಶಿವನೋ ಕೇಶವನೋ ಗೊತ್ತಿಲ್ಲ' ಎಂದು ತನ್ನ ಪ್ರಾರ್ಥನೆಯಲ್ಲಿ ಹೇಳುತ್ತಾನೆ. ಈ ಅಂಶಗಳು ವೆಂಕಟೇಶ್ವರ ಸ್ವಾಮಿಯು ಮೊದಲಿಗೆ ಶಿವನಾಗಿರಬಹುದು ಎಂಬ ಅನುಮಾನಕ್ಕೆ ಬಲನೀಡುತ್ತವೆ.

ಒಟ್ಟಿನಲ್ಲಿ ರಾಮಾನುಜಾಚಾರ್ಯರ ಕಾಲಕ್ಕೆ ಜೈನ-ಬೌದ್ಧಮತಗಳ ಕಾದಾಟ ಹಿಂದಕ್ಕೆ ಸರಿದು ಶೈವ ಮತವೇ ಪ್ರಬಲವಾಗಿತ್ತು. ಶೈವರೊಂದಿಗೆ ರಾಮಾನುಜಾಚಾರ್ಯರು ತೀವ್ರವಾಗಿ ವಾದ ನಡೆಸಬೇಕಾಗಿತ್ತು. ರಾಮಾನುಜಾಚಾರ್ಯರು ತಿರುಮಲೇಶನು ವಿಷ್ಣುವೆಂದು ಎಷ್ಟು ಶಾಸ್ತ್ರಾಧಾರಗಳನ್ನು

ಕೋರಿದರೂ ಶೈವರು ಒಪ್ಪಲಿಲ್ಲವಂತೆ. ಜಗಳವು ಹಲವು ದಿನಗಳ ಕಾಲ ನಡೆದ ನಂತರ ಇಬ್ಬರೂ ಒಂದು ತೀರ್ಮಾನಕ್ಕೆ ಬಂದರಂತೆ. ಶಿವ-ವಿಷ್ಣು ಇಬ್ಬರ ಆಯುಧಗಳನ್ನೂ ಗರ್ಭಗುಡಿಯಲ್ಲಿರಿಸಿ ಬೀಗ ಹಾಕಿಕೊಂಡು ಬಂದು ಬೆಳಿಗ್ಗೆ ದೇವರು ಯಾವ ಆಯುಧಗಳನ್ನು ಸ್ವೀಕರಿಸಿದ್ದರೆ ಅದರ ಅನುಸಾರ ಆಲಯವನ್ನು ಅವರಿಗೆ ವಹಿಸಿಕೊಡುವುದು ವೆಂದು ಒಪ್ಪಿಕೊಂಡು ಅದೇರೀತಿ ಮಾಡಿದರು. ಆ ರಾತ್ರಿಯೆಲ್ಲಾ ರಾಮಾನುಜಾಚಾರ್ಯರು ವಿಷ್ಣುವನ್ನು ಬಹುವಾಗಿ ಪ್ರಾರ್ಥಿಸಿದರಂತೆ. ಬೆಳಿಗ್ಗೆ ದೇವನು ಶಂಖ ಚಕ್ರಧಾರಿಯಾಗಿ ಕಾಣಿಸಿಕೊಂಡನಂತೆ. ಶೈವರು ಮೌನವಾಗಿ ಹಿಂತಿರುಗಿದರು. ಅಂದಿನಿಂದ ತಿರುಮಲೇಶನನ್ನು ವೆಂಕಟೇಶ್ವರನೆಂದು ಕರೆಯುತ್ತಿದ್ದಾರೆ ಎಂದು ಹೇಳುತ್ತಾರೆ.

ಏನಾದರೂ ಇರಲಿ ಭಿನ್ನಮತಸ್ಥರ ವಿವಿಧಾಭಿಪ್ರಾಯಗಳಿಗೆ ಅವಕಾಶವೇ ಇಲ್ಲದೆ ರಾಮಾನುಜಾಚಾರ್ಯರು ಅಂದು ವೆಂಕಟೇಶ್ವರ ಸ್ವಾಮಿಯಾಗಿ ಸಂಸ್ಕರಿಸಲು ತೀರ್ಮಾನಿಸಿ ಅದನ್ನು ಸ್ಥಿರಗೊಳಿಸುವ ಪ್ರಯತ್ನದಲ್ಲಿದ್ದರು. ಅಂತರಂಗವೆನಿಸಲ್ಪಡುವ ಅನೇಕ ಸಂಸ್ಕಾರಗಳೊಂದಿಗೆ ದೇವಾಲಯದ ಬಹಿರಂಗ ಭಾಗಗಳನ್ನೂ, ಮೂರ್ತಿಗಳನ್ನೂ ಪುನರ್ನಿರ್ಮಾಣಗೊಳಿಸಲು ಹಲವಾರು ಸಂಸ್ಕಾರಗಳನ್ನು ಮಾಡಬೇಕಾಗಿತ್ತು. ಅವೆಲ್ಲವೂ ನಡೆಯುತ್ತಿದ್ದ ಸಂದರ್ಭ. ಈ ಎರಡೂ ಸಂಸ್ಕಾರಗಳಿಗೂ ಸಿದ್ಧಹಸ್ತರೂ, ಯಂತ್ರ ನಿರ್ಮಾಣ ಕುಶಲಿಗಳೂ, ತಪಸ್ಸಂಪನ್ನರಾದ ಶಿಲ್ಪಾಚಾರ್ಯರ ನೆರವೂ ಬಹು ಅವಶ್ಯಕವಾಗಿ ಬೇಕಾಗಿತ್ತು.

ರಾಮಾನುಜಾಚಾರ್ಯರು ತಮ್ಮ ವೈಷ್ಣವ ಮತಪ್ರಚಾರಕ್ಕೆ ಶಿಲ್ಪಕಲೆಯನ್ನು ಬಹುದೊಡ್ಡ ಸಾಧನವೆಂದು ಅರಿತಿದ್ದ ತೀಕ್ಷ್ಣಮತಿಗಳಾದುದರಿಂದ ಸಮಕಾಲೀನ ಪ್ರಮುಖ ಶಿಲ್ಪಾಚಾರ್ಯರೊಂದಿಗೆ ಸ್ನೇಹ-ಸಂಪರ್ಕ ಇರಿಸಿಕೊಂಡಿದ್ದರು. ಅಂತಹ ಮಹಾಮಹಿಮರಾದ ಶಿಲ್ಪಾಚಾರ್ಯರು ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲಿ ಬಹುಳವಾಗಿಯೇ ಇದ್ದರು. ಆದ್ದರಿಂದಲೇ ಆಚಾರ್ಯರ ಮತ ಪ್ರಚಾರಕಾರ್ಯವು ನಿರ್ವಿಘ್ನವಾಗಿ ಸಾಗಿತು. ತಿರುಪತಿಯಲ್ಲೂ ಬೊಲ್ಲೋಜ, ನಾಗೋಜ, ಎರ್ರೋಜ, ವಿಶ್ವರೂಪ ಸ್ಥಪತಿಗಳು ರಾಮಾನುಜಾಚಾರ್ಯರಿಗೆ ಬಹುವಾದ ನೆರವು ನೀಡಿದರು.

ಇವರಲ್ಲಿ ವಿಶ್ವರೂಪಸ್ಥಪತಿ ಮಹಾಶಾಸ್ತ್ರವೇತ್ತ. ತಪಸ್ವಿ. ಆತ ಬ್ರಾಹ್ಮೀ ಮುಹೂರ್ತದಲ್ಲಿಯೇ ಎದ್ದು ಸಮಾಧಿಯೋಗದಲ್ಲಿ ಕುಳಿತರೆ ಐದು ಗಳಿಗೆ ಹೊತ್ತೇರಿದರೂ ಎಚ್ಚರಗೊಳ್ಳುತ್ತಿರಲಿಲ್ಲ. ನಂತರ ಒಂದು ಸೊಲಿಗೆ ಹಾಲಿಗೆ ಯಾವುದೋ ಚೂರ್ಣವನ್ನು ಬೆರಸಿ ಅದನ್ನು ಕುಡಿದು ಕೆಲಸವನ್ನು ಪ್ರಾರಂಭಿಸುತ್ತಿದ್ದ. ಸಮಾಧಿಯಲ್ಲಿ ಆತನನ್ನು ನೋಡುವುದಾಗಲಿ, ಎಚ್ಚರಿಸಿ ಮಾತನಾಡಿಸುವುದಾಗಲಿ ನಿಷಿದ್ಧವಾಗಿತ್ತು. ಅತ್ಯಂತ ಮಿತ ಭಾಷಿಯಾಗಿದ್ದ ಶಿಲ್ಪಿಯು ವಾನಪ್ರಸ್ಥದಲ್ಲಿರುವಂತೆ ಗಡ್ಡ, ಮೀಸೆಗಳು ನೀಳವಾಗಿ ಬೆಳಸಿದ್ದ. ಗಡ್ಡ, ತಲೆಗೂದಲು 'ತಿಲ-ತಂಡುಲ' ನ್ಯಾಯವನ್ನು ಪಾಲಿಸುವಂತೆ ಅರೆಕಪ್ಪು, ಅಗೆಬಿಳುಪು ಆಗಿದ್ದವು. ಸ್ವಚ್ಛವಾದ ಬಿಳಿಯ ವಸ್ತ್ರಗಳನ್ನು ಧರಿಸಿ ತೀರಾ ಸಾಧಾರಣ ವ್ಯಕ್ತಿಯಂತೆ ಆತ ಇದ್ದರೂ ಮುಖದ ವರ್ಚಸ್ಸು ಆತನು ಸಾಧಾರಣ ವ್ಯಕ್ತಿಯಲ್ಲ ಎಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತಿತ್ತು. ಆತ ಅನ್ನವನ್ನು ತಿನ್ನುತ್ತಿರಲಿಲ್ಲ. ಹದಿನೈದು ಘಳಿಗೆಗಳವರೆವಿಗೂ ಶಿಲ್ಪಯಜ್ಞವನ್ನು ಮಾಡಿ ನಂತರ ಹಾಲು ಹಣ್ಣು ಸೇವಿಸಿ ನಾಲ್ಕು ಘಳಿಗೆ ವಿಶ್ರಾಂತಿಯ ನಂತರ ಮತ್ತೆ ಶಿಲ್ಪವನ್ನು ಮುಂದುವರಿಸುತ್ತಿದ್ದ. ಸಂಜೆ ಸ್ನಾನವನ್ನು ಮುಗಿಸಿ ಮತ್ತೆ ತನ್ನ ಅನುಷ್ಠಾನಗಳಲ್ಲಿ ಮಗ್ನನಾಗುತ್ತಿದ್ದ. ಇದು ಆ ಶಿಲ್ಪಾಚಾರ್ಯನ ನಿತ್ಯಕೃತ್ಯ.

ಮಲ್ಲಯ್ಯಾಚಾರ್ಯ ಪ್ರಾರಂಭಿಸಿದ ಪಾರ್ಥಸಾರಥಿ ದೇವಾಲಯ ವಿಶ್ವರೂಪಸ್ಥಪತಿಯ ಕೈಯಿಂದ ಮುಗಿಯಿತು. ಯಂತ್ರಾದಿಗಳ ನಿರ್ಮಾಣವನ್ನು ಎರ್ರೋಜುವಿಗೆ ಸ್ಥಪತಿಗಳೇ ವಹಿಸಿದರು. ಶಾಸ್ತ್ರಾನುಸಾರವಾಗಿ ರಾಮಾನುಜಾಚಾರ್ಯರ ನೇತೃತ್ವದಲ್ಲಿ ಪ್ರತಿಷ್ಠಾ ಕಾರ್ಯಕ್ರಮಗಳು ಸಾಂಗವಾಗಿ ಶಾಸ್ತ್ರೋಕ್ತವಾಗಿ ನಡೆದವು.

ರಾಮಾನುಜಾಚಾರ್ಯರು ತಮಿಳು ನಾಡನ್ನು ಬಿಟ್ಟು ಬಂದರೂ, ಅವರು ಹರಡಿಬಂದ ಶ್ರೀ ವೈಷ್ಣವಧರ್ಮ ಮಾತ್ರ ಅಲ್ಲಿ ಅನೇಕ ವಿಪರೀತಗಳಿಗೆ ದಾರಿ ಮಾಡಿಕೊಟ್ಟಿತು. ಶೈವ ಮತಾಭಿಮಾನಿಗಳು ವೈಷ್ಣವಾಲಯಗಳ ಮೇಲೆ ಧಾಳಿಮಾಡಿ ಪ್ರತಿಷ್ಠೆಯಾಗಿದ್ದ ವೈಷ್ಣವ ಮೂರ್ತಿಗಳನ್ನು ಕಿತ್ತು ಸಮುದ್ರದಲ್ಲಿ ಎಸೆಯುವ ತನಕ ಇದು ವ್ಯಾಪಿಸಿತು.

ಈ ರೀತಿಯಲ್ಲಿ ಚಿದಂಬರಂನಲ್ಲಿ ಗೋವಿಂದರಾಜಸ್ವಾಮಿ ವಿಗ್ರಹವನ್ನು ಕೂಡ ಸಮುದ್ರಕ್ಕೆಸೆದರು. ಆಗ ಚಿದಂಬರಂನಲ್ಲಿ ತಿಲ್ಲೈ ಎಂಬ ವೇಶ್ಯೆಯು ವಿಷ್ಣುವಿನ ಪರಮ ಭಕ್ತಳಾಗಿದ್ದಳು. ಆಕೆಗೆ ವಿಷ್ಣುವೆಂದರೆ ಪಂಚಪ್ರಾಣ. ಗೋವಿಂದರಾಜಸ್ವಾಮಿಯ ಉತ್ಸವ ಮೂರ್ತಿಯನ್ನು ಹೊತ್ತುಕೊಂಡು ತಿರುಪತಿಗೆ ಬಂದು ರಾಮಾನುಜಾಚಾರ್ಯರಿಗೆ ಸಮರ್ಪಿಸಿದಳು. ಆ ಮೂರ್ತಿಯನ್ನು ಬಂಗಾರದಲ್ಲಿ ಮಾಡಿಸಲಾಗಿತ್ತು. ತಿಲ್ಲೈ ತಂದುದರಿಂದ ಆ ಸ್ವಾಮಿಯನ್ನು **ತಿಲ್ಲೈ ಗೋವಿಂದರಾಜಸ್ವಾಮಿ** ಎಂದೇ ಇಂದಿಗೂ ಕರೆಯುತ್ತಾರೆ.

ಆ ಮೂರ್ತಿಯನ್ನು ಆಧಾರವಾಗಿರಿಸಿಕೊಂಡು ತಿರುಪತಿಯಲ್ಲಿ ಗೋವಿಂದ ರಾಜಸ್ವಾಮಿಯ ಮೂರ್ತಿಯನ್ನು ಮಾಡಿಸಿ ಪ್ರತಿಷ್ಠಿಸಿದರು. ತಿರುಪತಿಯಲ್ಲಿ ತಿರುಮಲೆಯಲ್ಲಿ ಅನೇಕ ಪ್ರತಿಷ್ಠಾಪನೆಗಳನ್ನು ನಡೆಸಿ ಶ್ರೀ ರಾಮಾನುಜಾಚಾರ್ಯರು ಅದನ್ನು ಮಹಾ ಶ್ರೀವೈಷ್ಣವ ಕ್ಷೇತ್ರವನ್ನಾಗಿ ರೂಪಿಸಿದರು. ಈ ಎಲ್ಲಾ ಕೆಲಸಗಳಲ್ಲೂ ತಿರುಮಲನಂಬಿ, ವಿಶ್ವರೂಪಸ್ಥಪತಿಗಳ ನೆರವು ಬಹುವಾಗಿ ಲಭಿಸಿತ್ತು.

ತಿರುಮಲನಂಬಿ ರಾಮಾನುಜಾಚಾರ್ಯರ ಸೋದರಮಾವ. ಈತ ಬೆಟ್ಟದ ಮೇಲಿದ್ದು ನಿತ್ಯವೂ ಇಳಿದುಬರುತ್ತಿದ್ದ. ರಾಮಾನುಜಾಚಾರ್ಯರು ನಿತ್ಯವೂ ಬೆಟ್ಟವನ್ನು ಹತ್ತಿ ಹೋಗುತ್ತಿದ್ದರು. ಇಬ್ಬರೂ ಮಾರ್ಗಮಧ್ಯದಲ್ಲಿ ಭೇಟಿಯಾಗಿ ನಿತ್ಯದ ಕೆಲಸಗಳನ್ನೆಲ್ಲಾ ಅಲ್ಲಿಯೇ ತೀರ್ಮಾನಿಸುತ್ತಿದ್ದರು. ಇಬ್ಬರಲ್ಲೂ ಬಹುಗಾಢವಾದ ಸ್ನೇಹವಿತ್ತು. ಪರಸ್ಪರ ವಿಚಾರ ವಿನಿಮಯವಿಲ್ಲದೆ ಇವರು ಯಾವ ಕೆಲಸವನ್ನೂ ಮಾಡುತ್ತಲೇ ಇರಲಿಲ್ಲ.

ಅಂದು ರಾಮಾನುಜಾಚಾರ್ಯರು, ತಿರುಮಲನಂಬಿ ದ್ವಾರಸಮುದ್ರದಿಂದ ಬಂದಿದ್ದ ದೇವೋಜ ಶಿಲ್ಪಾಚಾರ್ಯ ಮೂವರೂ ದೇವಾಲಯದ ಪಕ್ಕದಲ್ಲಿದ್ದ ಮಂಟಪದಲ್ಲಿ ಸಮಾವೇಶವಾಗಿದ್ದರು. ಈ ಮೊದಲೇ ರಾಮಾನುಜಾಚಾರ್ಯರ ಪರಿಚಯವನ್ನು ಪಡೆದಿದ್ದ ದೇವೋಜ ಶಿಲ್ಪಾಚಾರ್ಯ ಅವರ ಮೂಲಕ ವಿಶ್ವರೂಪ ಸ್ಥಪತಿಯ ಪರಿಚಯ ಮಾಡಿಕೊಳ್ಳ ಬೇಕೆಂದು ಕಾಯುತ್ತಿದ್ದ. ತಪೋ ಮಂದಿರದಿಂದ ಆಗತಾನೇ ಬರುತ್ತಿದ್ದ ವಿಶ್ವರೂಪ ಸ್ಥಪತಿಯನ್ನು ಕಂಡ ದೇವೋಜ ಚಕಿತನಾದ. ಆತನ ಮುಖ ಮಂಡಲದ ಅಪೂರ್ವ ವರ್ಚಸ್ಸು ಸನಾತನ ಶಿಲ್ಪರ್ಷಿಗಳನ್ನು ನೆನಪು ಮಾಡಿಕೊಡುವಂತಿತ್ತು. 'ಧನ್ಯೋಸ್ಮಿ' ಎಂದುಕೊಂಡು ಆ ಸ್ಥಪತೀಶ್ವರನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದ. ನಂತರ ಇಂತು ಅರಿಕೆ ಮಾಡಿಕೊಂಡ :

"ಮಹಾನುಭಾವರಾದ ತಮ್ಮ ದರ್ಶನದಿಂದಲೇ ನಾನು ಕೃತಾರ್ಥನಾಗಿದ್ದೇನೆ. ತಮಗೆ ತೊಂದರೆಯೆನಿಸದಿದ್ದರೆ ಕೆಲವು ಅಂಶಗಳನ್ನು ತಮ್ಮಲ್ಲಿ ಚರ್ಚಿಸಬೇಕೆಂದಿದ್ದೇನೆ"

ದೇವೋಜನನ್ನು ದಿಟ್ಟಿಸಿನೋಡಿ "ನೀವು ಯಾರೆಂಬುದೇ ನನಗೆ ಗೊತ್ತಿಲ್ಲ..." ಎಂದ ವಿಶ್ವರೂಪ ಸ್ಥಪತಿ.

ರಾಮಾನುಜಾಚಾರ್ಯರು ಮಧ್ಯೆ ಪ್ರವೇಶಿಸಿ "ಹೊಯ್ಸಳ ವಿಷ್ಣುವರ್ಧನರ ಆಸ್ಥಾನ ಶಿಲ್ಪಿಗಳಲ್ಲಿ ಒಬ್ಬರಾಗಿರುವ ದೇವೋಜ ಶಿಲ್ಪಾಚಾರ್ಯರು. ಮಹಾರಾಜರ ಅಪ್ಪಣೆಯ ಮೇರೆಗೆ ಕಾರ್ಯಾರ್ಥಿಗಳಾಗಿ ಇಲ್ಲಿಗೆ ಬಂದಿದ್ದಾರೆ. ನಾವು ದ್ವಾರಸಮುದ್ರದಲ್ಲಿದ್ದಾಗ ಇವರ ಪರಿಚಯ ಪ್ರಾಪ್ತವಾಯಿತು. ದಕ್ಷಿಣಾಪಥ ಶಿಲ್ಪಿ ಚಕ್ರವರ್ತಿ ಎಂದು ಪ್ರಖ್ಯಾತವಾಗಿರುವ ಜಕ್ಕಣಾಚಾರ್ಯರ ಪ್ರೀತಿಯ ಶಿಷ್ಯರು." ಎಂದು ದೇವೋಜನ ಪರಿಚಯವನ್ನು ಮಾಡಿಸಿದರು.

ವಿಶ್ವರೂಪ ಸ್ಥಪತಿಯು ನಮಸ್ಕರಿಸಿ "ನೀವೇನು ಕೇಳಬೇಕೆಂದಿದ್ದೀರಿ ?" ಎಂದು ಕೇಳಿದ.

"ತಮ್ಮ ಜನ್ಮ ಸ್ಥಳ. ತಾವು ನಿರ್ಮಿಸಿರುವ ದೇವಾಲಯಗಳು, ತಮ್ಮ ಶಿಷ್ಯಸಂತಾನ ಇವುಗಳ ಬಗ್ಗೆ ತಿಳಿಯಬೇಕೆನಿಸಿದೆ..." ಎಂದ ದೇವೋಜ ಬಹು ವಿನಯನಾಗಿ.

"ನಾನು ಕೋಣಾರ್ಕದಿಂದ ಇಲ್ಲಿಗೆ ಬಂದಿದ್ದೇನೆ. ಉತ್ಕಳ, ಪೂರಿ, ಕೋಣಾರ್ಕ, ಭುವನೇಶ್ವರಗಳಿಂದ ಪ್ರಾರಂಭಿಸಿ ಆಂಧ್ರದ ಸಿಂಹಾಚಲ, ಅಲಂಪುರ, ಮಾಚರ್ಲ ಮುಂತಾದ ಕ್ಷೇತ್ರಗಳ ಸಂಪರ್ಕ ನನಗಿದೆ"

"ಎಂದರೆ ಈ ಶಿಲ್ಪ ಕಲಾಕ್ಷೇತ್ರಗಳಲ್ಲಿಯ ಶಿಲ್ಪಗಳು ತಮ್ಮ ನಿರ್ಮಾಣವೆಂದು ಭಾವಿಸಬಹುದೇ ?" ಎಂದ ದೇವೋಜ.

"ಅಲ್ಲ... ಕೆಲವು ಕಡೆ ಮಾತ್ರ ನಾನು ಸ್ವಲ್ಪ ಕೆಲಸ ಮಾಡಿದ್ದೇನೆ. ಕೆಲವು ಕಡೆ ಕೆಲವು ಸೂಚನೆಗಳನ್ನು, ನೆರವನ್ನು ಕೊಟ್ಟಿರಬಹುದು. ಅಷ್ಟೇ ಹೊರತು ನಾನೇ ಎಲ್ಲಾ ಪೂರ್ಣವಾಗಿ ಮಾಡಿದ್ದೇನೆ, ಅವುಗಳ ನಿರ್ಮಾಪಕ ನಾನೇ ಎಂದು ಹೇಳುವುದು ಸಾಧ್ಯವಿಲ್ಲ. ಉತ್ಕಳ, ಆಂಧ್ರದ ಅನೇಕ ಶಿಲ್ಪಿಗಳು ಸೇರಿ ಅವನ್ನೆಲ್ಲಾ ನಿರ್ಮಿಸಿದ್ದಾರೆ..." ಎಂದ ವಿಶ್ವರೂಪ ಸ್ಥಪತಿ.

ರಾಮಾನುಜಾಚಾರ್ಯರು "ದೇವೋಜ ಶಿಲ್ಪಾಚಾರ್ಯ, ಇವರು ಪ್ರಧಾನ ಸೂತ್ರಧಾರಿಗಳಾಗಿ ನಿರ್ಮಿಸಿರುವ ದೇವಾಲಯಗಳು ಅಗಣಿತ. ಇವರು ಸರ್ವಜ್ಞರೆಂದು, ನಮ್ಮ ಜಕ್ಕಣಾಚಾರ್ಯರಿಗೆ ಸರಿಸಮರೆಂದು ನಾನು ಕೇಳಿ ಇವರ ಸಹಾಯವನ್ನು ಕೋರಿದೆ." ಎಂದು ವಿವರಣೆ ನೀಡಿದರು.

"ತಾವು ಈ ಮೊದಲು ಆಂಧ್ರ, ಉತ್ಕಳ ಶಿಲ್ಪಗಳೆಂದು ಹೆಸರಿಸಿದಿರಿ. ತಾವು ಯಾವ ರಾಜ್ಯಕ್ಕೆ ಸೇರಿದ್ದೀರಿ ಎಂದು ಕೇಳಬಹುದೇ ?" ಎಂದು ಕೇಳಿದ ದೇವೋಜ.

"ನಾನು ಕರ್ನಾಟಕದವನು. ನಮ್ಮದೂ ಹೊಯ್ಸಳ ರಾಜ್ಯವೇ"

"ಹಾಗಿದ್ದರೆ ತಮ್ಮ ಗುರುಗಳು ಯಾರೆಂಬುದು ಹೇಳಬಹುದೇ ?" ಎಂದು ಮತ್ತೆ ಕೆದಕಿದ ದೇವೋಜ.

"ನಾಗಲಿಂಗ ಸ್ಥಪತಿಗಳು. ನಿಮ್ಮ ಗುರುಗಳಾದ ಜಕ್ಕಣಾಚಾರ್ಯ ನಾನು ಸಹಾಧ್ಯಾಯಿಗಳು. ನಮಗೆ ಸಕಲ ವಿದ್ಯೆಗಳನ್ನು, ಶಾಸ್ತ್ರಗಳನ್ನು ಪರಮಪೂಜ್ಯರಾದ ನಾಗಲಿಂಗ ಸ್ಥಪತಿಗಳೇ ಕಲಿಸಿದರು" ಎಂದು ವಿಶ್ವರೂಪ ಸ್ಥಪತಿಹೇಳಿದ.

"ಈಗ ತಾವು ನನಗೆ ಗುರು ಸಮಾನರು ಮಾತ್ರವೇ ಅಲ್ಲ. ನನಗೆ ಪಿತೃಸಮಾನರೂ ಆಗಿದ್ದೀರಿ. ಕರ್ನಾಟಕವನ್ನು ತಾವು ಬಿಟ್ಟಿದ್ದು ಯಾವಾಗ ?" ಎಂದು ಮತ್ತೆ ಪ್ರಶ್ನೆ ಮುಂದುವರಿಸಿದ.

"ವಿದ್ಯಾಭ್ಯಾಸ ಮುಗಿಯುತ್ತಲೇ ಉತ್ಕಳ, ಆಂಧ್ರಗಳಲ್ಲಿ ಕಲಾಸೇವೆ ಸಲ್ಲಿಸುತ್ತಾ ಕಾಲಕ್ಷೇಪವನ್ನು ಮಾಡುತ್ತಿದ್ದೇನೆ" ಎಂದ ವಿಶ್ವರೂಪ ಸ್ಥಪತಿ.

"ನಮ್ಮ ಗುರುಗಳಾದ ಜಕ್ಕಣಾಚಾರ್ಯ ತಮಗೆ ಎಲ್ಲಿಯಾದರೂ ಕಾಣಿಸಿದ್ದರೇ?" ಎಂದ ದೇವೋಜ.

"ಇಲ್ಲ, ಬಾಲ್ಯದಿಂದಲೂ ಆತ ವೈರಾಗ್ಯದತ್ತಲೇ ಒಲವು ತೋರುತ್ತಿದ್ದ. ಅದೇ ವೈರಾಗ್ಯವೇ ನನಗೂ ಸ್ವಲ್ಪ ಮೆತ್ತಿಕೊಂಡಿದೆ. ನಿಮ್ಮ ಆಚಾರ್ಯರ ವೃತ್ತಾಂತವನ್ನು ರಾಮಾನುಜಾಚಾರ್ಯರಿಂದ ಕೇಳಿದ್ದೇನೆ. ಆ ವಿವರಗಳನ್ನು ವೀರ ಬಲ್ಲಾಳರೇ ಸ್ವಾಮಿಗಳಿಗೆ ಹೇಳಿದರಂತೆ" ಎಂದ ವಿಶ್ವರೂಪ ಸ್ಥಪತಿ.

"ನಾನು ಈಗ ಬಂದಿರುವುದು ವಿಷ್ಣುವರ್ಧನ ಮಹಾರಾಜರ ಅಪ್ಪಣೆಯ ಮೇರೆಗೇ. ಅವರು ಈ ಹೊಯ್ಸಳ ರಾಜ್ಯದ ನಾಲ್ಕು ದಿಕ್ಕುಗಳಲ್ಲೂ ಅದ್ಭುತ ಕಲಾಪೂರ್ಣ ವೈಷ್ಣವ ದೇವಾಲಯಗಳನ್ನು ನಿರ್ಮಿಸಬೇಕೆಂದು ತೀರ್ಮಾನಿಸಿ ದೀಕ್ಷಾ ಬದ್ಧರಾಗಿದ್ದಾರೆ. ಈ ದೀಕ್ಷೆಯನ್ನು ಕೊಟ್ಟಿರುವವರು ಕೂಡ ಶ್ರೀ ರಾಮಾನುಜಾಚಾರ್ಯರೇ. ಅದಕ್ಕೆ ಸೂಕ್ತರಾದ ಪ್ರಧಾನ ಸ್ಥಪತಿ ಬೇಕಾಗಿದೆ. ಆ ಪದವಿಗೆ ತಾವು ಅರ್ಹರೆಂದು ನನ್ನ ಉದ್ದೇಶ. ಈ ಕಲಾಸೇವೆಯನ್ನು ನಡೆಸಿಕೊಡಲು ತಾವು ಅಂಗೀಕರಿಸಬೇಕೆಂದು ಪ್ರಾರ್ಥಿಸುತ್ತೇನೆ. ಶ್ರೀ ರಾಮಾನುಜಾಚಾರ್ಯರೂ ನಮ್ಮ ಮಹಾರಾಜರ ಸಂಕಲ್ಪವು ಯಶಸ್ವಿಯಾಗಲು ಆಶೀರ್ವದಿಸುತ್ತಾರೆ ಎಂದು ನಾವೆಲ್ಲಾ ನಂಬಿದ್ದೇವೆ" ದೇವೋಜ ಈಗ ತನ್ನ ಇದುವರೆವಿಗಿನ ಮಾತುಗಳ ಹಿಂದೆ ಅಡಗಿದ್ದ ಮೂಲ ಉದ್ದೇಶ್ಯವನ್ನು ಹೊರಗಿರಿಸಿದ.

"ಸಾಧ್ಯವಿಲ್ಲ... ಸಾಧ್ಯವಿಲ್ಲ.... ಪ್ರಧಾನ ಸ್ಥಪತಿಯ ಸ್ಥಾನ ಸುಲಭವಾದುದಲ್ಲ. ಬಹು ಭಾರವಾದ ಕಾರ್ಯ. ಸರ್ವಶಕ್ತಿಗಳನ್ನು ಕೇಂದ್ರೀಕರಿಸಿ ನೋಡದ ಹೊರತು ಅದು ಪೂರ್ಣವಾಗುವಂತಹುದಲ್ಲ. ಮಧ್ಯದಲ್ಲಿ ಯಾವುದೇ ಲೋಪ ನಡೆದರೂ ಅದು ಮಾಡುವವನಿಗೂ (ಕರ್ತನಿಗೂ), ಮಾಡಿಸುವವನಿಗೂ (ಕಾರಯಿತನಿಗೂ), ದೇಶಕ್ಕೂ ಮಹಾಹಾನಿಯನ್ನು ಉಂಟುಮಾಡುತ್ತದೆ. ಅಷ್ಟೊಂದು ಸಮಯವನ್ನು ಮುಡುಪಿಡಲು ನನಗೆ ಸಾಧ್ಯವಾಗುವುದಿಲ್ಲ. ನನ್ನ ತಪಸ್ಸು, ಅನುಷ್ಠಾನಾದಿಗಳಿಗೆ ತೊಂದರೆ ಬರುತ್ತದೆ. ಆದ್ದರಿಂದ ಬೇರೊಬ್ಬ ಶಿಲ್ಪಾಚಾರ್ಯನನ್ನು ನೋಡಿ. ಮಹಾರಾಜರ ಸಂಕಲ್ಪ ವಿಜಯವಂತವಾಗಿ ಈಡೇರಲಿ. ಜಕಣಾಚಾರ್ಯರ ಶಿಷ್ಯರು ಸಾವಿರಾರು ಮಂದಿ ಇದ್ದಾರೆ. ಅವರಲ್ಲಿ ಯಾರೊಬ್ಬರಾದರೂ ಈ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಬಲ್ಲರು. ಅದೇ ಒಳ್ಳೆಯ ಮಾರ್ಗ" ಎಂದು ಹೇಳಿ ವಿಶ್ವರೂಪ ಸ್ಥಪತಿ ನೇರವಾಗಿ ಶಿಲ್ಪಾಚಾರ್ಯನ ಆಹ್ವಾನವನ್ನು ತಳ್ಳಿಹಾಕಿದ.

"ತಾವು ಹೇಳುವಂತೆ ತಮಗೆ ವೈಯಕ್ತಿಕವಾದ ತೊಂದರೆಗಳು ಉಂಟಾಗುವ ಸಾಧ್ಯತೆ ಇದೆ. ಆದರೆ ನಾವು ಅಂತಹ ತೊಂದರೆಗಳು, ಅಡಚಣೆಗಳು ತಮಗೆ ಬರದಂತೆ ಎಚ್ಚರಿಕೆ ವಹಿಸುತ್ತೇವೆ. ನಿಮ್ಮ ತಪಸ್ಸು, ಅನುಷ್ಠಾನಗಳು ನಿರ್ವಿಘ್ನವಾಗಿ ನೆರವೇರಲು ಅವಕಾಶ ಮಾಡಿಕೊಡುತ್ತೇವೆ. ನಿಮ್ಮಂತಹ ತಪಸ್ವಿ, ಯೋಗಿ, ಜ್ಞಾನಿ, ಶಾಸ್ತ್ರಜ್ಞರಾದ ಶಿಲ್ಪಾಚಾರ್ಯರು ದೊರಕಿದರೆ ಮಹಾರಾಜರು ನಮ್ಮ ಗುರುಗಳಾದ ಜಕಣಾಚಾರ್ಯರೇ ದೊರಕಿದರೆಂದು ಆನಂದತುಂದಿಲರಾಗುತ್ತಾರೆ. ಆಚಾರ್ಯರ ಶಿಷ್ಯರಲ್ಲಿ ಅನಂತಕೀರ್ತಿ ಸ್ಥಪತಿಯು ಆಚಾರ್ಯರಷ್ಟೇ ಕೌಶಲ್ಯ, ಶಾಸ್ತ್ರಜ್ಞಾನ ಉಳ್ಳವರು. ಅವರ ಮೊದಲ ಹೆಸರು ಕೈದಳಾಚಾರ್ಯ. ಅನಂತ ಪದ್ಮನಾಭಸ್ವಾಮಿಗೆ ಅವರು ರತ್ನಖಚಿತ ಕೇಯೂರ, ಮಕುಟ, ಕಟಕ, ವಜ್ರಾಂಗಿಗಳನ್ನು ನಿರ್ಮಿಸಿಕೊಟ್ಟರು. ಆಗ ಅವರು ತೋರಿದ ಕೌಶಲ, ಶಾಸ್ತ್ರ ನಿಷ್ಠೆಗಳಿಗೆ ಮಹಾರಾಜರು ಮೆಚ್ಚಿ ದೈವ ಸನ್ನಿಧಿಯಲ್ಲಿ ಆ ಸ್ವಾಮಿಯ ಹೆಸರು ಸದಾ ಉಳಿಯುವಂತೆ **ಅನಂತಕೀರ್ತಿ** ಎಂಬ ಬಿರುದನ್ನು ಕೊಟ್ಟು ಅದೇ ಸಭೆಯಲ್ಲಿ ಅವರನ್ನು **ಅನಂತಕೀರ್ತಿ ಸ್ಥಪತಿ**ಗಳೆಂದೇ ಕರೆದರು. ಅಂದಿನಿಂದ ಅದೇ ಅವರ ಹೆಸರಾಗಿದೆ. ನಮ್ಮ ಗುರುಗಳ ನಂತರ ಆ ಸ್ಥಾನಕ್ಕೆ ಅರ್ಹರಾಗುವ ಸಾಮರ್ಥ್ಯ ಅವರಿಗೆ ಮಾತ್ರವೇ ಇದೆ. ಆದರೆ ನಮ್ಮ ಗುರುಗಳು ಕ್ರೀಡಾಪುರಿಯನ್ನು ಬಿಟ್ಟಂದಿನಿಂದ ಶಿಲ್ಪವಿದ್ಯಾಗುರುಕುಲವನ್ನು ನಿರ್ವಹಿಸುವ ಹೊಣೆಗಾರಿಕೆಯು ಅನಂತಕೀರ್ತಿ ಸ್ಥಪತಿಗಳ ಮೇಲೆಯೇ ಇದೆ. ಆಚಾರ್ಯರ ಮಗನಿಗೆ ವಿದ್ಯೆ, ಶಾಸ್ತ್ರಪಾಠಗಳನ್ನು ಅವರೇ ಕಲಿಸಬೇಕಾಗಿದೆ. ಇದೆಲ್ಲಾ ತಿಳಿದಿರುವ ಮಹಾರಾಜರು ಅನಂತಕೀರ್ತಿ ಸ್ಥಪತಿಗಳಿಗೆ ತೊಂದರೆಯಾಗಬಾರದೆಂದು ಅವರಿಗೆ ಪ್ರಧಾನಸ್ಥಪತಿಯ ಪಟ್ಟಕೊಟ್ಟರೆ ಉಳಿದೆಲ್ಲಾ ಕಾರ್ಯಗಳೂ ಕಡೆಗಣಿಸಬೇಕಾಗುತ್ತದೆ ಎಂದು ಸಮರ್ಥರಾದ ಬೇರೆಯ ಸ್ಥಪತಿಗಳಿಗಾಗಿ ಹುಡುಕುತ್ತಿದ್ದಾರೆ. ಇದು ದೈವಕಾರ್ಯ. ಆದ್ದರಿಂದ ತಾವು ಅಂಗೀಕರಿಸದೆ ವಿಧಿಯಿಲ್ಲ..." ಎಂದು ಪರಿಸ್ಥಿತಿಯನ್ನು ಸಮಗ್ರವಾಗಿ ವಿವರಿಸಿದ ದೇವೋಜ.

ರಾಮಾನುಜಾಚಾರ್ಯರು ಬಹು ಕಡಿಮೆ ಅವಧಿಯಲ್ಲೇ ವಿಶ್ವರೂಪ ಸ್ಥಪತಿಯ ಮಹನೀಯ ಗುಣವನ್ನು, ಶಿಲ್ಪಕಲಾ ಪ್ರೌಢಿಮೆಯನ್ನು, ಮಂತ್ರ-ತಂತ್ರ ಸಿದ್ಧಿಯನ್ನು, ಶಾಸ್ತ್ರ ಪಾರಾಂಗತತ್ವವನ್ನೂ ಗ್ರಹಿಸಿದ್ದರು. ದೇವಾಲಯದಲ್ಲಿ ಉಳಿದೆಲ್ಲಾ ಅಂಶಗಳು ಎಷ್ಟೇ ಪ್ರಭಾವ ಯುತವಾಗಿದ್ದರೂ ಶಿಲ್ಪಕಲಾ ಕೌಶಲ್ಯವು ಅದ್ಭುತವಾಗಿದ್ದರೆ ಮಾತ್ರವೇ ದೇವಾಲಯವು ವಿಜ್ಞಾನ ನಿಲಯವಾಗಿ ಜನಸಾಮಾನ್ಯರನ್ನೂ ಆಕರ್ಷಿಸಬಲ್ಲದು. ಆದ್ದರಿಂದಲೇ ಪ್ರತಿ ದೇವಾಲಯುವನ್ನೂ ಪುನರುಜ್ಜೀವನಗೊಳಿಸುತ್ತಾ ಅವುಗಳಿಗೆ ಶಿಲ್ಪಗಳಿಂದ ಜೀವ ತುಂಬುತ್ತಾ ಬರುತ್ತಿದ್ದರು. ದೇವೋಜ ಶಿಲ್ಪಾಚಾರ್ಯನ ಮಾತುಗಳಿಂದ ವಿಶ್ವರೂಪ ಸ್ಥಪತಿಯು ಪ್ರಧಾನಾಚಾರ್ಯತ್ವವನ್ನು ಗ್ರಹಿಸಿದರೆ ಹೊಯ್ಸಳ ರಾಜ್ಯವು ವೈಷ್ಣವ ದೇವಾಲಯಗಳ ಆಗರವಾಗುತ್ತದೆ ಎಂದು ತೀರ್ಮಾನಿಸಿಕೊಂಡರು. ಹೇಗಾದರೂ ವಿಶ್ವರೂಪ ಸ್ಥಪತಿಯು ಈ ಕೆಲಸವನ್ನು ಒಪ್ಪಿಕೊಂಡು ಹೊಯ್ಸಳ ರಾಜ್ಯಕ್ಕೆ ಹೋಗಬೇಕೆಂದು ಬಯಸಿ ಇಂತು ಹೇಳಿದರು :

"ಸ್ಥಪತೀಶ್ವರಾ, ದೇವೋಜರ ಮಾತಿಗೆ ತಾವು ಏಕೆ ತಮ್ಮ ಅಂಗೀಕಾರವನ್ನು ತಿಳಿಸುತ್ತಿಲ್ಲ ? ಮತ ಪ್ರಚಾರ ಮಾಡಲು ನಾನು, ಶಿಲ್ಪಕಲೋದ್ಧಾರಣೆಗಾಗಿ ಮಾಡಲು ನಾವು ಇಬ್ಬರೂ ಭಗವಂತನಿಂದ ಆಜ್ಞಪ್ತರಾಗಿದ್ದೇವೆ. ನಮ್ಮನ್ನು ಸೃಷ್ಟಿಸಿರುವವನೇ ನಮ್ಮಿಂದ ಮಾಡಿಸಬೇಕೆಂದು ಸಂಕಲ್ಪಿಸಿರುವ ಕೆಲಸಗಳಿಗೆ ಸೂಕ್ತ ಅವಕಾಶಗಳನ್ನು ಕಲ್ಪಿಸಿಕೊಡುತ್ತಿದ್ದರೆ ನಾವೇಕೆ ಅದನ್ನು ತಿರಸ್ಕರಿಸಬೇಕು ? ಆ ಮಹಾರಾಜರು ಬಹಳ ಸೌಮ್ಯ ಸ್ವಭಾವದವರು. ಮತಪ್ರೀತಿಗೆ,

ಶಿಲ್ಪಕಲಾಭಿಮಾನಕ್ಕೆ ಅವರೇ ತೌರು. ಅಂತಹವರ ನೆರವಿಗೆ ನಿಂತು ನಮ್ಮ ಶಕ್ತಿಯನ್ನು ಸದ್ವಿನಿಯೋಗ ಗೊಳಿಸೋಣ. ಇಲ್ಲಿಯ ಯಂತ್ರ ಶಿಲ್ಪಗಳನ್ನು ನಿರ್ಮಿಸಿಕೊಡಲು ನಾಗೋಜ ಶಿಲ್ಪಾಚಾರ್ಯರು ಸಮರ್ಥರು. ಬೊಲ್ಲೋಜ ಶಿಲ್ಪಿಗಳು ಮಂತ್ರ ಜಪಾದಿ ಅನುಷ್ಠಾನಗಳಿಗೆ ನನಗೆ ನೆರವಾಗುತ್ತಾರೆ. ನೀವು ಈಗಲೇ ಹೊಯ್ಸಳ ರಾಜ್ಯಕ್ಕೆ ಪ್ರಯಾಣವಾಗಿ ಭಗವಂತನ ಆದೇಶವನ್ನು ಪಾಲಿಸಿ. ನನ್ನ ವೈಯಕ್ತಿಕ ಬಿನ್ನಪವನ್ನು ತಮ್ಮ ಆತ್ಮೀಯನೊಬ್ಬ ಅರಿಕೆ ಮಾಡಿಕೊಂಡಿದ್ದಾನೆ ಎಂದು ಭಾವಿಸಿ ನಡೆಸಿಕೊಡಿ"

ಇಂತು ಹೇಳಿದ ರಾಮಾನುಜಾಚಾರ್ಯರು ತಿರುಮಲನಂಬಿಯತ್ತ ನೋಡಿದರು.

ತಿರುಮಲನಂಬಿಯು ರಾಮಾನುಜಾಚಾರ್ಯರ ಅಭಿಪ್ರಾಯವನ್ನು ಗ್ರಹಿಸಿ "ವಿಶ್ವರೂಪ ಸ್ಥಪತಿಗಳು ಇಲ್ಲಿ ಇಲ್ಲದಿದ್ದರೆ ನಮಗೆ ಬಹುತೊಂದರೆಗಳೇ ಉಂಟಾಗುತ್ತವೆ ಎಂಬುದು ನನ್ನ ಅಭಿಪ್ರಾಯ. ಆದರೂ ಇದು ವಿಷ್ಣುವರ್ಧನ ಮಹಾರಾಜರ ಸಂಕಲ್ಪ. ಅವರು ಆಸಕ್ತರಾದರೆ ಪೂರ್ವದಲ್ಲಿ ಜೈನಮತವನ್ನು ಹೇಗೆ ಪ್ರಚಾರಮಾಡಿದರೋ ಹಾಗೆಯೇ ವೈಷ್ಣವ ಮತವನ್ನು ಪ್ರಚಾರಕ್ಕೆ ತರುತ್ತಾರೆ. ನಮ್ಮ ಕೆಲಸಗಳಿಗೆ ಇತರ ಶಿಲ್ಪಾಚಾರ್ಯರನ್ನು ಬಳಸಿಕೊಂಡು ವಿಶ್ವರೂಪಾಚಾರ್ಯರು ಹೊಯ್ಸಳ ರಾಜ್ಯಕ್ಕೆ ಹೋಗುವಂತೆ ನಾವೂ ಇವರನ್ನು ಪ್ರಾರ್ಥಿಸೋಣ" ಎಂದು ಹೇಳಿ, ವಿಶ್ವರೂಪಸ್ಥಪತಿಗಳತ್ತ ನೋಡುತ್ತಾ "ಸ್ಥಪತಿವರ್ಯಾ, ಆಚಾರ್ಯರ ಕೋರಿಕೆಯನ್ನು ಮನ್ನಿಸಿ ಹೊಯ್ಸಳ ರಾಜ್ಯಕ್ಕೆ ತಾವು ಈ ಕೂಡಲೇ ಪ್ರಯಾಣ ಮಾಡಬೇಕೆಂದು ನಾನೂ ತಮ್ಮಲ್ಲಿ ಬಿನ್ನವಿಸಿಕೊಳ್ಳುತ್ತೇನೆ. ನಿಮ್ಮ ಕೃಷಿ ಫಲಿಸಲಿ. ಕರ್ನಾಟಕವು ಭೂವೈಕುಂಠವಾಗಲಿ ಎಂದು ನಾವೂ ಪ್ರಾರ್ಥಿಸುತ್ತೇವೆ" ಎಂದು ಹೇಳಿದರು.

ಶಿಲ್ಪಕಲಾಸೇವೆಯನ್ನು ಆಜನ್ಮವ್ರತವನ್ನಾಗಿ ನಿರ್ವಹಿಸಲು ಬಂಯಸಿದ್ದ ವಿಶ್ವರೂಪಸ್ಥಪತಿ ಸ್ವಲ್ಪಹೊತ್ತು ಆಲೋಚಿಸಿದ ನಂತರ ತನ್ನ ಅಂಗೀಕಾರವನ್ನು ಸೂಚಿಸಿದ.

ತನ್ನ ಕೆಲಸ ಸಿದ್ಧಿಸಿದ್ದಕ್ಕೆ ದೇಷೋಜನಿಗೆ ಆದ ಸಂತೋಷವನ್ನು ವಿವರಿಸಲು ಅಸದಳ.

# ೧೪

ಜಕಣಾಚಾರ್ಯರು ಮನೆಬಿಟ್ಟು ಹೋದ ನಂತರ ಶಿಷ್ಯರು ತಾಳೆಗರಿಯನ್ನು ಅದರ ಮೇಲೆ ಬರೆದಿದ್ದ ಕುಂಡಲಿಯನ್ನು ಪರಿಶೀಲಿಸಿದರು. ಅವರು ಮನೆಬಿಡಲು ಅದು ಒಂದು ಕಾರಣವಾಗಿರಬೇಕೆಂದು ಊಹಿಸಿ, ಸೌಪರ್ಣೀದೇವಿಗೆ ಈ ವೃತ್ತಾಂತವನ್ನು ತಿಳಿಸಿದರು. ಈ ವಿಷಯವನ್ನು ಅರಿತ ದಾದಿ ತನ್ನ ತಪ್ಪನ್ನು ಅರಿಕೆ ಮಾಡಿಕೊಂಡು ತನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದಳು. ಇದೆಲ್ಲಾ ತನ್ನ ದುರದೃಷ್ಟದ ಫಲದಿಂದ ನಡೆದಿದೆ ಎಂದು ಭಾವಿಸಿ ಸೌಪರ್ಣೀದೇವಿಯು ಮೌನ ವಹಿಸಿದಳು. ಬಹುಕಾಲದ ನಂತರ ಹುಟ್ಟಿದ ಮುದ್ದುಕಂದನ ಮೇಲೆ ಪಂಚಪ್ರಾಣಗಳನ್ನು ಇರಿಸಿ ಪೋಷಿಸುತ್ತಿದ್ದಳು. ಆಚಾರ್ಯರ ಪ್ರಧಾನ ಶಿಷ್ಯರಾದ ಅನಂತಕೀರ್ತಿ ಸ್ಥಪತಿಯು ದಾದಿಯ ತಪ್ಪನ್ನು ತಿದ್ದಿದ ನಂತರ ಮತ್ತೆ ಜನ್ಮಕುಂಡಲಿಯನ್ನು ಬರೆದ. ಆ ಮಗು ತಂದೆಯನ್ನು ಮೀರಿಸಿದ ಮೇಧಾಶಕ್ತಿಯನ್ನು, ಕೌಶಲವನ್ನು, ಪ್ರತಿಭೆಯನ್ನು ಪಡೆದಿರುವವನು ಎಂಬುದನ್ನು ಅರಿತ. ಸೌಪರ್ಣೀದೇವಿಯು ಅಂತಹ ಪುತ್ರರತ್ನವನ್ನು ದಯಪಾಲಿಸಿದ ವಿಶ್ವಕರ್ಮನನ್ನು ಆರಾಧಿಸುತ್ತಾ, ತನ್ನ ಪತಿಯ ಬರವಿಗಾಗಿ ವ್ರತಗಳನ್ನು, ದಾನಗಳನ್ನು, ಉಪವಾಸಗಳನ್ನು ಪಾಲಿಸುತ್ತಾ ದಿನವೊಂದು ಯುಗದಂತೆ ಕಳೆಯುತ್ತಿದ್ದಳು.

ಶಿಲ್ಪಾಚಾರ್ಯನ ಕುಮಾರನು ವಂಶಪಾರಂಪರ್ಯದಿಂದ ಬರುವ ಹೆಸರಿನಂತೆ ದಕ್ಷಿಣಾಚಾರ್ಯ ಎಂದು ಕರೆಯಲ್ಪಟ್ಟ. ಮುದ್ದಾಗಿ **ಡಂಕಣ** ಎಂದು ಎಲ್ಲರೂ ಕರೆಯುತ್ತಿದ್ದರು. ಅನಂತಕೀರ್ತಿ ಸ್ಥಪತಿ ಗುರು ಪುತ್ರನನ್ನು ಬೆಳೆಸಿ ವಿದ್ಯಾ ಬುದ್ಧಿಗಳನ್ನು ಬೋಧಿಸುವುದರಲ್ಲಿ ಬಹುವಾದ ಆಸಕ್ತಿಯನ್ನು ಶ್ರದ್ಧೆಯನ್ನು ಇರಿಸಿಕೊಂಡಿದ್ದ. ಹದಿನಾಲ್ಕು ವರ್ಷಗಳು ತುಂಬುವ ವೇಳೆಗೆ ಆ ಬಾಲಕ ಅನೇಕ ವಿದ್ಯೆಗಳಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡ. ಪೂರ್ವಜನ್ಮದಲ್ಲಿಯೇ ಕಲಿತಿರುವಂತೆ ಹಲವಾರು ಕಲೆಗಳು ಆತನಿಗೆ ಸಿದ್ಧಿಸಿದ್ದವು. ಶಿಲ್ಪಶಾಸ್ತ್ರದ ಚರ್ಚೆಗಳಲ್ಲಿ ಅವನು ತನ್ನ ತಂದೆಯ ಶಿಷ್ಯರನ್ನು ಸೋಲಿಸುತ್ತಿದ್ದ. ಶಿಲಾ ಶಿಲ್ಪದ ನೈಪುಣ್ಯತೆಯನ್ನು ಗಳಿಸಿದ. ಕಾಷ್ಠ (ಮರ) ಶಿಲ್ಪದ ನಯವನ್ನು ವಶಪಡಿಸಿಕೊಂಡ. ಶಿಲಾಪರೀಕ್ಷೆಯಲ್ಲಿ ಅಪ್ರತಿಮನಾಗಿದ್ದ. ಚಿತ್ರಕಲೆ, ಸ್ವರ್ಣಮಣಿ ರಚನೆ ಮುಂತಾದ ಸುಕುಮಾರ ಕ್ರಿಯೆಗಳಲ್ಲಿ ಆತನು ಬಹುದಕ್ಷನಾದ. ಇಂತು ತೀಕ್ಷ್ಣವಾದ ಬುದ್ಧಿಯಲ್ಲಿ, ಬಹುಸೂಕ್ಷ್ಮ ಎನಿಸುವ ಶಿಲ್ಪ ಕೌಶಲ್ಯದಲ್ಲಿ ತನ್ನ ತಂದೆ ಜಕಣಾಚಾರ್ಯರಿಗೆ ಸಮನಾದವನು ಎಂದು ಎಲ್ಲರ ಪ್ರೇಮಾದರಗಳನ್ನು ಪಡೆದುಕೊಂಡ.

ಅನಂತಕೀರ್ತಿ ಸ್ಥಪತಿಗೂ ಅವನಿಗೂ ಶಾಸ್ತ್ರಾರ್ಥ ಸಂಬಂಧದಲ್ಲಿ ಏಕಾಭಿಪ್ರಾಯಗಳು ಇರುತ್ತಿರಲಿಲ್ಲ. ವಿವಿಧ ಶಾಸ್ತ್ರಕಾರರ ಮತ ಭೇದಗಳನ್ನು ಅರ್ಥೈಸುವುದರಲ್ಲೂ, ವಿಶೇಷವಾಗಿ ಮನು, ಮಯ, ಕಶ್ಯಪ, ಮಾನಸಾರ, ಅಗಸ್ತ್ಯ, ಭರದ್ವಾಜ, ವಿಶ್ವಕರ್ಮ ಶಿಲ್ಪರ್ಷಿಗಳ ಮತಗಳನ್ನು ಸಮನ್ವಯಗೊಳಿಸುವುದರಲ್ಲಿ ಹೊಸ ಮಾರ್ಗವೇ ಕಾಣಿಸುತ್ತಿತ್ತು. ಅನಂತಕೀರ್ತಿಸ್ಥಪತಿಗೆ ಈ

ರೀತಿಯ ಅನ್ವಯಕ್ರಮ ಹೊಸದಾಗಿತ್ತು. ಜಕಣಾಚಾರ್ಯರು ಅದುವರೆವಿಗೂ ನಿರ್ಮಿಸಿದ್ದ ಅನೇಕ ದೇವಮೂರ್ತಿಗಳ ಪ್ರತಿರೂಪಗಳು ಅವರ ಶಿಲ್ಪಶಾಲೆಯಲ್ಲಿದ್ದವು. ಆಯಾ ಶಿಲ್ಪಶಾಸ್ತ್ರ ಸಂಪ್ರದಾಯವನ್ನು ಅನುಸರಿಸಿ ರೂಪಿಸಿರುವ ಶಿಲ್ಪಗಳು ಅವು. ಮುಖ ಮುಂತಾದ ಅವಯವ ಪ್ರಮಾಣದಲ್ಲಿ ಹೆಚ್ಚು ವ್ಯತ್ಯಾಸವಿರಲಿಲ್ಲವಾದರೂ ಅಂಗಭಂಗಿಗಳಲ್ಲಿ ಆಯುಧಗಳಲ್ಲಿ ಸೂಕ್ಷ್ಮವಾದ ಭೇದಗಳು ಕಾಣಿಸುತ್ತಿದ್ದವು. ಈ ಸಣ್ಣ ಭೇದಕ್ಕೆ ಯಾವುದೋ ಕಾರಣ ಇರಬೇಕೆಂಬುದು ಕುಮಾರನ ವಾದ. ಆಸನ, ಸ್ಥಾನಕ, ಶಯನ ಮೂರ್ತಿಗಳ ಬಗ್ಗೆ, ಹಸ್ತ-ಪಾದಗಳ ಬಗ್ಗೆ ವಿವಿಧ ವಿನ್ಯಾಸ ವಿಷಯಗಳ ಬಗ್ಗೆ ಅವರಿಬ್ಬರಿಗೂ ಮತಭೇದಗಳು ಏರ್ಪಡುತ್ತಿದ್ದವು.

ಜಕ್ಕಣಾಚಾರ್ಯನು ಆಯಾ ಶಾಸ್ತ್ರಗಳಿಗೆ ಬರೆದು ಗುರ್ತಿಸಿದ್ದ ಟೀಕೆಗಳು, ವ್ಯಾಖ್ಯಾನಗಳನ್ನು ಆಧಾರವನ್ನಾಗಿಸಿಕೊಂಡು ಜಕ್ಕಣಾಚಾರ್ಯರ ವಿಶೇಷ ಅಭಿಪ್ರಾಯಗಳನ್ನು ಕುಮಾರನು ಗ್ರಹಿಸಿ ವಿವರಿಸುತ್ತಿದ್ದ. ಇದೆಲ್ಲಾ ಏನೋ ಹೊಸ ಮಾರ್ಗವೆಂದು, ಸಂಪ್ರದಾಯದ ಉಲ್ಲಂಘನೆ ಎಂದು ಅನಂತಕೀರ್ತಿಸ್ಥಪತಿ ಭಾವಿಸುತ್ತಿದ್ದ. ಶಿಲಾ ಪರೀಕ್ಷೆಯ ಸಂಬಂಧದಲ್ಲಿ ಅವರಿಬ್ಬರ ಮಾರ್ಗಗಳು ಭಿನ್ನವಾಗಿರುತ್ತಿದ್ದವು. ಶಾಸ್ತ್ರ ಪರಿಜ್ಞಾನ ಎಷ್ಟೇ ಇದ್ದರೂ ಶಿಲಾಪರೀಕ್ಷಣದ ಅಭ್ಯಾಸವು ಬಹು ಹೆಚ್ಚಾಗಿರಬೇಕು. ಅಂತಹ ಅಭ್ಯಾಸವು ಪೂರ್ವಜನ್ಮದಲ್ಲಿಯೇ ಡಂಕಣನಿಗೆ ಸಿದ್ಧವಾದಂತೆ ತೋರುತ್ತಿತ್ತು. ಇಂತು ದಿನದಿನಕ್ಕೂ ಕುಮಾರನ ಅಸಂತೃಪ್ತಿ ಬೆಳೆಯ ತೊಡಗಿತು ಒಮ್ಮೆ ತಾಯಿಗೆ ಈ ಮಾತು ಹೇಳಿದ. ತಾಯಿಯು ಮಗನ ಅದ್ಭುತ ಪ್ರತಿಭೆ, ಶಾಸ್ತ್ರ ವ್ಯಾಖ್ಯಾನ ಕೌಶಲಗಳಿಗೆ ಆಶ್ಚರ್ಯಗೊಂಡಿದ್ದಳು. ಇಂತಹ ಪ್ರತಿಭಾಶಾಲಿಯು ತನ್ನ ತಂದೆಯ ಬಳಿಯೇ ಅಧ್ಯಯನ ನಡೆಸಿದ್ದಿದ್ದರೆ ಇನ್ನೂ ಎಷ್ಟು ಹೆಚ್ಚಿನ ವಿದ್ಯಾವಂತನಾಗುತ್ತಿದ್ದನೋ ಎನಿಸಿತ್ತು ಆಕೆಗೆ. ಈ ಕುಮಾರ ರತ್ನವನ್ನು ಕಂಡು ಆನಂದಿಸುವ ಭಾಗ್ಯ ತನ್ನ ಪತಿಗೆ ಇಲ್ಲವಲ್ಲಾ ಎಂದು ತನ್ನಲ್ಲಿಯೇ ದುಃಖಿಸಿದಳು. ಮಗನನ್ನು ಕುರಿತು "ಮಗೂ, ಅನೇಕ ವಿಷಯಗಳಲ್ಲಿ ನೀನು ನಿನ್ನ ಗುರುಗಳಾದ ಅನಂತಕೀರ್ತಿ ಸ್ಥಪತಿಗಳ ಮಾತನ್ನು ಕೇಳುತ್ತಿಲ್ಲ ಎಂಬುದಾಗಿ ನಿನ್ನ ವಿದ್ಯಾರ್ಥಿ ಸ್ನೇಹಿತರು ಹೇಳಿದರು. ಆದರೆ ನಿನ್ನ ಸ್ವಭಾವದಲ್ಲಿ ಆ ರೀತಿಯ ಅವಿನಯ ಇದೆ ಎಂದು ನಾನು ಭಾವಿಸಿಲ್ಲ. ಆದರೂ ನೀನೇಕೆ ಈ ರೀತಿಯಾಗಿ ವರ್ತಿಸುತ್ತಿರುವೆ ?" ಎಂದು ಕೇಳಿದಳು.

ಡಂಕಣಾಚಾರ್ಯ ತಾಯಿಯನ್ನು ನೋಡಿ "ಶಾಸ್ತ್ರಾರ್ಥ ವಿಷಯಗಳಲ್ಲಿ ನಾನು ಗುರುಗಳ ಅಭಿಪ್ರಾಯವನ್ನು ಒಪ್ಪುತ್ತಿಲ್ಲ ಎನ್ನುವುದು ನಿಜವೇ. ವಿಶ್ವಕರ್ಮಾದಿಗಳ ಮತದ ಅನುಸಾರ ತೀರ್ಥರೂಪರ ಅಭಿಪ್ರಾಯಗಳೇ ಬೇರೆಯಾಗಿವೆ. ಅನಂತಕೀರ್ತಿ ಸ್ಥಪತಿಗಳ ಅಭಿಪ್ರಾಯಗಳೇ ಬೇರೆ. ತೀರ್ಥರೂಪರು ನಿರ್ಮಿಸಿರುವ ಪ್ರತಿಮೆಗಳನ್ನು, ಅವರು ಬರೆದಿರುವ ಟೀಕೆಗಳನ್ನು, ಟಿಪ್ಪಣೆಗಳನ್ನು ಆಧಾರವಾಗಿರಿಸಿಕೊಂಡು ನನ್ನ ಅಭಿಪ್ರಾಯವನ್ನು ಸಾಧಾರವಾಗಿ ಸಮರ್ಥಿಸುತ್ತೇನೆ. ಆ ಸೂಕ್ಷ್ಮಸಂಗತಿಗಳು ಅವರಿಗೆ ಗ್ರಾಹ್ಯವಾಗುತ್ತಿಲ್ಲ. ನನ್ನ ಈ ಮಾತುಗಳು ಅವಿನಯ, ಗುರುಧಿಕ್ಕಾರ ವೆಂದು ನನ್ನ ಸ್ನೇಹಿತರು ಅರ್ಥಮಾಡಿಕೊಂಡಿದ್ದಾರೆ. ನನಗೆ ಗುರುಗಳಲ್ಲಿ ಅಪಾರ ಭಕ್ತಿ ಪ್ರೇಮಗಳಿವೆ. ಅದನ್ನು ಅವರು ಗುರ್ತಿಸುತ್ತಿಲ್ಲ ಅಷ್ಟೆ!" ಎಂದು ವಿವರಿಸಿ ಹೇಳಿದ.

“ನಿನ್ನೆ ಶಿಲಾಪರೀಕ್ಷಣದ ಬಗ್ಗೆಯೂ ಗುರುಗಳ ವಿರೋಧವಾಗಿ ಹೇಳಿದೆಯಂತೆ ಶಿಷ್ಯನಾದವನಿಗೆ ವಿನಯ, ಸಹನೆ, ಗುರುಗಳ ಬಗ್ಗೆ ಅಪಾರ ಗೌರವ ಇರಬೇಕು. ಅದು ಬಹುಮುಖ್ಯ ಎಂಬುದು ನಿನಗೆ ಗೊತ್ತಿಲ್ಲವೇ ?” ಎಂದು ಕೇಳಿದಳು ತಾಯಿ.

“ಹೌದಮ್ಮಾ, ಅದು ನಪುಂಸಕ ಶಿಲೆಯಾದುದರಿಂದ ಪಾದ ಪೀಠಕ್ಕೆ ಬಳಸಬೇಕೆಂದು ನಾನು ಹೇಳಿದೆ. ಅದನ್ನು ಗುರುಗಳು ಒಪ್ಪದೆ ಪುಂಶಿಲೆ ಆದರೆ ಕಡಿಮೆ ಜಾತಿಯದು ಎಂದರು. ಅದರ ನಾದ, ಅದು ಬಿರಿಯುವ ರೀತಿ, ಅದರ ಒಳ ಪೊರೆಗಳು ಇವೆಲ್ಲದರಿಂದ ಕೊನೆಗೆ ಏನೆಂದು ತೀರ್ಮಾನವಾಯಿತೆಂಬುದನ್ನು ನೀವೇ ಅವರಿಂದ ಕೇಳಿ ತಿಳಿಯಬಹುದು” ಎಂದ ಡಂಕಣ. ತಾಯಿ ಮೌನವಾಗಿದ್ದಳು. ಇದನ್ನು ಗ್ರಹಿಸಿದ ಅವನು “ನಂತರ ಅದು ಪೂರ್ಣವಾಗಿ ನಪುಂಸಕ ಶಿಲೆಯೇ ಎಂದು ಗುರುಗಳೂ ಅಂಗೀಕರಿಸಿದರು. ಕೆಲವು ನಪುಂಸಕ ಶಿಲೆಗಳು ಪುಂಶಿಲೆಗಳೆಂದು ಭ್ರಾಂತಿಯುಂಟು ಮಾಡುತ್ತವೆ. ಅದೇ ರೀತಿಯಾಗಿ ಕೆಲವು ಸ್ತ್ರೀ ಶಿಲೆಗಳು ಪುಂಶಿಲೆಯ ವಿಶಿಷ್ಟ ಗುಣಗಳನ್ನು ಪಡೆದುಕೊಂಡಿರುತ್ತವೆ. ಅವು ಸಂಕರ ಶಿಲೆಗಳು. ಇಷ್ಟೆಲ್ಲಾ ಏಕೆ ತಂದೆಯವರು ರೂಪಿಸಿರುವ ಸ್ತ್ರೀ-ಪುಂ ದೇವತಾ ವಿಗ್ರಹಗಳನ್ನು ಪರೀಕ್ಷಿಸಿದರೆ ವಾಸ್ತವ ವಿಷಯವು ಗೊತ್ತಾಗುವುದಲ್ಲವೇ ?” ಎಂದು ಹೇಳುತ್ತಾ ಇದ್ದ.

ಸೌಪರ್ಣೀದೇವಿಯು ತನ್ನ ಮಗನ ತಲೆಯನ್ನು ನೇವರಿಸುತ್ತಾ “ಮಗೂ, ಅನಂತಕೀರ್ತಿ ಸ್ಥಪತಿಗಳು ಅನೇಕ ದೊಡ್ಡ ದೊಡ್ಡ ಶಿಲ್ಪಗಳನ್ನು ಮಾಡಿ ಪ್ರಖ್ಯಾತರಾಗಿರುವವರು. ಅಂತಹವರನ್ನು ಈ ರೀತಿ ನೀನು ಅಗೌರವಿಸುವುದು ನನಗೆ ಸರಿ ಎನಿಸುವುದಿಲ್ಲ. ಆತನು ನನಗೆ ಹಿರಿಯ ಮಗನಂತೆ ಇದ್ದು ಈ ಗುರುಕುಲ ಮತ್ತು ನಿನ್ನ ಅಭಿವೃದ್ಧಿಗಾಗಿ ಎಷ್ಟು ಶ್ರಮ ವಹಿಸುತ್ತಿದ್ದಾನೆ ಎಂಬುದನ್ನು ನೀನು ಗುರ್ತಿಸಿಲ್ಲವೇ?” ಎಂದು ಹೇಳಿದಳು.

“ಹೌದಮ್ಮಾ, ಆ ವಿಷಯವನ್ನು ನಾನೆಂದು ನಿರಾಕರಿಸಿದ್ದೇನೆ ? ಇಂದಿಗೂ ಬೆಳಿಗ್ಗೆ ನಾನು ನಮಸ್ಕರಿಸುವುದೇ ನನ್ನ ಗುರುಗಳಿಗೆ. ಅವರು ತಿಳಿಯದವರು ಎಂದು ನಾನು ಭಾವಿಸಿಲ್ಲ. ಆದರೆ ಮೊದಲು ನೀವು ಹೇಳುವಂತೆ ಅವರು ಹೇಳಿದ್ದನೆಲ್ಲಾ ವೇದವೆಂದು ಮೂಢ ಭಕ್ತಿಯಿಂದ ಗ್ರಹಿಸುವುದು ನನಗೆ ಸಾಧ್ಯವಾಗುವುದಿಲ್ಲ. ಇದುವರೆವಿಗೂ ಶಿಲಾ ಪರೀಕ್ಷಣ ಶಾಸ್ತ್ರವು ಸಮಗ್ರ ರೀತಿಯಲ್ಲಿ ರೂಪುಗೊಂಡಿರುವಂತೆ ನನಗೆ ಭಾಸವಾಗುತ್ತಿಲ್ಲ. ಆ ಶಾಸ್ತ್ರವು ಅನೇಕ ಸೂಕ್ಷ್ಮ ವಿಷಯಗಳನ್ನು ಅಳವಡಿಸಿಕೊಂಡು ಇನ್ನೂ ಬೆಳೆಯಬೇಕಾಗಿದೆ. ನನಗೆ ಅನೇಕ ಹೊಸ ಸಂಗತಿಗಳು ಸ್ಫುರಿಸುತ್ತಿವೆ. ಅವನ್ನು ನಾನು ಹೇಳದೆ ಸುಮ್ಮನಿರಲಾರೆ. ಶಿಲೆಗಳಿಗೆ ಸತ್ವ ರಜಸ್ಸು ತಮೋಗುಣಗಳು ಇರುವಂತೆ ಇದುವರೆವಿಗೂ ಗುರ್ತಿಸಿಲ್ಲ. ಆ ಗುಣಗಳನ್ನು ನಿಖರವಾಗಿ ಗುರ್ತಿಸಿ ಅದರ ಅನ್ವಯ ನಾವು ಶಿವ-ಕೇಶವಾದಿ ಮೂರ್ತಿಗಳಿಗೆ ಶಿಲೆಯನ್ನು ಆಯ್ಕೆ ಮಾಡುವುದು ಶ್ರೇಷ್ಠವೆಂದು ನನಗೆ ತೋರುತ್ತದೆ. ಒಂದು ಮೂರ್ತಿಯನ್ನು ರೂಪಿಸಲು ಬಳಸಬೇಕಾಗಿರುವ ಶಿಲೆಯಲ್ಲಿ ಇನ್ನೊಂದು ಮೂರ್ತಿಯನ್ನು ಕಡೆದಾಗ ಅದು ಹೇಗೆ ತಾನೇ ಸಂಪೂರ್ಣ ಫಲವನ್ನಾಗಲಿ, ಸತ್ಫಲವನ್ನಾಗಲಿ ಕೊಡಬಲ್ಲುದು ? ಶಾಸ್ತ್ರಗಳಿಗೆ ಕೂಡ ಸರಿಯಾದ ವ್ಯಾಖ್ಯಾನವಿಲ್ಲದೆ ಸ್ಪಷ್ಟವಾದ ಅರ್ಥತಿಳಿಯುವುದು ಸಾಧ್ಯವಿಲ್ಲದಾಗಿದೆ. ತೀರ್ಥರೂಪರೇ ಇಲ್ಲಿದ್ದಿದ್ದರೆ ನನಗೆ ಇಷ್ಟೊಂದು ಅನುಮಾನಗಳು ಉಂಟಾಗುತ್ತಿರಲಿಲ್ಲ. ಆದ್ದರಿಂದ ನಾನು ದೇಶದೇಶಗಳಲ್ಲಿ ಹುಡುಕಿಯಾದರೂ ಅವರನ್ನೇ ಕರೆದುಕೊಂಡು ಬರುತ್ತೇನೆ” ಎಂದು ಹೇಳಿದ ಡಂಕಣ.

"ಬಹುಕಾಲದ ನಂತರ ದೇವರ ವರಪ್ರಸಾದದಿಂದ ಲಭಿಸಿದ ನೀನು ದೇಶಾಂತರ ಯಾತ್ರೆ ಹೋಗುತ್ತೇನೆ ಎಂದರೆ ನಾನು ಸಹಿಸಲಾರೆ ಮಗೂ. ಈ ಪ್ರಯತ್ನವನ್ನು ನೀನು ಕೈಬಿಡು." ಎಂದಳು ತಾಯಿ.

"ಇಲ್ಲಮ್ಮ ನಾನು ಹೋಗಲೇಬೇಕು. ನನ್ನನ್ನು ನೋಡುತ್ತಾ ನೀನು ಸಂತೋಷವಾಗಿದ್ದೀಯೆ ಎಂದು ಯಾರು ಹೇಳಲು ಸಾಧ್ಯವಿದೆ ? ನನ್ನ ತಂದೆಗಾಗಿ ಪ್ರತಿನಿತ್ಯವೂ ನೀನು ಕಣ್ಣೀರು ಸುರಿಸುತ್ತಿಲ್ಲವೇ ? ಅದಕ್ಕಾಗಿ ನಾನೇ ಹೋಗಿ ಹುಡುಕಿ ಅವರನ್ನು ಕರೆದುಕೊಂಡು ಬರುತ್ತೇನೆ" ಎಂದ ಡಂಕಣ.

"ಮಗೂ, ನೀನಿನ್ನೂ ಬಾಲಕ. ಇಂತಹ ಕೆಲಸವನ್ನು ನೀನು ಈಗಲೇ ಕೈಗೊಳ್ಳುವುದು ಸರಿಯಲ್ಲ. ನಿನ್ನನ್ನು ನನ್ನ ಕಣ್ಣೆವೆಗಳಲ್ಲಿಗಿಸಿಕೊಂಡು ಕಾಪಾಡುತ್ತಿದ್ದೇನೆ. ನಾವು ಅದೃಷ್ಟ ಶಾಲಿಗಳಾಗಿದ್ದರೆ ನಿನ್ನ ತಂದೆ ಇನ್ನು ಸ್ವಲ್ಪ ದಿನಗಳಲ್ಲಾದರೂ ಇಲ್ಲಿಗೆ ಬರಬಹುದು..." ಎಂದಳು ಸೌಪರ್ಣೀದೇವಿ.

"ನನ್ನನ್ನು ತಡೆಯಬೇಡಮ್ಮಾ. ನನ್ನ ತಂದೆಯನ್ನು ನಾನು ಕಂಡು ಕರೆತರುತ್ತೇನೆ. ಅವರು ನಿರ್ಮಿಸಿರುವ ಶಿಲ್ಪಗಳು, ಅವರು ಗುರ್ತಿಸಿರುವ ಶಾಸ್ತ್ರ ರಹಸ್ಯ ಸಂಗತಿಗಳನ್ನು, ವ್ಯಾಖ್ಯಾನಿಸಿರುವ ಪದ್ಧತಿಯನ್ನು ನೋಡಿದ ನಂತರ ನಾನು ಇಲ್ಲಿಯೇ ಇರುವುದು ವ್ಯರ್ಥ ಕಾಲಹರಣವೆನಿಸುತ್ತಿದೆ. ಅಂತಹ ಮಹನೀಯರನ್ನು ತಂದೆಯನ್ನಾಗಿ ಪಡೆದಿರುವ ನಾನೇ ಮಹಾ ಭಾಗ್ಯಶಾಲಿ. ಅವರು ಕೇವಲ ನಮ್ಮ ಕುಟುಂಬದ ಯಜಮಾನರಾಗಿರುವವರಲ್ಲ. ಶಿಲ್ಪಶಾಸ್ತ್ರ ಸಮುದಾಯಕ್ಕೆ, ಶಿಲ್ಪಿಗಳಿಗೆ ಶಿರೋಧಾರ್ಯರಾಗಿರುವ ಮಹಾಮಹಿಮರು. ಆದ್ದರಿಂದ ಅವರನ್ನು ಹುಡುಕಿ ಕರೆತರಲೇಬೇಕು. ನನ್ನನ್ನು ಆಶೀರ್ವದಿಸಿ ಕಳುಹಿಸಿಕೊಡಿ" ಎಂದು ಕೇಳಿದ ಡಂಕಣ.

"ನಿನ್ನ ತಂದೆಯ ನಿರ್ಗಮನವನ್ನು ಇದುವರೆವಿಗೂ ನಿನ್ನನ್ನು ನೋಡುತ್ತಾ ಸಹಿಸಿಕೊಂಡಿದ್ದೆ. ನಿನ್ನ ಮೇಲಣ ವಾತ್ಸಲ್ಯ ಆ ನೋವನ್ನು ಮರೆಸಿತ್ತು. ನೀನು ಇನ್ನೂ ಹಾಲುಗಲ್ಲದ ಹಸುಳೆ. ಹದಿನಾಲ್ಕು ವರ್ಷ ಎಂದರೆ ಬಾಲ್ಯವೇ. ಪ್ರಪಂಚದ ಅನುಭವವೇ ಇಲ್ಲದವನು. ಆದ್ದರಿಂದ ಈ ಸಾಹಸವನ್ನು ಈಗಲೇ ಮಾಡಬೇಡ..." ತಾಯಿ ಅನುನಯದಿಂದ ಪ್ರಾರ್ಥಿಸಿದಳು.

"ಇದೇನಮ್ಮಾ ಇಂಥಾ ಭಯದ ಮಾತುಗಳನ್ನಾಡುತ್ತಿರುವೆ ?! ನಾನು ಶಿಲ್ಪಕಲಾ ಸಾರ್ವಭೌಮರಾದ ಜಕಣಾಚಾರ್ಯರ ಪುತ್ರ. ನಿನ್ನಂತಹ ಪರಮಸಾಧ್ವಿಯ ಮಗ. ವಿಶ್ವಕರ್ಮ ಭಗವಾನನ ಭಕ್ತ. ವಿಶೇಷವಾಗಿ ಶಾಸ್ತ್ರಾಧ್ಯಯನ ನಡೆಸಿರುವ ನನಗೆ ಪ್ರವೇಶವಿಲ್ಲದ ಸ್ಥಳಗಳು ಯಾವುವು ? ನನ್ನ ತಂದೆ ತಮ್ಮ ಹೆಸರು-ಭಾಷೆ ವೇಷಗಳನ್ನು ಬದಲಿಸಿಕೊಂಡು ಓಡಾಡುತ್ತಿದ್ದಾರೆಂಬುದು ನನ್ನ ಊಹೆ. ಇಲ್ಲದಿದ್ದರೆ ಈ ವೇಳೆಗೆ ಅವರ ಬಗ್ಗೆ ಸುದ್ದಿ ನಮಗೆ ಖಂಡಿತವಾಗಿ ಬರುತ್ತಿತ್ತು. ಅವರನ್ನು ಈಗ ಗುರ್ತಿಸಬೇಕಾದರೆ ಇರುವ ಮಾರ್ಗವೆಂದರೆ ಅವರ ರೀತಿ-ನೀತಿಗಳು, ಕಲಾಕೌಶಲ್ಯ, ಶಿಲ್ಪ ಶೈಲಿ ಇವುಗಳಿಂದಲೇ ಸಾಧ್ಯ. ನನ್ನ ತಂದೆಯನ್ನು ನಾನು ಮಾತ್ರವೇ ಗುರ್ತಿಸಬಲ್ಲೆ ಎಂಬುದು ನಿನಗೆ ಗೊತ್ತಿಲ್ಲವೇನಮ್ಮಾ ? ಆದ್ದರಿಂದ ಯಾವುದೇ ಸಂದೇಹವಿಲ್ಲದೆ ನನ್ನನ್ನು ಆಶೀರ್ವದಿಸಿ ಕಳುಹಿಸಮ್ಮಾ. ನಾನು ಈ ಕೆಲಸದಲ್ಲಿ ಯಶಸ್ವಿಯಾಗುತ್ತೇನೆ ಎಂಬ ನಂಬಿಕೆ ನನಗಿದೆ!" ಎಂದು ತಾಯಿಗೆ ಸಾಂತ್ವನದ ಮಾತುಗಳನ್ನು ಹೇಳಿದ.

"ಮಗೂ, ನಿನ್ನ ಶಕ್ತಿ-ಸಾಮರ್ಥ್ಯಗಳು, ಧೈರ್ಯೋತ್ಸಾಹಗಳು, ಪ್ರತಿಭೆ-ಜಾಣ್ಮೆಗಳು ನನಗೆ ಗೊತ್ತು. ಆದರೂ ಒಬ್ಬನನ್ನೇ ಹೀಗೆ ದೇಶಾಂತರ ಕಳುಹಿಸಲು ಮನಸ್ಸು ಒಪ್ಪುತ್ತಿಲ್ಲ ಅಷ್ಟೆ. ಹೋಗಿ ಬಾ ಕಂದ. ಬಹು ಜಾಗರೂಕತೆಯಿಂದ ಪ್ರಯಾಣ ನಡೆಸಬೇಕು. ಗಾಯತ್ರೀವಿಶ್ವಕರ್ಮರ ಅನುಗ್ರಹವು ನಿನಗೆ ಲಭಿಸಲಿ. ಆದ್ಯ ಪಂಚರ್ಷಿಗಳು ಸದಾ ನಿನ್ನನ್ನು ಕಾಪಾಡುತ್ತಿರಲಿ. ಬಹುಬೇಗ ನಿನ್ನ ತಂದೆಯೊಡನೆ ಇಲ್ಲಿಗೆ ಬಂದು ನಮ್ಮೆಲ್ಲರ ಮನಸ್ಸನ್ನು ಸಂತೋಷ ಪಡಿಸುವಂಥವನಾಗು. ನಿನ್ನ ಮಿತ್ರರಾದ ಮಯಾಚಾರ್ಯ, ಚಲುವಾಚಾರ್ಯರನ್ನೂ ನಿನ್ನೊಂದಿಗೆ ಕರೆದುಕೊಂಡು ಹೋಗು. ಇಷ್ಟಾರ್ಥಕಾರ್ಯ ಸಿದ್ಧಿರಸ್ತು. ದೀರ್ಘಾಯುಷ್ಮಾನ್ ಭವ" ಎಂದು ಮಗನನ್ನು ಆಶೀರ್ವದಿಸಿ ಬೀಳ್ಕೊಟ್ಟಳು ಆ ತಾಯಿ.

## ೧೫

ವೇಲಾಪುರಿಯಲ್ಲಿ ಚೆನ್ನಕೇಶವ ದೇವಾಲಯದ ಶಂಕುಸ್ಥಾಪನೆಯಾಯಿತು. ವಿಷ್ಣುವರ್ಧನ ಮೊದಲಿಗೆ ಐದು ಸ್ಥಳಗಳಲ್ಲಿ ಮಾತ್ರವೇ ದೇವಾಲಯಗಳನ್ನು ನಿರ್ಮಾಣ ಮಾಡಿ ಪಂಚನಾರಾಯಣ ಪ್ರತಿಷ್ಠೆ ಮಾಡಬೇಕೆಂದುಕೊಂಡಿದ್ದ. ಸನಾತನ ಧರ್ಮದಲ್ಲಿ 'ಐದು' ಸಂಖ್ಯೆಗೆ ಬಹುವಾದ ಪ್ರಾಮುಖ್ಯತೆ ಇದೆ. ಈ ಜಗತ್ತು ಪಂಚಭೂತಗಳಿಂದ ಸೃಷ್ಟಿಯಾಗಿರುವುದು. ಮಾನವನು ತನ್ನ ಐದು ಜ್ಞಾನೇಂದ್ರಿಯಗಳಿಂದಲೇ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಮಯವಾದ ಈ ಜಗತ್ತನ್ನು ಅನುಭವಿಸುತ್ತಾನೆ. ಸತ್, ಚಿತ್, ಆನಂದ ಎಂಬ ಮೂರು ಆತ್ಮಾಂಶಗಳು ನಾಮ ಮತ್ತು ರೂಪಗಳೆಂಬ ಎರಡು ಜಗತ್ತಿನ ಅಂಶಗಳೊಂದಿಗೆ ಸೇರಿ ಪಂಚಾಂಶಗಳೊಂದಿಗೆ ಪ್ರಪಂಚವಾಯಿತು ಎಂದು ತತ್ತ್ವವೇತ್ತರು ಹೇಳುತ್ತಾರೆ. ಈ ರಹಸ್ಯವನ್ನು ಸೂಚಿಸಲೆಂದೇ ಸನಾತನ ವೈದಿಕ ಮತದಲ್ಲಿ ಗಾಯತ್ರೀ, ವಿಶ್ವಕರ್ಮ, ಶಿವ ಮುಂತಾದ ದೇವತೆಗಳಿಗೆ ಐದು ಶಿರಸ್ಸುಗಳಿರುವಂತೆ ವರ್ಣಿಸಿರುವುದು.

ಈ ಪಂಚ ಸಂಖ್ಯೆಯ ಪ್ರಾಧಾನ್ಯವು ಬೌದ್ಧ ಜೈನ ಮತಗಳನ್ನೂ ಕೂಡ ಬಿಡಲಿಲ್ಲ. ಅಮರಾವತೀ ಶಿಲ್ಪಗಳಲ್ಲಿ ಸ್ತೂಪಗಳಿಗೆ ನಾಲ್ಕು ಕಡೆಯೂ ಐದೈದು ಆರ್ಯಕ ಸ್ತಂಭಗಳನ್ನು ನಿಲ್ಲಿಸಿ ಅಂದಿನ ಶಿಲ್ಪಿಗಳು ಈ ಸಂಪ್ರದಾಯವನ್ನು ಕಾಪಾಡಿದ್ದಾರೆ. ಬೌದ್ಧರು ಈ ಆರ್ಯಕ ಸ್ತಂಭಗಳನ್ನು ಬುದ್ಧನ ಪಂಚಕಲ್ಯಾಣಗಳಿಗೆ ಸೂಚಕವೆಂದು ಸಮನ್ವಯಗೊಳಿಸಿಕೊಂಡರು.

ಈ ಸಂಪ್ರದಾಯವನ್ನು, ಪ್ರಾಧಾನ್ಯವನ್ನು ಹಲವು ಬಾರಿ ವೀರಬಲ್ಲಾಳ ಮಹಾರಾಜ ಜಕ್ಕಣಾಚಾರ್ಯನಿಂದ ಕೇಳಿ ತಿಳಿದಿದ್ದ. ಈ ಸಂಪ್ರದಾಯ ರಹಸ್ಯದಲ್ಲಿ ಗೌರವ ಬುದ್ಧಿಯುಳ್ಳ ಭೂಪಾಲ ಮೊದಲಿಗೆ ವೇಲಾಪುರಿ, ತಲಕಾಡು, ತೊಣ್ಣೂರು, ಮೇಲುಕೋಟೆ, ಗದಗಗಳಲ್ಲಿ ಮಾತ್ರವೇ ಪಂಚನಾರಾಯಣ ಮೂರ್ತಿಗಳನ್ನು ಪ್ರತಿಷ್ಠಾಪಿಸಬೇಕೆಂದು ಪ್ರಯತ್ನಿಸಿದ.

ವೇಲಾಪುರಿಯು ದ್ವಾರಸಮುದ್ರಕ್ಕೆ ಒಂದು ಯೋಜನದ ದೂರದಲ್ಲಿತ್ತು. ತನಗೆ ಬಹು ಮುಖ್ಯವಾದ ದ್ವಾರಸಮುದ್ರದ ಸಮೀಪದಲ್ಲಿದ್ದ ವೇಲಾಪುರಿಯನ್ನೂ ಕೂಡ ತನ್ನ ಬಿಡದಿಯ ಪಟ್ಟಣವನ್ನಾಗಿ ಮಾಡಿಕೊಂಡಿದ್ದ. ಹಲವಾರು ರಾಜಕೀಯ ಕಾರ್ಯಾಲಯಗಳು ವೇಲಾಪುರಿಯಲ್ಲೂ ಇದ್ದವು. ರಾಜ ಪ್ರಾಸಾದಗಳು, ರಾಣೀವಾಸಗಳು, ವಿಹಾರ ಮಂದಿರಗಳು, ಸಭಾಮಂಟಪಗಳು ಅದ್ಭುತವಾದ ಶಿಲ್ಪ ವೈಭವದಿಂದ ಅಲ್ಲಿ ಕಂಗೊಳಿಸುತ್ತಿದ್ದವು. ಮಂತ್ರಿಗಳ, ದಂಡನಾಥರ ಭವನಗಳು ಇದ್ದವು. ಮಹಾರಾಜರ ದರ್ಶನಕ್ಕಾಗಿ ಬಂದ ಸಾಮಂತರಿಗೆ, ಪಾಳ್ಳೇಗಾರರಿಗೆ, ರಾಯಭಾರಿಗಳಿಗೆ ಬಿಡದಿಗಳೂ ಕೂಡ ಅಲ್ಲಿಯೇ ನಿರ್ಮಾಣವಾಗಿದ್ದವು. ಬಂದವರಿಗೆ ಮಹಾರಾಜರ ದರ್ಶನವೂ ಕೂಡ ಅಲ್ಲಿಯ ಕಲಾಭವನದಲ್ಲಿಯೇ ನಡೆಯುತ್ತಿತ್ತು.

ಕಾಲಕ್ರಮದಲ್ಲಿ ದ್ವಾರಸಮುದ್ರ ವೇಲಾಪುರಗಳು ಜಂಟಿನಗರಗಳಾಗಬಹುದು ಎಂದು ಅನೇಕರು ಅನುಮಾನಿಸುತ್ತಿದ್ದರು.

ದ್ವಾರಸಮುದ್ರದಲ್ಲಿ ಈ ಮೊದಲೇ ಹೊಯ್ಸಳೇಶ್ವರ-ಶಾಂತಲೇಶ್ವರ ದ್ವಿಕೂಟಾಚಲ ದೇವಾಲಯವು ಮನೋಹರ ಶಿಲ್ಪಗಳಿಂದ ಸುಂದರವಾಗಿ ಅಲಂಕೃತವಾಗಿತ್ತು. ಎರಡನೆಯ ರಾಜಧಾನಿ ಎಂದು ಹೇಳಲಾಗುತ್ತಿದ್ದ ವೇಲಾಪುರಿಯಲ್ಲೂ ಕೂಡ ಅದ್ಭುತವಾದ ಶಿಲ್ಪ ವೈಭವವನ್ನು ಪಡೆದುಕೊಂಡಿರುವ ದೇವಾಲಯವನ್ನು ನಿರ್ಮಿಸಿದರೆ ಚೆನ್ನಾಗಿರುತ್ತದೆ ಎಂದು ವಿಷ್ಣುವರ್ಧನ ಭಾವಿಸಿದ. ಇದುವರೆವಿಗೂ ನಿರ್ಮಿತವಾದ ದೊಡ್ಡ ಗದ್ದುವಳ್ಳಿಯ ದೇವಾಲಯಕ್ಕಿಂತಲೂ ಭವ್ಯವಾದ ಸೌಂದರ್ಯದಿಂದ ಜಗತ್ತನ್ನು ಆಕರ್ಷಿಸಬೇಕೆಂದು ಮಹಾರಾಜರು ಆಶಿಸಿದ್ದರು. ಇಂತಹ ದೊಡ್ಡ ಸಂಕಲ್ಪದೊಂದಿಗೆ ವಿಷ್ಣುವರ್ಧನ ಮಹಾರಾಜನು ವೇಲಾಪುರಿಯ ದೇವಾಲಯದ ನಿರ್ಮಾಣವನ್ನು ಕೈಗೊಂಡ. ಅದಕ್ಕೆ ತಕ್ಕಂತೆಯೇ ತನ್ನನ್ನು ಈ ಕೆಲಸಕ್ಕೆ ಪ್ರೇರೇಪಿಸಿದ ರಾಮಾನುಜಾಚಾರ್ಯರಿಗೂ ಮೆಚ್ಚುಗೆಯಾಗಿರುವ ಮಹಾತಪಸ್ವಿ ವಿಶ್ವರೂಪ ಸ್ಥಪತಿ - ಎರಡನೆಯ ಜಕ್ಕಣಾಚಾರ್ಯನೇ ಅವರಿಗೆ ಪ್ರಧಾನ ಸ್ಥಪತಿಯಾಗಿ ಲಭಿಸಿದ್ದ. ಆತನೂ ನಾಗಲಿಂಗಸ್ಥಪತಿಗಳ ಶಿಷ್ಯನಾಗಿದ್ದನಂತೆ. ಜಕ್ಕಣಾಚಾರ್ಯನ ಸಹಾಧ್ಯಾಯಿಯಾಗಿದ್ದನಂತೆ. ಇದರಿಂದ ಮಹಾರಾಜನಿಗೆ ತುಂಬಾ ಸಂತೋಷವೇ ಆಗಿತ್ತು. ಆದ್ದರಿಂದ ಅವರ ಸಂಕಲ್ಪ ಮತ್ತಷ್ಟು ದೃಢವಾಯಿತು.

ಇನ್ನೂ ದೇಶದ ಮೂಲೆ ಮೂಲೆಗಳಿಂದಲೂ ಶಿಲ್ಪಚೂಡಾಮಣಿಗಳನ್ನು ಆಹ್ವಾನಿಸುತ್ತಿದ್ದರು. ಚಿತ್ರಕಲಾ ಕುಶಲಿಗಳು, ಭೂಪರಿಶೋಧನಾ ದಕ್ಷರು, ಶಿಲಾಪರೀಕ್ಷಣಾ ವಿಚಕ್ಷಣರು, ವಾಸ್ತು ವಿಜ್ಞಾನ ಖನಿಗಳು, ಗೋಪುರ ನಿರ್ಮಾಣ ನಿಪುಣರು, ಕಲ್ಲಿನಲ್ಲಿ ಕುಸುರಿ ಕೆಲಸ ಮಾಡುವ ಶಿಲ್ಪಿಗಳು ಹೀಗೆ ಬಹುವಿಧ ರೂಪಾಚಾರ್ಯರು ಅಲ್ಲಿಗೆ ಬರುತ್ತಿದ್ದರು. **ರೂಪಕಾರ ಮದನ ಮಹೇಶ** ದಾಸೋಜ. ಆತನ ಮಗ **ರೂಪಕಾರ ಶರಭ ಭೇರುಂಡ** ಚಾವಣಾಚಾರ್ಯ, ತ್ರಿಭುವನ ಮಲ್ಲರಾಜನ ಆಸ್ಥಾನ ಶಿಲ್ಪಿಯಾದ **ರೂಪಕಾರರ ಗಂಡ** ಚಿಕ್ಕಹಂಪಾಚಾರ್ಯ, **ರೂವಾರಿ ಪುಲಿ, ರೂಪಕಾರಿ ಗಿರಿ ವಜ್ರದಂಡ** ಮಲ್ಲಿಯಣ್ಣ, **ರೂವಾರಿಗಳ ಗಂಡ ಗತ್ತರಿ** ಪದರಿ ಮಲ್ಲೋಜ, **ರೂವಾರಿ ಜಗದಳ** ನಾಗೋಜ, ಮಾಯಾಣಾಚಾರ್ಯ, ಕುಮಾರಮಾಚಾರ್ಯ, ಮಲಿಯಣಾಚಾರ್ಯ, ಕೇಶವ ದೇವಾಚಾರ್ಯ ಮೊದಲಾದ ಮಹಾಶಿಲ್ಪಿಗಳು ಈ ದೇವಾಲಯದ ನಿರ್ಮಾಣಕ್ಕೆ ನೆರವಾಗಿ ನಿಂತರು.

ಪ್ರಧಾನ ಸ್ಥಪತಿ ನಿರ್ಣಯಿಸಿದ್ದ ಮುಹೂರ್ತದಲ್ಲಿಯೇ ಅವರ ಮೇಲ್ವಿಚಾರಣೆಯಲ್ಲಿಯೇ ಶಂಕುಸ್ಥಾಪನೆ ನೆರವೇರಿತ್ತು. ಯಾರಿಗೆ ಯಾವಕಾರ್ಯ ಸೂಕ್ತವೆಂಬುದನ್ನು ಮೊದಲೇ ತೀರ್ಮಾನಿಸಿದ್ದಂತೆ ವಹಿಸಿಕೊಟ್ಟಿದ್ದ ಸ್ಥಪತಿ. ಶಿಲಾಪರೀಕ್ಷೆಗಾಗಿ ಶಿಲಾ ಪರೀಕ್ಷಾ ಶಾಸ್ತ್ರದಲ್ಲಿ ಬಹುವಾದ ಅನುಭವವಿದ್ದ ಮಹಾಶಿಲ್ಪಿ ದಾಸೋಜ ನಿಯಮಿಸಲ್ಪಟ್ಟ.

ಶಿಲಾ ಪರೀಕ್ಷೆ ಬಹು ಕಷ್ಟತರವಾದ ಕಾರ್ಯ. ದೀರ್ಘವಾದ ಅನುಭವ, ಸೂಕ್ಷ್ಮವಾದ ಗ್ರಹಣಶಕ್ತಿ ಇರಬೇಕು. ಶಿಲೆಗಳಲ್ಲಿ ಇರುವ ಭೇದವನ್ನು ಅರಿತಿರಬೇಕು. ಶಿಲೆಗಳಲ್ಲೂ ಸ್ತ್ರೀ-ಪುಂ-ನಪುಂಸಕ ಭೇದಗಳಿವೆ. ಅನೇಕ ಗುಣ ದೋಷಗಳಿರುತ್ತವೆ. ಅವೆಲ್ಲವನ್ನೂ ಗಮನಿಸಬೇಕು. ಶಿಲೆಗಳ ಬಣ್ಣದಿಂದಲೂ, ಹೊಡೆದಾಗ ಅವು ಒಡೆಯುವ ರೀತಿಯಿಂದಲೂ ಕಲ್ಲುಗಳಲ್ಲಿಯ ಅಂತರವನ್ನು ಗುರ್ತಿಸಲಾಗುತ್ತಿದೆ. ಅವನ್ನು ಬಡಿದಾಗ ಉಂಟಾಗುವ ಶಬ್ದದಿಂದಲೂ ಅವುಗಳಲ್ಲಿ

ಉತ್ತಮ-ಮಧ್ಯಮ-ಕನಿಷ್ಠ ಭೇದಗಳನ್ನು ಗುರ್ತಿಸಲಾಗುತ್ತದೆ. ಇವುಗಳಲ್ಲಿ ಯಾವ ಜಾತಿಯ ಕಲ್ಲುಗಳು ಯಾವ ಕೆಲಸಗಳಿಗೆ ಅಥವಾ ಯಾವ ವಿಗ್ರಹಗಳ ನಿರ್ಮಾಣಕ್ಕೆ ಉಪಯೋಗಿಸಬಹುದು ಎಂಬುದರ ವಿವರ ಶಾಸ್ತ್ರದಲ್ಲಿ ದೊರೆಯುತ್ತದೆ. ಸಿದ್ಧಹಸ್ತನಾದ ಶಿಲ್ಪಿಯು ಮೊದಲಿಗೆ ಈ ಶಿಲಾ ಪರೀಕ್ಷೆಯನ್ನು ನಡೆಸದೆ ಕೆಲಸವನ್ನು ಪ್ರಾರಂಭಿಸುವುದೇ ಇಲ್ಲ. ಶಿಲಾ ಪರೀಕ್ಷೆಯ ನಂತರ ಪ್ರತಿಮಾ ನಿರ್ಮಾಣಾದಿ ಕೆಲಸಗಳು ಶಾಸ್ತ್ರೋಕ್ತ ಮಾನಗಳ ಅನ್ವಯವೇ ಮಾಡಬೇಕು. ಶಾಸ್ತ್ರವೆಂದು ಸೌಂದರ್ಯವನ್ನು ಕೈಬಿಡುವಂತಿಲ್ಲ.

ಪ್ರಧಾನ ದೇವಾಲಯಗಳೆರಡರಲ್ಲೂ ಪ್ರತಿಷ್ಠಿಸಬೇಕಾಗಿದ್ದ ವಿಜಯ ನಾರಾಯಣ ಸ್ವಾಮಿ ಮತ್ತು ಚನ್ನಕೇಶವ ಸ್ವಾಮಿ ಎರಡೂ ಮೂರ್ತಿಗಳನ್ನು ಶಾಸ್ತ್ರವಿಧಿಯಂತೆ ವಿಶ್ವರೂಪ ಸ್ಥಪತಿಯೇ ನಿರ್ಮಿಸುತ್ತಿದ್ದ. ವಿಜಯ ನಾರಾಯಣ ದೇವಾಲಯವನ್ನು ವಿಷ್ಣುವರ್ಧನ ಮಹಾರಾಜರು, ಚನ್ನಕೇಶವ ದೇವಾಲಯವನ್ನು ಪಟ್ಟಮಹಿಷಿ ಶಾಂತಲಾದೇವಿಯವರು ಕಂಕಣ ಧಾರಿಗಳಾಗಿ ನಿರ್ಮಿಸುತ್ತಿದ್ದರು.

ಕೆಲವು ವರ್ಷಗಳ ತೀವ್ರ ಕೃಷಿಯ ಫಲವಾಗಿ ವೇಲಾಪುರಿಯ ಚನ್ನಕೇಶವ ಸ್ವಾಮಿ ದೇವಾಲಯವು ರೂಪುಗೊಳ್ಳುತ್ತಿತ್ತು. ಆ ದೇವಾಲಯಗಳು ಇತರ ಎಲ್ಲಾ ದೇವಾಲಯಗಳಿಗೂ ಬಹು ಸುಂದರವಾಗಿ ಹೊಯ್ಸಳ ಕಲೆಯ ಮಕುಟ ಮಣಿಯಂತೆ ರೂಪುಗೊಳ್ಳುತ್ತಿದ್ದವು ಎಂದರೂ ತಪ್ಪಲ್ಲ. ಇದುವರೆವಿಗೂ ಹಲವು ದೇವಾಲಯಗಳನ್ನು ನಿರ್ಮಿಸಿದ್ದ ಶಿಲ್ಪಿಗಳು ಇದರ ನಿರ್ಮಾಣದಲ್ಲಿ ಭಾಗವಹಿಸಿದ್ದುದರಿಂದ ಅವರ ಸಿದ್ಧಹಸ್ತಗಳು ವಿಶ್ವರೂಪ ಸ್ಥಪತಿಗಳ ನಿರ್ದೇಶನದಲ್ಲಿ ಅತ್ಯುತ್ತಮ ಶಿಲ್ಪಕೃತಿಗಳನ್ನು ಸಿದ್ಧಪಡಿಸುತ್ತಿದ್ದವು. ಇನ್ನೂ ಮುಗಿಯಬೇಕಾಗಿರುವ ದೇವಾಲಯವೇ ಬಹು ಸುಂದರವೆನಿಸುವಂತಿತ್ತು. ದೇವಾಲಯದ ಕೆಲಸಗಳು ಮುಗಿಯುತ್ತಾ ಬಂದು ಪ್ರತಿಷ್ಠಾ ಕಾಲವು ಸಮೀಪಿಸುತ್ತಾ ಬರುತ್ತಿರುವಂತೆ ವಿಷ್ಣುವರ್ಧನ ಮಹಾರಾಜನ ತನ್ನ ಮಕ್ಕಳಾದ ನರಸಿಂಹ, ವರ್ಧಮಾನ, ರಾಣಿಯರಾದ ಶಾಂತಲಾದೇವಿ, ಸಹಜಾದೇವಿ, ಕೀರ್ತಿಮತಿಗಳೊಂದಿಗೆ ದೇವಾಲಯದ ಶಿಲ್ಪ ಸೌಂದರ್ಯವನ್ನು ದರ್ಶಿಸಲೆಂದು ಬಂದ. ಮಹಾರಾಜನಿಗೆ ಆತನ ಕುಟುಂಬಕ್ಕೆ ವಿಶ್ವರೂಪ ಸ್ಥಪತಿಯೇ ಸ್ವಾಗತವನ್ನು ಬಯಸಿ ಅವರಿಗೆ ಇಂತು ವಿವರಿಸಿದ:

"ಪ್ರಭುಗಳು ಪರಾಂಬರಿಸಬೇಕು. ಈ ದೇವಾಲಯವನ್ನು ನೂತನವಾದ ವಾಸ್ತು ಪದ್ಧತಿಯಲ್ಲಿ ನಿರ್ಮಿಸಲಾಗಿದೆ. ನಮ್ಮ ಹೊಯ್ಸಳ ರಾಜ್ಯದ ದೇವಾಲಯ ವಾಸ್ತು ಪದ್ಧತಿಗೂ ಇದಕ್ಕೂ ಬಹಳವಾದ ಭೇದವಿದೆ. ಹಾಗೆಂದರೆ ನಾನು ನಮ್ಮ ಶಿಲ್ಪದ ಶೈಲಿಯಲ್ಲಿ ವೈಶಿಷ್ಟ್ಯತೆ ಇಲ್ಲ ಎಂದು ಹೇಳುತ್ತಿಲ್ಲ. ದೇವಾಲಯದ ಕೆಳ ಭಾಗದಲ್ಲಿ ಆನೆಗಳ ಪಟ್ಟಿಕೆ ಇದೆ. ಅದರ ಮೇಲೆ ಭಯಂಕರ ಸಿಂಹಗಳ ಸಾಲು. ಪೂರ್ವ ದ್ವಾರದ ಇಕ್ಕೆಲಗಳಲ್ಲೂ ದ್ವಾರಪಾಲಕರನ್ನು ಮಹಾರಾಜರು ಗಮನಿಸಬೇಕು. ಅವರ ಅಂದ ಚೆಂದ, ಭಂಗಿಗಳನ್ನು ನೋಡಿ, ಅಲ್ಲಿಯೇ ಮೇಲೆ ಹೊಯ್ಸಳ ಲಾಂಛನವನ್ನು ನೋಡಿ. ಮೃಗೇಂದ್ರನನ್ನು ಸೀಳುತ್ತಿರುವ ಮಹಾಸಿಂಹ ಪರಾಕ್ರಮಿಗಳಾದ ಹೊಯ್ಸಳ ವಂಶದ ಮೂಲ ಪುರುಷರಾದ ಸಳ ಮಹಾರಾಜರನ್ನು ನೋಡಿ. ಇಲ್ಲಿಯೇ ಬಳಿಯಲ್ಲಿರುವ ರತಿ ಮನ್ಮಥರ ಮೂರ್ತಿಗಳನ್ನು ಗಮನಿಸಿ. ನಾಲ್ಕುಕಡೆ ಹೊರಗೆ ಇರುವ ದೇವಾಲಯದ ಗೋಡೆಗಳನ್ನು ಬಹು ಸುಂದರವಾದ ಮೂರ್ತಿಗಳಿಂದ ಅಲಂಕರಿಸಲಾಗಿದೆ. ಈ ಕಡೆಗೆ ಇರುವ

ಈ ಮೂರ್ತಿಗಳೆಲ್ಲಾ ಶಿವಸಂಬಂಧವಾದುವು. ನಂತರದ್ದು ವಿಷ್ಣು ಸಂಬಂಧವಾದವು. ಈ ದೇವಾಲಯದಲ್ಲಿ ಶಾಸ್ತ್ರೀಯವಾಗಿ ಗರ್ಭಗುಡಿ, ಸುಕನಾಸಿ, ನವರಂಗ ಮುಂತಾದ ಮುಖ್ಯ ಭಾಗಗಳು ಇವೇ. ಪೂರ್ವದ ಬಾಗಿಲಿನ ಮೇಲೆ ಹಿರಣ್ಯ ಕಶ್ಯಪನನ್ನು ಕೊಲ್ಲುತ್ತಿರುವ ನರಸಿಂಹಸ್ವಾಮಿಯನ್ನು ರೂಪಿಸಲಾಗಿದೆ. ಅಲ್ಲಿಯೇ ಗಜಾಸುರನನ್ನು ಮರ್ದಿಸಿದ ಶಿವನ ಅವತಾರವೂ ಚಿತ್ರಿತವಾಗಿದೆ. ಪಶ್ಚಿಮದ ಗೋಡೆಯ ಮೇಲಣ ರತಿ ಮನ್ಮಥರನ್ನು, ಪ್ರತ್ಯೇಕವಾಗಿರುವ ಈ ರತಿದೇವಿಯನ್ನು ನೋಡಿ. ಮುಂದಿನ ಗೋಡೆಯ ಮೇಲೆ ತಮ್ಮ ಒಡ್ಡೋಲಗದ ಛಾಯಾಂಕನ ಮಾಡಿದ್ದಾನೆ ನಮ್ಮ ಮಲ್ಲೋಜ ಶಿಲ್ಪಿ.

"ಭುವನೇಶ್ವರೀ ಚಕ್ರವೆಂದು ಕರೆಯಲ್ಪಡುವ ವಿತಾನಕ್ಕೆ ಆಧಾರವಾಗಿರುವ ಮಧ್ಯೆ ಇರುವ ನಾಲ್ಕು ಸ್ತಂಭಗಳ ಮೇಲೆ ಶಿಲ್ಪಗಳೂ ಇವೆ. ಇವುಗಳಲ್ಲಿ ಮೋಹಿನೀ ಸ್ತಂಭ, ನರಸಿಂಹ ಸ್ತಂಭಗಳು ಬಹು ಶ್ರೇಷ್ಠವಾದುವು. ಅವನ್ನು ಗಮನಿಸಬೇಕು. ಈ ನರಸಿಂಹ ಸ್ತಂಭದ ಮೇಲೆ ಬಹು ಸೂಕ್ಷ್ಮವಾದ ಅಲಂಕಾರಗಳಿವೆ. ತ್ರಿಮೂರ್ತಿಗಳು, ನಾನಾ ಅವತಾರಗಳು, ಸೃಷ್ಟಿಯಲ್ಲಿರುವ ಹಲವು ಬಗೆಯ ಸ್ಥಾವರ ಜಂಗಮಗಳು, ವೃಕ್ಷ ಲತಾ ಪುಷ್ಪಾದಿಗಳು ಪಶುಪಕ್ಷಿಗಳು ಬಹು ಅದ್ಭುತ ರೀತಿಯಲ್ಲಿ ಕಂಡರಿಸಲ್ಪಟ್ಟಿವೆ. ಭುವನೇಶ್ವರೀ ಚಕ್ರ (ವಿತಾನ)ದ ಮಧ್ಯದಲ್ಲಿರುವ ಉಗ್ರನರಸಿಂಹನನ್ನು, ಸುತ್ತಲೂ ಇರುವ ದೇವಕನ್ಯೆಯರನ್ನು ನೋಡಿ, ಚಿಕ್ಕಹಂಪಾಚಾರ್ಯ, ನಾಗೋಜ ಇಬ್ಬರೂ ಈ ವಿಧಾನವನ್ನು ಕಂಡರಿಸಿದ್ದಾರೆ.

"ಪ್ರಭುಗಳು ನವರಂಗ ಮಧ್ಯಸ್ತಂಭಗಳಲ್ಲಿ ಮತ್ತು ಇತರ ಪ್ರದೇಶಗಳಲ್ಲಿ ಕಂಡರಿಸಿರುವ ಮದನಿಕೆಯರನ್ನು ಪರಿಶೀಲಿಸಬೇಕು. ಅವುಗಳಲ್ಲಿ ಕೆಲವು ನಾಟ್ಯಭಂಗಿಗಳಲ್ಲಿವೆ ಮತ್ತೆ ಕೆಲವು ಮದ್ದಳೆ ಮುಂತಾದ ವಾದ್ಯಗಳನ್ನು ನುಡಿಸುತ್ತಿವೆ. ಆ ಸುಂದರ ಮೂರ್ತಿಗಳ ಸೊಗಸು ವಯ್ಯಾರ, ಅಂಗಭಂಗಿ ವಿಶೇಷಗಳನ್ನು ತಾವು ಪರಾಂಬರಿಸಬೇಕು. ಇದನ್ನು ನಮ್ಮ ಯುವ ಶಿಲ್ಪಿಗಳು ಕಂಡರಿಸಿ ತಮ್ಮ ಕಲಾಕೌಶಲ್ಯವನ್ನು ವ್ಯಕ್ತಪಡಿಸಿದ್ದಾರೆ"

ನಂತರ ಆ ಪ್ರಧಾನ ಸ್ಥಪತಿಯು ದೇವಾಲಯ ಹೊರಭಾಗದಲ್ಲಿದ್ದ ಶಿಲ್ಪ ವಿಶೇಷಗಳನ್ನು ಹೀಗೆ ವಿವರಿಸಿದ :

"ದೇವಾಲಯದ ಗೋಡೆಗಳ ಮೇಲೆ ನಿರ್ಮಿಸಿರುವ ದೇವತಾ ಮೂರ್ತಿಗಳು ಬಹು ಸುಂದರವಾಗಿರಬೇಕು. ಇದರಲ್ಲಿ ಭಾರತ ರಾಮಾಯಣಾದಿ ಪುರಾಣ-ಇತಿಹಾಸದ ಕತೆಗಳನ್ನು, ಲೌಕಿಕ ವಿಷಯಗಳನ್ನು ಕಂಡರಿಸಲಾಗಿದೆ. ಇಲ್ಲಿ ಶಿವ ಪಾರ್ವತಿಯರು, ಲಕ್ಷ್ಮೀ ನಾರಾಯಣರು, ಸೂರ್ಯ, ಜನಾರ್ದನ, ಮಾಧವ, ಹರಿಹರ, ವಾಮನ, ನರಸಿಂಹ, ಸ್ಮಶಾನ ಕಾಳಿ, ರಾವಣ ಇತ್ಯಾದಿ ಮೂರ್ತಿಗಳಿವೆ. ಉತ್ತರದ ಗೋಡೆಯ ಮೇಲೆ ಚಾಮುಂಡೇಶ್ವರೀ, ಮಹಿಷಾಸುರ ಮರ್ಧಿನೀ, ದಕ್ಷ, ವರಾಹ, ಚತುರ್ಮುಖ, ನಾಗರಾಜ, ಕೇಶವ, ನಟರಾಜ, ಸೂರ್ಯನಾರಾಯಣ ಮುಂತಾದ ಮೂರ್ತಿಗಳನ್ನು ನೋಡುತ್ತೀರಿ. ಈ ಕಡೆ ಈ ಸುಂದರಾಂಗನೆಯು ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುತ್ತಿದ್ದಾಳೆ. ಈಕೆ ತಾಂಬೂಲವನ್ನು ಹಾಕಿಕೊಳ್ಳುತ್ತಿದ್ದಾಳೆ. ಆಲೀಢಾಪಾದನಾಗಿ ಬಿಲ್ಲನ್ನು ಎತ್ತಿ ಹಿಡಿದು ಬಾಣ ಪ್ರಯೋಗ ಮಾಡುತ್ತಿರುವ ಈ ಶೂರನನ್ನು ಗಮನಿಸಿ. ನೃತ್ಯ ಮಾಡುತ್ತಿರುವ ಈ ಜಗದೇಕ ಸುಂದರಿಯನ್ನು ನೋಡಿ. ಪಕ್ಕದಲ್ಲಿಯೇ ಇರುವ

ಕೋತಿಯು ಆಕೆಯ ದುಕೂಲವನ್ನು ಸೆಳೆಯುತ್ತಿದೆ. ಚೇಟಿ ಅದನ್ನು ಓಡಿಸುತ್ತಿದ್ದಾಳೆ. ಈ ಕಾಮಿನಿ ಸ್ನಾನ ಮಾಡಿ ತಲೆಗೂದಲನ್ನು ಹಿಂಡುತ್ತಿದ್ದಾಳೆ. ಕೆಳಕ್ಕೆ ಸುರಿಯುತ್ತಿರುವ ನೀರ ಹನಿಗಳನ್ನು ಗಮನಿಸಿದಿರಾ ? ಇವೆಲ್ಲಾ ಭರತ ಶಾಸ್ತ್ರಕ್ಕೆ ಉದಾಹರಣೆಯಾಗಿರುವ ಪ್ರತಿಮೆಗಳು. ಅವುಗಳ ಅಂಗ ಭಂಗಿಗಳನ್ನು, ರಸ ಭಾವಗಳನ್ನು, ಒಯ್ಯಾರಗಳನ್ನು ಅಭಿನಯವನ್ನು ಗಮನಿಸಬೇಕು".

ಇಂತು ದೇವಾಲಯವನ್ನೆಲ್ಲಾ ಸಮಗ್ರವಾಗಿ ಅವರಿಗೆ ತೋರಿಸಿದ ವಿಶ್ವರೂಪ ಸ್ಥಪತಿ ಅಲ್ಲಲ್ಲಿ ಅಳವಡಿಸಿದ್ದ ದಿವ್ಯ ಶಿಲ್ಪಗಳನ್ನು ಕ್ರಮವಾಗಿಯೇ ಪರಿಚಯ ಮಾಡಿಸಿದ. ರಾಜಕುಟುಂಬವೆಲ್ಲಾ ಯಾವುದೋ ಸ್ವರ್ಗದಲ್ಲಿ ವಿಹರಿಸುವಂತೆ ಎಲ್ಲವನ್ನು ಮರೆತಿದ್ದರು. ರಾಜಪತ್ನಿಯರು ಪ್ರತಿಯೊಂದು ದೇವತಾ ಮೂರ್ತಿಗೂ ನಮಸ್ಕರಿಸುತ್ತಾ ಇದ್ದರು.

ವಿಷ್ಣುವರ್ಧನ ಮಹಾರಾಜ ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತಾ ಶಿಲ್ಪಾಚಾರ್ಯನಿಗೆ ಇಂತು ಹೇಳಿದ :

"ಸ್ಥಪತಿಗಳೇ, ತಾವು ಬಹು ಅದ್ಭುತವಾದ ಸೃಷ್ಟಿಯನ್ನು ಮಾಡಿದ್ದೀರಿ. ಹೊಯ್ಸಳೇಶ್ವರ ದೇವಾಲಯಕ್ಕಿಂತಲೂ ಇದು ಬಹು ಅದ್ಭುತವಾಗಿದೆ. ಈ ಸ್ತಂಭಗಳು ಬಹು ಸುಂದರವಾಗಿವೆ. ಎಷ್ಟು ಬಗೆಯ ಸ್ತಂಭಗಳನ್ನು ನಿರ್ಮಿಸಿದ್ದೀರಿ ! ಮುಖ್ಯವಾಗಿ ಈ ನರಸಿಂಹಸ್ತಂಭವು ನೋಡಲೇ ಬೇಕಾದುದು. ಮೋಹಿನಿ ಸ್ತಂಭದಲ್ಲಿಯ ಮೋಹಿನಿಯು ಇಷ್ಟೊಂದು ಸುಂದರಿಯಾದುದರಿಂದಲೇ ಪರಶಿವನನ್ನು ಆಕರ್ಷಿಸಿದಳು. ಹರಿಹರ ಮೂರ್ತಿ ಶೈವ-ವೈಷ್ಣವಗಳನ್ನು ಸಮನ್ವಯಗೊಳಿಸುತ್ತದೆ. ಮೂರು ಕೋಟಿ ದೇವತೆಗಳೂ ಈ ದೇವಾಲಯದಲ್ಲಿ ಕಂಡರಿಸಿರುವಂತೆ ತೋರುತ್ತದೆ. ಈ ದೇವಾಲಯವನ್ನು ನೋಡುವುದೇ ಒಂದು ಆನಂದ ಎನಿಸುತ್ತದೆ. ಅನಕ್ಷರಸ್ಥರಾದರೂ, ಮಂದ ಬುದ್ಧಿಯವರಾದರೂ ಈ ದೇವಾಲಯವನ್ನು ನೋಡಿ ಚರಿತ್ರೆ, ಭಕ್ತಿ, ಜ್ಞಾನ ವೈರಾಗ್ಯಗಳನ್ನು ತಿಳಿಯಬಲ್ಲರು. ಈ ದೇವಾಲಯವನ್ನು ನೋಡಿದ ಮಾತ್ರದಿಂದಲೇ ಕಾಮ ಕ್ರೋಧಾದಿ ದುರ್ಗುಣಗಳು ನಶಿಸಿ ಶಾಂತರಸವು ವ್ಯಾಪಕಗೊಳ್ಳುತ್ತದೆ. ಮೂಲ ವಿಗ್ರಹಗಳಾದ ವಿಜಯನಾರಾಯಣ, ಚನ್ನಕೇಶವ ಮೂರ್ತಿಗಳು ಅತ್ಯಂತ ಮನೋಹರವಾಗಿವೆ. ಇವನ್ನು ನೋಡುತ್ತಲೇ ಸಾಕ್ಷಾತ್ ವಿಷ್ಣುವೇ ಪ್ರತ್ಯಕ್ಷವಾದಂತೆ ಆನಂದವಾಗುತ್ತದೆ. ವಿಜಯನಾರಾಯಣ ಸ್ವಾಮಿಯ ಹಿಂಬದಿಯಲ್ಲಿ ದಶಾವತಾರವನ್ನೂ ಕಂಡರಿಸಿದ್ದೀರಲ್ಲಾ ! ಸರ್ವಂ ವಿಷ್ಣುಮಯಂ ಜಗತ್ ಎಂದು ಹೇಳುವುದು ಇದಕ್ಕೇನೇ ? ಇಂತಹ ದೇವಾಲಯವನ್ನು ನಿರ್ಮಾಣ ಮಾಡಿಸಿದ ನಮ್ಮ ಜನ್ಮಗಳು ಮಾತ್ರವಲ್ಲ ನೋಡುವವರ ಜನ್ಮಗಳೂ ಕೂಡ ಸಾರ್ಥಕಗೊಳ್ಳುತ್ತವೆ.

"ಆನೆಗಳ ಸಾಲು, ಸಿಂಹಗಳ ಪಂಕ್ತಿ, ಲತಾಗುಲ್ಮಗಳು, ನಾನಾ ಪಕ್ಷಿಗಳು, ಎಲ್ಲವೂ ಸಹಜ ಸುಂದರವಾಗಿವೆ. ಹೊಯ್ಸಳ ಲಾಂಛನವಂತೂ ಮಾನವರಿಗೆ ಪರಾಕ್ರಮ ವ್ರತವನ್ನು ಬೋಧಿಸುವಂತಿದೆ. ನಾಟ್ಯವೇದವೇ ಇಲ್ಲಿ ರೂಪುಗೊಂಡಿದೆ. ಶಿಲ್ಪಾಚಾರ್ಯರು ಎಂತಹ ಮಹನೀಯರು ! ಮದನಿಕೆಯರನ್ನು ಎಷ್ಟು ಸುಂದರವಾಗಿ ರೂಪಿಸಿದ್ದಾರೆ. ತನ್ನ ಮುದ್ದಿನ ಗಿಣಿಗೆ ಮಾತು ಕಲಿಸುತ್ತಿರುವ ಆಕೆ, ನೃತ್ಯ ಮಾಡುತ್ತಿರುವ ಈಕೆ ಶಿಲಾಮೂರ್ತಿಗಳಂತೆ ಇಲ್ಲವಲ್ಲಾ ! ತ್ರಿಭಂಗಿಯಲ್ಲಿರುವ ಈಕೆಯ ಕಾಲಿನ ಬಳಿ ಚೇಳನ್ನು ಎಷ್ಟು ಸಹಜವಾಗಿ ಕಂಡರಿಸಿದ್ದಾರೆ. ಲೋಕವೃತ್ತಿಗಳನ್ನೂ ಇಲ್ಲಿ ಬಹು ಸುಂದರವಾಗಿ ರೂಪಿಸಿದ್ದಾರೆ.

"ಚನ್ನಕೇಶವ ಮೂರ್ತಿಗೆ ಚೆಲುವ ಚೆನ್ನಿಗ ಎಂಬ ಹೆಸರು ಸಾರ್ಥಕವಾಗಿದೆ.

"ಮಹಾ ಸ್ಥಪತಿಗಳೇ, ನೀವು-ನಿಮ್ಮ ಶಿಲ್ಪಿಗಳ ಈ ವೃಂದವು ಸಾಧಾರಣ ಮಾನವರೆಂದು ನನಗೆ ಭಾಸವಾಗುತ್ತಿಲ್ಲ. ನಿಮಗೇನು ಕೊಟ್ಟು ತಾನೇ ನಾವು ಈ ಋಣದಿಂದ ಪಾರಾಗ ಬಲ್ಲೆವು ? ಇಂತಹ ಶಿಲ್ಪ ಚಕ್ರವರ್ತಿಯನ್ನು ಹೆತ್ತ ಕನ್ನಡಾಂಬೆ ಧನ್ಯಳು. ನಮ್ಮ ಎಲ್ಲ ಪ್ರಜೆಗಳು ಧನ್ಯರು. ಕಲಾದೃಷ್ಟಿಯಿಂದ ನೋಡಿದರೆ ಮಾನವ ಲೋಕವೇ ಧನ್ಯವಾಗಿದೆ"

ಎಂದು ಮಹಾರಾಜ ತನ್ನ ಮೆಚ್ಚುಗೆಯನ್ನು ಸೂಚಿಸಿದ. ವಿಶ್ವರೂಪ ಸ್ಥಪತಿಗೂ ಮಹಾರಾಜ ತೃಪ್ತಿಗೊಂಡನೆಂಬ ವಿಷಯ ಸಂತೋಷವನ್ನುಂಟುಮಾಡಿತು.

ಈ ಶಿಲ್ಪಗಳನ್ನು ನೋಡಿದ ನಂತರ ಕೀರ್ತಿಮತಿಯಲ್ಲಿ ಹೊಸ ಬದಲಾವಣೆ ಕಾಣಿಸಿತು. ಇದುವರೆವಿಗೂ ಆಕೆಯ ಹೃದಯದಲ್ಲಿದ್ದ ಅಸೂಯೆ ದ್ವೇಷ ಮುಂತಾದ ಕಲುಷಿತ ಭಾವನೆಗಳು ದಗ್ಧವಾದವು. ಸ್ವಾರ್ಥವು ನಶಿಸಿತು. ರಾಜಕುಮಾರನಿಗೆ, ಪಟ್ಟದರಸಿಗೆ ತಾನು ಬಯಸಿದ ವಿನಾಶ ಕೇವಲ ಅಜ್ಞಾನ ಜನ್ಯವೆಂಬುದು ಈಗ ಸ್ಫುರಿಸಿತ್ತು. **ಸದ್ಗುಣ, ಸದಾಚಾರ ಇಲ್ಲದ ಸೌಂದುಕು ನಿರ್ಗಂಧ ಕುಸುಮದಂತೆ** ಎಂಬುದು ಆಕೆಗೆ ಗೊತ್ತಾಗಿತ್ತು.

## ೧೬

ವೇಲಾಪುರಿ ದೇವಾಲಯದಲ್ಲಿ ಹೇವಿಳಂಬಿ ಸಂವತ್ಸರ ಚೈತ್ರ ಶುದ್ಧ ಪಂಚಮಿ ಸೋಮವಾರ ವಿಜಯ ನಾರಾಯಣನ ಪ್ರತಿಷ್ಠೆ ನಡೆಸಲು ಮುಹೂರ್ತವನ್ನು ನಿರ್ಣಯಿಸಲಾಯಿತು. ಹೊಯ್ಸಳ ರಾಜ್ಯವು ಇದುವರೆವಿಗೂ ಸಾಧಿಸಿದ ವಿಜಯದ ಸ್ಮಾರಕವಾಗಿ ಈ ದೇವ ಪ್ರತಿಷ್ಠೆಯನ್ನು ನಡೆಸಲಾಗುತ್ತಿತ್ತು. ದೇವನನ್ನು ವಿಜಯನಾರಾಯಣ ಎಂದು ಕರೆಯಲಾಗಿತ್ತು. ಪ್ರತಿಷ್ಠಾ ಮಹೋತ್ಸವಕ್ಕೆ ರಾಮಾನುಜಾಚಾರ್ಯರನ್ನು ಆಹ್ವಾನಿಸಲಾಗಿತ್ತು. ವೀರಬಲ್ಲಾಳ ಮಹಾರಾಜನ ವೈದಿಕ ಮತಕ್ಕೆ ಪರಿವರ್ತಿತಗೊಂಡಿದ್ದು ರಾಜ್ಯದ ಅನೇಕರಿಗೆ ಸಂತೋಷದ ವಿಷಯವಾಗಿತ್ತು. ಕೆಲವರಿಗೆ ಇದು ಪ್ರಿಯವೆನಿಸಲಿಲ್ಲ. ಆದರೆ ಎಲ್ಲರಿಗೂ ರಾಜ್ಯದಲ್ಲಿ ನಡೆಯುತ್ತಿದ್ದ ಶಿಲ್ಪಕಲಾ ಪ್ರಗತಿ ಸಂತೋಷಜನಕವಾಗಿತ್ತು.

'ವೀರ ಬಲ್ಲಾಳ ಮಹಾರಾಜ ಜೈನನಾಗಿರಲಿ, ವೈಷ್ಣವನಾಗಿರಲಿ ಶಿಲ್ಪವನ್ನು ಮಾತ್ರ ನಿರಂತರವಾಗಿ ಆರಾಧಿಸುತ್ತಾ ಬಂದಿದ್ದಾನೆ. ಈ ಶಿಲ್ಪವು ಹೊರಗಣ್ಣುಗಳಿಗೆ ತನ್ನ ಸೌಂದರ್ಯದಿಂದ ಸಂತೋಷವನ್ನು ನೀಡುವುದರೊಂದಿಗೆ ಜ್ಞಾನ-ವಿಜ್ಞಾನಗಳನ್ನೂ ಉಪದೇಶಿಸಿ ಪರಮಾತ್ಮ ಸಾಕ್ಷಾತ್ಕಾರಕ್ಕೆ ಕಾರಣವಾಗುತ್ತದೆ. ಇಂತಹ ಕೆಲಸ ಯಾರಿಗೆ ಪ್ರಿಯವಾಗುವುದಿಲ್ಲ ? ಈ ಶಿಲ್ಪದಿಂದ ಹೊಯ್ಸಳ ರಾಜ್ಯಕ್ಕೆ ಇತಿಹಾಸದಲ್ಲಿ ಅಪೂರ್ವವಾದ ಚಿರಸ್ಥಾಯಿಯಾದ ಹೆಸರು ಲಭಿಸುತ್ತದೆ' ಎಂದು ಸಂತೋಷದಿಂದ ಹೇಳುತ್ತಿದ್ದರು.

ಪ್ರತಿಷ್ಠೆಗೆ ಮೊದಲು ಆ ದಿವ್ಯ ಮಂಗಳ ವಿಗ್ರಹಗಳನ್ನು ನೋಡಬೇಕೆಂದು ಜನರು ತಂಡೋಪತಂಡವಾಗಿ ಅಲ್ಲಿಗೆ ಬರುತ್ತಿದ್ದರು.

ಕುಮಾರ ಶಿಲ್ಪಿ ಡಂಕಣಾಚಾರ್ಯನು ತನ್ನ ತಂದೆಗಾಗಿ ಗ್ರಾಮ, ಪಟ್ಟಣಗಳನ್ನೆಲ್ಲಾ ಸುತ್ತುತ್ತಾ, ಎಲ್ಲಿ ಸುಂದರವಾದ ಹೊಸ ದೇಗುಲ ಕಂಡರೆ ಅಲ್ಲಿ ಅದರ ನಿರ್ಮಾಪಕರ ಬಗ್ಗೆ, ಶಿಲ್ಪಿಗಳ ಬಗ್ಗೆ ವಿವರಗಳನ್ನು ಶೇಖರಿಸುತ್ತಾ ತಂದೆಯ ಸುಳಿವನ್ನು ಕಾಣದೆ ನಿರಾಶನಾಗಿ ಮುಂದೆ ಸಾಗುತ್ತಿದ್ದ. ಈ ರೀತಿಯಾಗಿ ಆತ ಚೋಳರಾಜ್ಯವನ್ನು ಸುತ್ತಿದ್ದ. ಪಾಂಡ್ಯ ರಾಜ್ಯದಲ್ಲಿ ಹುಡುಕಿದ, ದಕ್ಷಿಣಾಂಧ್ರ ಪ್ರದೇಶವನ್ನು ಪರಿಶೀಲಿಸಿ. ಕರ್ನಾಟಕವನ್ನು ಪ್ರವೇಶಿಸಿದ. ಮಹಿಷಪುರಿಯಲ್ಲಿ, ವೇಲಾಪುರಿಯಲ್ಲಿ ನಿರ್ಮಾಣವಾಗಿರುವ ಅದ್ಭುತ ದೇವಾಲಯದ ಸೌಂದರ್ಯದ ಬಗ್ಗೆ ಕೇಳಿದ. ವಿಷ್ಣುವರ್ಧನ ಮಹಾರಾಜ ವಿಶ್ವರೂಪ ಸ್ಥಪತಿಯ ನೇತೃತ್ವದಲ್ಲಿ ಈ ಅಪೂರ್ವ ದೇವಾಲಯವನ್ನು ನಿರ್ಮಾಣಮಾಡುತ್ತಿದ್ದಾನೆ ಎಂಬುದು ಗೊತ್ತಾಯಿತು. ಆ ದೇವಾಲಯವು ಅತ್ಯದ್ಭುತವಾಗಿದ್ದು ಭೂಲೋಕದ ವೈಕುಂಠದಂತಿದೆ ಎಂಬುದನ್ನು ಕೇಳಿದ. ವಿಶ್ವರೂಪ ಸ್ಥಪತಿ ಮಹಾತಪಸ್ವಿಯಾಗಿದ್ದು, ಜಕ್ಕಣಾಚಾರ್ಯನಿಗೆ ಸಮಾನನಾದವನೆಂದು, ಎರಡನೆಯ ವಿಶ್ವಕರ್ಮನಂತೆ ದೇವಾಲಯವನ್ನು

ರ್ಮಿಸಿದ್ದಾನೆ ಎಂದು ಜನರು ಹೇಳಿಕೊಳ್ಳುತ್ತಿದ್ದರು. ದೇವಾಲಯವನ್ನು ದರ್ಶಿಸಲು ತಂಡೋಪ ಂಡವಾಗಿ ಜನರು ವೇಲಾಪುರಿಗೆ ಹೋಗುತ್ತಿದ್ದರು. ಅವರ ಹಿಂದೆಯೇ ಡಂಕಣಾಚಾರ್ಯನೂ ೀಲಾಪುರಿಯತ್ತ ಪ್ರಯಾಣ ಬೆಳಸಿದ.

ವೇಲಾಪುರಿಯಲ್ಲಿದ್ದ ನೂತನ ದೇವಾಲಯವನ್ನು ಸಾಂಗೋಪಾಂಗವಾಗಿ ಪರಿಶೀಲಿಸಿ ೋಡಲು ಪ್ರಾರಂಭಿಸಿದವನು ಅಲ್ಲಿಯ ಶಿಲ್ಪಸೌಂದರ್ಯಕ್ಕೆ ದಿಗ್ಭ್ರಾಂತನಾದ. ತಾನು ದುವರೆವಿಗೂ ನೋಡಿದ ಯಾವ ದೇವಾಲಯದಲ್ಲೂ ಇಷ್ಟೊಂದು ಕಲಾಪೂರ್ಣವೂ, ೈಭವಪೂರ್ಣವೂ ಆದ ಶಿಲ್ಪಸಂಪತ್ತು ಇರಲಿಲ್ಲ. ದ್ವಾರಸಮುದ್ರದ ವೈಶಾಲೇಶ್ವರ ದೇವಾಲಯದ ಲ್ಪಸೌಂದರ್ಯಕ್ಕಿಂತಲೂ ಇದು ಅತ್ಯಂತ ಅದ್ಭುತ. ಆದರೆ ಸಂಪ್ರದಾಯ, ಕಲಾ ಶೈಲಿಗಳು ದೇ. ಎರಡೂ ದೇವಾಲಯಗಳೂ ಒಂದೇ ಕೈಯಿಂದ ನಿರ್ಮಾಣವಾಗಿದೆ ಎಂದರೂ ಪ್ಪಬಹುದು. ಸಂಪ್ರದಾಯವಂತು ಖಚಿತವಾಗಿ ಒಂದೇ. ಹೊಯ್ಸಳೇಶ್ವರ ಆಲಯದ ರ್ಮಾಣದ ಪ್ರಜ್ಞೆಯಿಂದ ಶ್ರೀಮಂತನಾದ ಶಿಲ್ಪಾಚಾರ್ಯ ಈ ಕಲ್ಪನೆಯನ್ನು ನಡೆಸಿದ್ದಾನೆ ಎಂದರೂ ಹ ಅಂಗೀಕರಿಸಬಹುದಾದುದೇ. ತನ್ನ ತಂದೆಯ ಶಿಷ್ಯರೇ ಇಲ್ಲಿಯ ಶಿಲ್ಪಗಳನ್ನು ೂಪಿಸಿರುವುದರಿಂದ ಕಲೆಯಲ್ಲಿ ಅಂತರ ಕಾಣಿಸದೆ ಇರಬಹುದು. ಹೇಗಾದರೂ ಇರಲಿ ಇಲ್ಲಿ ಲ್ಪಕಲಾ ಸರಸ್ವತಿಯು ತನ್ನ ಅದ್ಭುತ ನಾಟ್ಯವನ್ನು ಪ್ರದರ್ಶಿಸುತ್ತಿದ್ದಾಳೆ. ಡಂಕಣಾಚಾರ್ಯ ತಾನು ಂದ ಕೆಲಸವನ್ನೇ ಮರೆತು ಅಲ್ಲಿಯ ಶಿಲ್ಪಗಳನ್ನೇ ನೋಡುತ್ತಾ ನಿಂತ. ದೇವಾಲಯದ ೊರಗೆ-ಒಳಗೆ ಇದ್ದ ಶಿಲ್ಪಗಳನ್ನು, ವಿನ್ಯಾಸಗಳನ್ನು ನೋಡಿದ ನಂತರ ಮೂಲ ವಿಗ್ರಹಗಳನ್ನು ೋಡತೊಡಗಿದ.

'ವಿಜಯನಾರಾಯಣ ಆಳೆತ್ತರದ ವಿಗ್ರಹ. ವೈಕುಂಠದಲ್ಲಿಯ ವಿಷ್ಣುಮೂರ್ತಿಗೆ ಇದು ್ರತಿಬಿಂಬವೇ. ಆ ದೇವನ ಅಂದ ಚೆಂದಗಳು ಈ ಮೂರ್ತಿಯಲ್ಲಿ ರೂಪುಗೊಂಡಿವೆ. ಶಂಖ ಕ್ರ ಗದಾ ಪದ್ಮಗಳಿಂದ ಅಲಂಕೃತವಾಗಿರುವ ಆ ತೋಳುಗಳು, ಕಿರು ನಗೆಯನ್ನು ಸೂಸುವ ುದ್ದಾದ ತುಟಿಗಳು, ಕೇಯೂರ, ಕಟಕ, ಕಿರೀಟಗಳು, ಅಬ್ಬಾ ಎಲ್ಲಾ ಎಷ್ಟು ಅದ್ಭುತವಾಗಿವೆ! .. ಚೆಲುವ ಚೆನ್ನಿಗರಾಯ ಸ್ವಾಮಿಯ ಚೆಲುವನ್ನು ವರ್ಣಿಸಲು ಆ ಆದಿಶೇಷನೇ ಬರಬೇಕು !!' ಂದು ತನ್ನಲ್ಲಿಯೇ ಹೇಳಿಕೊಳ್ಳುತ್ತಾ ಆ ಬಾಲಕ ತನ್ನ ಹಸ್ತಗಳಿಂದ ಮೆದುವಾಗಿ ಆ ಮೂರ್ತಿಯನ್ನು ವರಿದ, ಚೆನ್ನಿಗರಾಯ ಮೂರ್ತಿಯನ್ನು ಸ್ಪರ್ಶಿಸಿದಾಗ ಆ ಬಾಲಕನ ಮುಖ ಒಂದು ರೀತಿಯ ಕಾರ ಭಾವವನ್ನು ವ್ಯಕ್ತಪಡಿಸಿತು. ಇದುವರೆವಿಗೂ ಇದ್ದ ಸಂತೋಷ ರೇಖೆಗಳು ಮಾಯವಾದವು. ುಖದಲ್ಲಿ ಕೋಪಾವೇಶವು ಕಾಣಿಸಿಕೊಂಡಿತು. ಜೊತೆಯಲ್ಲಿದ್ದ ಶಿಲ್ಪಿಬಾಲರಿಗೆ "ಈ ಶಿಲೆ ೂಷಿತ ಶಿಲೆ" ಎಂದು ಗಟ್ಟಿಯಾಗಿ ಹೇಳಿದ.

ಈ ಮಾತು ಕೇಳಿದ ಅಲ್ಲಿಯವರೆಲ್ಲರೂ ಚಕಿತರಾದರು. ಹದಿನೈದು ವರ್ಷಗಳ ಬಾಲಕನೊಬ್ಬ ುಹಾಕಲಾ ಸಾರ್ವಭೌಮನ ಕೃತಿಯಲ್ಲಿ ದೋಷವನ್ನು ಕಂಡು ಹಿಡಿಯುತ್ತಿದ್ದಾನೆ ! ಕೆಲವರು ಈ ಾಲಕ ಹುಚ್ಚ ಎಂದುಕೊಂಡರು. 'ಪಾಪ, ಎಳೆಯ ಹುಡುಗನಿಗೆ ರಾಜದಂಡನೆ ತಪ್ಪದು. ುಮ್ಮನಿರಬಾರದೇ ?' ಎಂದು ಗೊಣಗಿಕೊಂಡರು.

ಈ ಸುದ್ದಿ ಬಹು ಬೇಗ ಶಿಲ್ಪಿಗಳಿಗೆ ತಲುಪಿತು. ದಾಸೋಜ ಶಿಲ್ಪಾಚಾರ್ಯನು ಬಂದ.

ಆ ಬಾಲಕ ಮಾತ್ರ ಬಹು ಬಲವಾಗಿ ಚೆನ್ನಿಗರಾಯ ಮೂರ್ತಿಯು ಲೋಪ ಭೂಯಿಷ್ಠವಾಗಿದೆ ಎಂದು ವಾದಿಸುತ್ತಲೇ ಇದ್ದ. ಅದನ್ನು ಕೇಳಿದ ಶಿಲ್ಪಾಚಾರ್ಯನಿಗೆ ಕೋಪವೂ ಬಂತು. ಆದರೂ ವಾತ್ಸಲ್ಯದಿಂದ "ಮಗು ನೀನು ಚಿಕ್ಕವನು. ಶಿಲ್ಪಶಾಸ್ತ್ರವು ಸಾಗರದಂತೆ ವಿಶಾಲವಾದುದು. ನೀನು ಇನ್ನೂ ಈಗ ಅಕ್ಷರಾಭ್ಯಾಸವನ್ನು ಪ್ರಾರಂಭಿಸಿರಬಹುದು. ನಿನಗೆ ಇನ್ನೂ ಶಿಲ್ಪ ನಿರ್ಮಾಣದ ಅನುಭವ ಆಗಿಲ್ಲ ಎಂದು ಭಾವಿಸಿದ್ದೇನೆ. ದೊಡ್ಡ ಕಾರ್ಯಗಳಲ್ಲಿ ಈ ರೀತಿ ಮಾತುಗಳನ್ನಾಡ ಬಾರದು. ಇದು ಭಯಂಕರ ಪರಿಣಾಮಗಳಿಗೆ ಹಾದಿ ಮಾಡಬಹುದು. ನೀನು ಸುಮ್ಮನಿರು" ಅನುನಯದಿಂದ ಹೇಳಿದ.

ಈ ಮಾತನ್ನು ಕೇಳಿದ ಡಂಕಣಾಚಾರ್ಯರೊಂದಿಗೆ ಬಂದಿದ್ದ ಶಿಲ್ಪಿಕುಮಾರನಾದ ಮಾಯಾಚಾರ್ಯನು "ಆಚಾರ್ಯ, ವಯಸ್ಸಿಗೂ ವಿದ್ಯೆಗೂ ಸಂಬಂಧವಿಲ್ಲ. ಒಂದೊಂದು ವಿದ್ಯಾಸಿದ್ಧಿ ಜನ್ಮಾಂತರ ಸಂಸ್ಕಾರದಿಂದ ಉಂಟಾಗುವುದು. ಆದ್ದರಿಂದ ಈತನ ವಾದವನ್ನು ನೀವೂ ಪೂರ್ಣವಾಗಿ ಕೇಳಿದ ನಂತರ ಮಾತನಾಡುವುದು ಉಚಿತ. ಒಂದೇ ಬಾರಿಗೆ ತಾವು ಹೀಗೆ ತಳ್ಳಿ ಹಾಕುವುದು ಸಾಧುವಲ್ಲ" ಎಂದು ಹೇಳಿದ.

"ಸ್ವಾಮಿ, ಶಿಲ್ಪಶಾಸ್ತ್ರವನ್ನು ನಾನು ಓದದವನೇ ಆಗಿರಲಿ, ಶಿಲ್ಪಕರ್ಮಾಭ್ಯಾಸವನ್ನು ಮಾಡದ ಅನನುಭವಿಯೇ ಆಗಿರಲಿ, ಆದರೆ ತಪ್ಪು ಕಂಡುಹಿಡಿಯಲು ವಿಶೇಷವಾದ ಪ್ರಜ್ಞೆಯ ಅವಶ್ಯಕತೆ ಇಲ್ಲ. ಅಲ್ಲವೇ ?... ನಿಜವಾಗಿಯೂ ಈ ಮೂರ್ತಿಯು ಪೂಜಾರ್ಹವೇ ಅಲ್ಲ. ಇದನ್ನು ಪ್ರತಿಷ್ಠಿಸಿದ್ದೇ ಆದರೆ ಕರ್ತ ಮತ್ತು ಕಾರಯಿತ ಇಬ್ಬರಿಗೂ ಅಪಾಯ. ಅದರೊಂದಿಗೆ ದೇಶಕ್ಕೂ ವಿಪತ್ತು !" ಎಂದ ಡಂಕಣಾಚಾರ್ಯ.

ಬಾಲಕನ ಈ ತೀವ್ರವಾದ ವಾದವನ್ನು ಕೇಳಿದವರೆಲ್ಲಾ ಚಕಿತರಾದರು. ದಾಸೋಜ ಶಿಲ್ಪಾಚಾರ್ಯನಿಗೆ ಏನು ಮಾಡಬೇಕೆಂಬುದೇ ತೋಚಲಿಲ್ಲ. ಈ ಸಂಘಟನೆಯಿಂದ ಆತ ಬಹುವಾಗಿ ವಿಚಲಿತನಾಗಿದ್ದ. ಶಿಲಾ ಪರೀಕ್ಷಾ ಕುಶಲಿಯಾದ ದಾಸೋಜನು ಎಷ್ಟು ಹೇಳಿ ಸಂತೈಸ ಬಯಸಿದರೂ ಆ ಬಾಲಕ ಸಾಂತ್ವನಗೊಳ್ಳಲೇ ಇಲ್ಲ.

ಪ್ರಧಾನ ಸ್ಥಪತಿಗೆ ಈ ವಿಷಯ ಗೊತ್ತಾಯಿತು. ಅದು ಅವರ ವಿಶ್ರಾಂತಿ ಸಮಯ. 'ತನ್ನ ಶಿಲ್ಪದಲ್ಲಿ ದೋಷವನ್ನು ಹುಡುಕಿ ಅದನ್ನು ಬಹಿರಂಗವಾಗಿ ಹೇಳುವಂತಹ ಮಹಾ ಪ್ರಜ್ಞಾವಂತ ಯಾರು ?... ಅದರಲ್ಲೂ ಅವನು ಬಾಲಕನಂತಲ್ಲಾ !...' ಎಂದುಕೊಂಡ. ಈ ಸಂಗತಿಯೇ ಆತನಿಗೆ ಬಹು ವಿಚಿತ್ರ ಎನಿಸಿತು. ದೋಷವನ್ನು ತೋರುತ್ತಿರುವನು ಬಾಲಕ ಎಂಬುದನ್ನು ಪರಿಗಣಿಸದೆ ವಿಶ್ವರೂಪ ಸ್ಥಪತಿ ಎದ್ದು ಅಲ್ಲಿಗೆ ಬಂದ.

ಡಂಕಣನೊಂದಿಗೆ ವಾಗ್ವಾದ ನಡೆಯಿತು. ಅವನು ತನ್ನ ಧೋರಣೆಯನ್ನು ಬದಲಿಸಲಿಲ್ಲ. ಮಾತಿನ ಚಕಮಕಿ ಸಾಕಷ್ಟು ದೀರ್ಘವಾಗಿದ್ದರಿಂದ ಕೊನೆಗೆ ವಿಶ್ವರೂಪಸ್ಥಪತಿ ಇಂತು ಹೇಳಿದ :

"ಮಗೂ, ಈ ಶಿಲ್ಪವು ಮಹಾರಾಜರಾದ ವಿಷ್ಣುವರ್ಧನ ವೀರಬಲ್ಲಾಳರ ಆಶ್ರಯದಲ್ಲಿ ರೂಪುಗೊಂಡಿದೆ. ಶಿಲ್ಪಶಾಸ್ತ್ರದಲ್ಲಿ ಬಹು ಪಾಂಡಿತ್ಯ ಉಳ್ಳವರೂ, ಮೇಧಾವಿಗಳೂ ಅನುಭವಜ್ಞರೂ ಆದವರೇ ಈ ಶಿಲ್ಪವನ್ನು ಕಂಡರಿಸಿದ್ದಾರೆ. ನೀನು ಬಾಲ್ಯದ ಚಪಲ ಬುದ್ಧಿ, ಚೇಷ್ಟೆಗಳಿಂದ ಈ

ಶಿಲ್ಪವನ್ನು ಅಪಮಾನಿಸುತ್ತಿದ್ದೀಯೆ. ಈ ವಿಷಯ ಮಹಾರಾಜ ಕಿವಿಗೆ ಬಿದ್ದರೆ ನಿನಗೆ ತುಂಬಾ ತೊಂದರೆಯಾಗುವುದು ಖಂಡಿತ. ಈ ಚೆಲುವ ಚನ್ನಿಗರಾಯ ಮೂರ್ತಿಯನ್ನು ನಾನೇ ಸ್ವಯಂ ಕಂಡರಿಸಿದ್ದೇನೆ. ಆದ್ದರಿಂದ ಮುಂದಾಲೋಚನೆಯನ್ನು ಮಾಡಿ ನಿನ್ನ ಈ ತರ್ಕವನ್ನು ನಿಲ್ಲಿಸುವುದು ಒಳ್ಳೆಯದು."

"ಸ್ಥಪತೀಶ್ವರಾ, ನಿಮ್ಮ ಮಾತಗಳೇನೋ ನನಗೆ ಸ್ವೀಕಾರಾರ್ಹವೆನಿಸುತ್ತಿಲ್ಲ. ನನಗೆ ಮಹಾರಾಜರಿಂದ ಶಿಕ್ಷೆ ದೊರೆತರೆ ದೊರೆಯಲಿ. ನಾನು ಸತ್ಯಪ್ರಿಯ. ಎಂದೂ ಅಸತ್ಯಕ್ಕೆ ಹೆದರಿಲ್ಲ. ಇದರಲ್ಲಿಯು ಶಾಸ್ತ್ರಸಮ್ಮತ ದೋಷವನ್ನು ಮಹಾರಾಜರ ಸಮ್ಮುಖದಲ್ಲಿಯೇ ನಾನು ತೋರಿಸಿಕೊಡಬಲ್ಲೆ" ಎಂದ ಡಂಕಣ. ಅವನ ಮಾತಿನ ಓಘದಲ್ಲಿ ಸ್ವಲ್ಪವೂ ಅಳುಕಿರಲಿಲ್ಲ.

"ಮಗೂ, ಇದರಲ್ಲಿಯ ದೋಷವೇ ನಿಜವಾಗಿದ್ದರೆ ಯಾವ ಕೈಯಿಂದ ಇದುವರೆವಿಗೂ ನಾನು ಸಾವಿರಾರು ಶಿಲ್ಪಗಳನ್ನು ಕಂಡರಿಸಿದ್ದೇನೆಯೋ, ಈ ವೇಲಾಪುರಿಯ ವೈಭವ ಪೂರ್ಣ ಶಿಲ್ಪವನ್ನು ಯಾವ ಕೈ ರೂಪಿಸಿದೆಯೋ ಆ ಬಲ ಹಸ್ತವನ್ನು ಕತ್ತರಿಸಿಕೊಳ್ಳುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತಿದ್ದೇನೆ. ಇನ್ನು ನಿನ್ನ ದೋಷವನ್ನು ನೀನು ನಿರೂಪಿಸು" ಎಂದ ವಿಶ್ವರೂಪಸ್ಥಪತಿ.

"ಸ್ಥಪತೀಶ್ವರಾ ಒಳ್ಳೆಯ ಗಂಧವನ್ನು ವಿಗ್ರಹಕ್ಕೆ ಪೂರ್ಣವಾಗಿ ಲೇಪಿಸಿ ನಂತರ ನಾನು ಅದರಲ್ಲಿಯ ದೋಷವನ್ನು ತೋರಿಸುತ್ತೇನೆ" ಎಂದ ಡಂಕಣಾಚಾರ್ಯ.

ವಿಶ್ವರೂಪಸ್ಥಪತಿಯ ಮಾತಿಗೆ ಅಲ್ಲಿ ಸೇರಿದ್ದವರು ಬೆಚ್ಚಿದರು. ಎಲ್ಲರೂ ಆಶ್ಚರ್ಯ ಚಕಿತರಾದರು. 'ಈ ಬಾಲಕನ ಸಾಹಸಕ್ಕೆ ಏನು ಫಲ ದೊರೆಯುವುದೋ' ಎಂದು ಕೆಲವರು ಕರುಣೆಯಿಂದ ಅವನನ್ನೇ ನೋಡುತ್ತಿದ್ದರು. ಮಹಾರಾಜರಿಗೂ ಈ ಸುದ್ದಿ ತಲುಪಿತು. ಕೂಡಲೇ ರಾಣೀವಾಸದವರೊಂದಿಗೆ, ರಾಮಾನುಜಾಚಾರ್ಯರೊಂದಿಗೆ ವೇಲಾಪುರಿಗೆ ಬಂದೇಬಿಟ್ಟರು.

ಬಾಲಕನು ಕೋರಿದಂತೆ ಒಳ್ಳೆಯ ಗಂಧವನ್ನು ಮೂರ್ತಿಗೆಲ್ಲಾ ಬಳಿಯಲಾಯಿತು. ಸ್ವಲ್ಪ ಹೊತ್ತಿಗೆ ಆ ಗಂಧವು ಒಣಗುತ್ತಾ ಬಂತು. ಎಲ್ಲಾಕಡೆಯೂ ಒಣಗಿತ್ತು ಆದರೆ ಮೂರ್ತಿಯ ಹೊಕ್ಕುಳ ಬಳಿಯ ಗಂಧ ಮಾತ್ರ ಒಣಗಲಿಲ್ಲ. ಇನ್ನು ಸ್ವಲ್ಪ ಹೊತ್ತಿಗೆ ಒಣಗುತ್ತದೆ ಎಂದು ಕಾದರು. ಇಲ್ಲ ಒಣಗಲಿಲ್ಲ. ಡಂಕಣಾಚಾರ್ಯ ಒಂದು ಸಣ್ಣ ಉಳಿಯನ್ನು ಸುತ್ತಿಗೆಯನ್ನು ತರಿಸಿಕೊಂಡು ಹೊಕ್ಕಳ ಬಳಿ ಒಂದು ಸಣ್ಣ ಚಕ್ಕೆಯನ್ನು ತೆಗೆದ. ಕೂಡಲೇ ಅಲ್ಲಿಂದ ಸಣ್ಣಕಪ್ಪೆ ಹಾರಿ ಹೊರಬಂತು. ನಂತರ ಸ್ವಲ್ಪ ನೀರೂ ಹೊರ ಬಂತು. ಅಲ್ಲಿದ್ದವರಿಗೆಲ್ಲಾ ಆಶ್ಚರ್ಯ. ಸ್ಥಪತಿಯ ಮುಖ ಬಿಳಿಚಿಕೊಂಡಿತು. ಶಿಲ್ಪಿಗಳೆಲ್ಲರೂ ಬೆಪ್ಪಾದರು.

"ಮಹಾಪ್ರಭು, ಶಿಲ್ಪವಿದ್ಯಾ ಚೂಡಾಮಣಿಗಳೇ, ಈ ಚೆನ್ನಿಗರಾಯ ಮೂರ್ತಿಯು ಶಿಲ್ಪಶಾಸ್ತ್ರ ಸಮ್ಮತವಾದುದೇ. ಲೋಕೋತ್ತರ ಸೌಂದರ್ಯವನ್ನು ಪಡೆದುಕೊಂಡಿರುವ ಮಹಾ ಅದ್ಭುತ ಮೂರ್ತಿಯೇ. ಆದರೆ ಪ್ರತಿಮೆ ಮಾಡಲು ಬಳಸಿರುವ ಶಿಲೆಯು ಗರ್ಭಿಣಿ ಶಿಲೆ. ಶಿಲಾಚ್ಛೇದನೇ **ತಕ್ಷಣ್ಯೇSಪಿ ಮಂಡೂಕ ದೃಶ್ಯತೇ ಯದಿ ಸಾ ಶಿಲಾ ಗರ್ಭಿಣಿತಿ ಜ್ಞಾನ ತಾಂ ವರ್ಜಯೇತ್** ಎಂದು **ವೈಖಾನಸ ಆಗಮವು** ಹೇಳುತ್ತದೆಯಲ್ಲವೇ ? ಇಂತಹ ಶಿಲೆಯನ್ನು ಮೂಲ ವಿಗ್ರಹಕ್ಕೆ ಉಪಯೋಗಿಸಬಾರದು. ಈ ವಿಷಯವನ್ನು ಕುರಿತು ಇನ್ನೊಮ್ಮೆ ಶಿಲಾಲಕ್ಷಣ ಶಾಸ್ತ್ರವನ್ನು ಪರಿಶೀಲಿಸಿ ತಮಗೇ ಗೊತ್ತಾಗುತ್ತದೆ"

ವಿಶ್ವರೂಪಸ್ಥಪತಿಯ ಮುಖದಲ್ಲಿ ಒಂದು ಹನಿ ರಕ್ತವೂ ಇರಲಿಲ್ಲ. ಷಷ್ಠಿ ಪೂರ್ತಿಯಾಗಲಿತ್ತು. ಇದುವರೆವಿಗೂ ಅಸಂಖ್ಯಾತ ಶಿಲ್ಪಗಳನ್ನು ಆತ ನಿರ್ಮಿಸಿದ್ದ. ಎಲ್ಲ ಶಿಲ್ಪಿಗಳೂ ಆತನ ಶಿಲ್ಪಕ್ಕೆ ಕೈ ಎತ್ತಿ ಜೋಡಿಸಿದವರೇ. ಅಂತಹುದರಲ್ಲಿ ಈ ಬಾಲಕನಿಂದ ಇಂದು ಈ ರೀತಿಯ ಸೋಲೇ? ಕೂಡಲೇ ಬಹು ಹಿಂದೆ ಸರಸ್ವತೀ ಪೀಠಾಧಿಪತಿಗಳಾದ ಬ್ರಹ್ಮಾನಂದ ಸ್ವಾಮಿಗಳು ಹೇಳಿದ್ದ ಮಾತುಗಳು ಆತನ ಕಿವಿಯಲ್ಲಿ ಮೊರೆಯಿತು. ಹಾಗಿದ್ದರೆ ಈ ಬಾಲಕನು ತನಗೆ ಆಪ್ತನೇ ? ಈ ಭಾವನೆ ಬರುತ್ತಲೇ ವಿಶ್ವರೂಪಸ್ಥಪತಿ ಕೇಳಿದ :

"ಮಗೂ ನಿನ್ನದು ಯಾವ ಊರು ? ಇಂತಹ ಪ್ರತಿಭಾವಂತ ಬಾಲಕನ ತಂದೆ- ತಾಯಿಗಳು ಯಾರು ? ನಿನ್ನ ಶಿಲ್ಪವಿದ್ಯಾಭ್ಯಾಸ ನಡೆದಿದ್ದು ಎಲ್ಲಿ ?"

"ಸ್ಥಪತೀಶ್ವರರೇ, ನಮ್ಮದು ಕ್ರೀಡಾಪುರ. ನನ್ನತಂದೆ ಮಹಾಶಿಲ್ಪ ಸಾರ್ವಭೌಮರೆಂದು ಪ್ರಖ್ಯಾತರಾಗಿರುವ ಜಕಣಾಚಾರ್ಯರು. ನನ್ನ ತಾಯಿ ಸಾಧ್ವಿ ಶಿರೋಮಣಿ ಸೌಪರ್ಣೀದೇವಿ. ನನ್ನ ತಂದೆಯಷ್ಟೇ ಸಮಾನ ಶಿಲ್ಪಾಚಾರ್ಯರಾದ ಅನಂತಕೀರ್ತಿ ಸ್ಥಪತಿಗಳು ನನ್ನ ಗುರುಗಳು. ನಮ್ಮ ತಾತನವರಾದ ಪೂಜ್ಯ ನಾಗಲಿಂಗ ಸ್ಥಪತಿಗಳ ಶಿಲ್ಪವಿದ್ಯಾ ಗುರುಕುಲವೇ ನಾನು ಕಲಾಭ್ಯಾಸ ನಡೆಸುತ್ತಿರುವ ಶಾಲೆ"

- ಡಂಕಣಾಚಾರ್ಯ ಈ ಮಾತುಗಳನ್ನು ಹೇಳುತ್ತಿರುವಂತೆಯೇ ವಿಶ್ವರೂಪಸ್ಥಪತಿಯ ಕಣ್ಣುಗಳು ತುಂಬಿಬಂದವು. ಆತನ ಮೈ ನಡುಗುತ್ತಿತ್ತು. ಅಪ್ರಯತ್ನವಾಗಿಯೇ ಅವರ ಕೈಯ್ಯಲ್ಲಿದ್ದ ಜಪಮಾಲೆ ಜಾರಿತು. ಸೌಪರ್ಣೀದೇವಿಯ ಹೆಸರು ಆತನ ಹೃದಯದ ಮೇಲೆ ಗಂಡು ಗೊಡಲಿಯಂತೆ ಪೆಟ್ಟು ನೀಡಿತ್ತು. ಆಕೆಯ ತೌರಿನವರು ಸುಪರ್ಣ ಋಷಿ ಗೋತ್ರಜರಾಗಿದ್ದುದರಿಂದಲೇ ಆಕೆಗೆ ಸೌಪರ್ಣೀದೇವಿ ಎಂದು ಹೆಸರಿಟ್ಟಿದ್ದರು. ಸುಪರ್ಣಋಷಿಯೇ ಆತನ ಮನಃ ಪಟಲದಲ್ಲಿ ಮೂಡಿ 'ನೋಡಿದೆಯಾ ನನ್ನ ವಂಶದ ಹೆಣ್ಣು ಮಗಳು ಎಂತಹವಳು ಎಂದು! ನಿನ್ನ ಮಗನನ್ನ ಹೇಗೆ ಸಾಕಿದ್ದಾಳೆ ನೋಡು!!' ಎಂದು ಮೂದಲಿಸಿದ "ಈ ಬಾಲಕನಿಂದಲೇ ತನಗೆ ಸೋಲುಂಟಾಗುತ್ತದೆ ಎಂದು ಬ್ರಹ್ಮಾನಂದ ಸ್ವಾಮಿ ಹೇಳಿದ್ದುದು?" ಎಂದು ತನ್ನಲ್ಲಿ ಮತ್ತೆ ಮತ್ತೆ ಕೇಳಿಕೊಂಡ. ವಿಧಿ ಬರಹವನ್ನು ಅರಿಯುವುದು ದುಸ್ಸಾಧ್ಯ ಎಂದುಕೊಂಡ. "ಮಗೂ" ಎನ್ನುತ್ತಾ ಬಾಲಕನನ್ನು ಬಾಚಿ ತಬ್ಬಿಕೊಂಡ. ಕಣ್ಣಿಂದ ಒಂದೇ ಸಮನೆ ಕಣ್ಣೀರು ತಟತಟನೆ ಸುರಿಯುತ್ತಲೇ ಇತ್ತು.

ಮಹಾರಾಜ, ಪ್ರಜೆಗಳು ಆಶ್ಚರ್ಯದಿಂದ ನೋಡುತ್ತಲೇ ಇದ್ದರು. ತಂದೆ-ಮಗ ಇಬ್ಬರೂ ಆ ಮೊದಲ ಸಮಾಗಮದಲ್ಲಿ ಪರಸ್ಪರ ನೋಡಿಕೊಂಡು ಬಹು ಸಂತೋಷಗೊಂಡಿದ್ದರು.

ಸ್ವಲ್ಪ ಹೊತ್ತಿಗೆ ಡಂಕಣನು ಒಂದು ತಾಳೆ ಗರಿಯನ್ನು ತೆಗೆದು ತಂದೆಗೆ ತೋರಿಸಿ ನಾನು ಹುಟ್ಟಿದಾಗ ದಾಸಿ ಉರುಳಿಸಿದ ನಿಂಬೆಹಣ್ಣು ಅಲ್ಲಿದ್ದ ಬೀಸುವ ಕಲ್ಲಿಗೆ ತಾಕಿ ಹಿಂದಕ್ಕೆ ಬಂತು. ಆಕೆ ಮತ್ತೆ ಅದನ್ನು ತಮ್ಮ ಕಡೆಗೆ ಸ್ವಲ್ಪ ಸಮಯದ ನಂತರ ಉರುಳಿಸಿದಳಂತೆ. ಗಂಡು ಮಗು ಹುಟ್ಟಿತಲ್ಲಾ ಎಂಬ ಸಂತೋಷದಲ್ಲಿ ನಿಮಗೆ ಈ ಸತ್ಯವನ್ನು ತಿಳಿಸಲು ಮರೆತಳಂತೆ. ಈ ಕಾಲ ವ್ಯತ್ಯಾಸದಿಂದ ಬದಲಾದ ಈ ಜಾತಕವು ನಿಮಗೆ ಭ್ರಾಂತಿಯನ್ನುಂಟುಮಾಡಿತು. ಆ ಕಾಲವನ್ನು ತಿದ್ದಿ ಸರಿಪಡಿಸಿ ಜಾತಕವನ್ನು ಫಲವನ್ನು ತಾವೇ ಬರೆಯಬೇಕು" ಎಂದು ಹೇಳಿದ.

ಬಹುಕಾಲದ ನಂತರ ಆ ಜಾತಕ ಚಕ್ರವನ್ನು ನೋಡಿದ. ಜಕ್ಕಣಾಚಾರ್ಯ, ಈ ಜಾತಕನು

ತಂದೆಯನ್ನು ಗೆಲ್ಲುವಂತಹ ಪ್ರಜ್ಞಾನಿಧಿಯಾಗುತ್ತಾನೆ ಎಂಬುದು ಸ್ಪಷ್ಟವಾಗಿದೆ. ಈಗ ನಡೆದಿರುವುದು ಇದೇ ಅಲ್ಲವೇ ?

ವಿಶ್ವರೂಪಸ್ಥಪತಿಯೇ ಜಕ್ಕಣಾಚಾರ್ಯನೆಂಬುದು ತಿಳಿದ ನಂತರ ವಿಷ್ಣುವರ್ಧನ ಮಹಾರಾಜನ ಸಂತೋಷಕ್ಕೆ ಮೇರೆಯೇ ಇರಲಿಲ್ಲ. ಹದಿನೈದು ವರ್ಷಗಳ ಹಿಂದೆ ಗೃಹತ್ಯಾಗ ಮಾಡಿದ ತನ್ನ ಗುರು ಸ್ವಾಮಿ ತನಗೆ ಲಭಿಸಿದ್ದಾನೆ ಎಂಬುದಕ್ಕಿಂತಲೂ ವಿಶೇಷ ಬೇರೇನಾದರೂ ಉಂಟೇ ? ಮಹಾರಾಜ ಜಕ್ಕಣಾಚಾರ್ಯರನ್ನು ಗಾಢವಾಗಿ ಆಲಂಗಿಸಿಕೊಂಡ. ಆ ಸ್ಥಪತಿ ಜಕ್ಕಣಾಚಾರ್ಯರೇ ಆಗದೆ ಇದ್ದಿದ್ದರೆ ವೇಲಾಪುರಿಯ ಈ ದೇವಾಲಯವು ಇಷ್ಟೊಂದು ಭವ್ಯವಾಗಿ ರೂಪುಗೊಳ್ಳುವುದು ಸಾಧ್ಯವಿತ್ತೇ ? ಈ ಮಹಾ ಸಂತೋಷದಲ್ಲಿ ಶಿಲಾದೋಷ, ಚೆನ್ನಿಗರಾಯ ಮೂರ್ತಿ ಎಲ್ಲಾ ಬಹು ಕ್ಷುಲ್ಲಕವಾಗಿ ಕಂಡು ಬಂದವು. ಪ್ರತಿಷ್ಠಾ ಮೂಹೂರ್ತವು ಸಮೀಪಿಸುತ್ತಿದೆ ಎಂಬುದೂ ಸ್ಫುರಿಸಲಿಲ್ಲ. ಶಾಂತಲಾದೇವಿ, ಕೀರ್ತಿಮತಿಗಳು ಆಚಾರ್ಯ ಮತ್ತೆ ಕಾಣಿಸಿಕೊಂಡಿದ್ದಕ್ಕೂ, ಆತನ ಮಗ ಇಂತಹ ಮೇಧಾಶಾಲಿಯಾಗಿರುವುದಕ್ಕೂ ಬಹುವಾಗಿ ಸಂತೋಷಗೊಂಡರು.

"ಮಹಾಪ್ರಭು, ದೋಷಭೂಯಿಷ್ಠವಾಗಿದ್ದ ಶಿಲೆಯನ್ನು ಪ್ರಧಾನ ಮೂರ್ತಿಯ ತಯಾರಿಕೆಯಲ್ಲಿ ಬಳಸಿ ನಿಮಗೆ ದ್ರೋಹ ಬಗೆದಿದ್ದೇನೆ. ನನ್ನನ್ನು ತಾವು ಹೇಗೆ ತಾನೇ ಮೆಚ್ಚುವುದು ಸರಿ ? ನಡೆಯಬೇಕಾಗಿದ್ದ ಪ್ರತಿಷ್ಠಾ ಮಹೋತ್ಸವಕ್ಕೆ ನಾನು ಅಡ್ಡಿಯನ್ನುಂಟು ಮಾಡಿದ್ದೇನೆ. ನನ್ನ ಪ್ರತಿಜ್ಞೆಯಂತೆ ಈಗ ಬಲಗೈಯನ್ನು ಕತ್ತರಿಸಿ ಕೊಳ್ಳಬೇಕಾಗಿದೆ" ಎಂದ ಜಕ್ಕಣಾಚಾರ್ಯ.

ಕೂಡಲೇ ದಾಸೋಜ ಮಹಾಚಾರ್ಯ "ಸ್ವಾಮಿ... ಈ ತಪ್ಪುಗಳಿಗೆ ತಾವು ಹೊಣೆಗಾರರಲ್ಲ. ಶಿಲಾ ಪರೀಕ್ಷೆಗೆ ಹೊಣೆಗಾರಿಕೆ ಹೊತ್ತು ದೋಷಯುಕ್ತವಾದ ಶಿಲೆಯನ್ನು ಪ್ರಧಾನ ಮೂರ್ತಿಗಾಗಿ ತಮಗೆ ಸಮರ್ಪಿಸಿದವನು ನಾನು. ಆದ್ದರಿಂದ ನಾನೇ ಈ ಶಿಕ್ಷೆಗೆ ಗುರಿಯಾಗಬೇಕು. ನನ್ನ ಈ ತಪ್ಪಿಗೆ ಮಹಾಪ್ರಭುಗಳು ತೀವ್ರತರವಾದ ಶಿಕ್ಷೆಯನ್ನು ವಿಧಿಸಬೇಕು. ತಾವು ಬಲಹಸ್ತವನ್ನು ಕತ್ತರಿಸಿಕೊಳ್ಳಬೇಕಾಗಿಲ್ಲ. ಚೆನ್ನಿಗರಾಯ ಮೂರ್ತಿಯನ್ನು ತಯಾರಿಸಿರುವ ಶಿಲೆಯನ್ನು ನಾನೇ ಗಂಧವನ್ನು ಹಚ್ಚಿ ಪರೀಕ್ಷಿಸಿ ಅದರ ಮೇಲ್ಪೊರೆಯನ್ನು ಕಡಿಸಿ ತಮ್ಮಲ್ಲಿಗೆ ಕಳುಹಿಸಿದ್ದೆ. ಆದರೂ ಏನು ದುರ್ದೈವವೋ ಈ ತಪ್ಪು ಉಳಿದುಕೊಂಡಿತು" ಎಂದು ತನ್ನ ಅಂತರಂಗವನ್ನು ತೋಡಿಕೊಂಡ.

"ಆಚಾರ್ಯಾ, ಮೊದಲಿಗೆ ನೀವು ಮೂಕಕಲ್ಲಿಗೆ ಗಂಧವನ್ನು ಹಚ್ಚಿ ಪರೀಕ್ಷಿಸಿರಬಹುದು. ಅದರ ಮೇಲ್ಪೊರೆ ಕಡಿದ ನಂತರವೂ ಕೂಡ ಈ ರೀತಿಯ ಶೋಧನೆಯನ್ನು ನಡೆಸಬೇಕು. ಮೇಲ್ಪೊರೆ ಗಡಸಾಗಿರುವುದರಿಂದ ಈ ರೀತಿಯ ಪುಟ್ಟದೋಷಗಳು ಬೇಗ ಕಂಡು ಬರುವುದಿಲ್ಲ. ಆದ್ದರಿಂದ ಪೊರೆ ತೆಗೆದ ಮೇಲೂ ಒಮ್ಮೆ ಪರೀಕ್ಷಿಸಬೇಕು. ಹಾಗೆ ಮಾಡಿದ್ದಿದ್ದರೆ ಈ ತಪ್ಪು ನಡೆಯುತ್ತಲೇ ಇರಲಿಲ್ಲ" ಎಂದ ಡಂಕಣಾಚಾರ್ಯ.

"ದಾಸೋಜ, ತಪ್ಪು ನಿನ್ನದೇ ಆಗಿರಬಹುದು. ಆದರೂ ಶಿಕ್ಷೆಯಾಗಬೇಕಾದದ್ದು ನನಗೇ. ದೇವಾಲಯದ ನಿರ್ಮಾಣದಲ್ಲಿ ನಡೆಯುವ ಎಲ್ಲಾ ಲೋಪಗಳಿಗೂ ಪ್ರಧಾನಸ್ಥಪತಿಯೇ ಹೊಣೆಗಾರ. ನೀನು ತಪ್ಪುಮಾಡಿದ್ದರೂ ನಾನು ಪುನಃ ಪರಿಶೀಲಿಸದೆ ಆ ಶಿಲೆಯನ್ನು ಬಳಸಿಕೊಂಡಿದ್ದು ನನ್ನ ತಪ್ಪಲ್ಲವೇ ? ಆದ್ದರಿಂದ ನನ್ನ ಹಸ್ತವನ್ನು ಕತ್ತರಿಸಿಕೊಳ್ಳಲೇಬೇಕು" ಎಂದ ಜಕಣಾಚಾರ್ಯ.

"ಗುರುವರ್ಯಾ, ದಯಮಾಡಿ ನಮ್ಮನ್ನು ಕ್ಷಮಿಸಿ. ಈ ತಪ್ಪಿಗೆ ಮೊದಲ ಹೊಣೆಗಾರ

ದಾಸೋಜನಾದರೆ, ಎರಡನೆಯ ಹೊಣೆಗಾರ ನಾನು. ದಾಸೋಜನ ನಂತರ ಕೊನೆಯಬಾರಿಗೆ ಶಿಲಾ ಪರೀಕ್ಷೆಯನ್ನು ನಡೆಸಬೇಕಾಗಿದ್ದವನು ನಾನು. ಅದೇನೋ ಆ ಸಮಯದಲ್ಲಿ ನನ್ನ ಬುದ್ಧಿಗೆ ಕೂಡ ಮಂಕುಕವಿದುಕೊಂಡಿತ್ತೆನಿಸುತ್ತದೆ. ಇಲ್ಲದಿದ್ದರೆ ವಿಜಯ ನಾರಾಯಣ ಮೂರ್ತಿಯ ಶಿಲೆಯನ್ನು ಪರಿಶೀಲಿಸಿದವನು, ಈ ಶಿಲೆಯನ್ನೇಕೆ ಪರೀಕ್ಷಿಸದೆ ಬಿಡಬೇಕು ? ಆದ್ದರಿಂದ ತಾವು ಈ ವಿಷಯದಲ್ಲಿ ಸ್ವಲ್ಪವೂ ತಪ್ಪು ಮಾಡಿಲ್ಲ. ಮೂರ್ತಿ ಶಿಲ್ಪವು ಶಾಸ್ತ್ರ ಸಮ್ಮತವಾಗಿದೆ ಎಂದು ಬಾಲ ಶಿಲ್ಪಿಯೇ ಅಂಗೀಕರಿಸಿದನಲ್ಲಾ ! ಆದ್ದರಿಂದ ತಪ್ಪು ನಿಮ್ಮದಲ್ಲ." ಎಂದ ದೇವೋಜ ಶಿಲ್ಪಾಚಾರ್ಯ.

"ಏನೇ ಆಗಿರಲಿ ನಾನು ಪ್ರಧಾನ ಸ್ಥಪತಿಯ ಪಟ್ಟ ಕಟ್ಟಿಕೊಂಡಿದ್ದೇನೆ. ಆದ್ದರಿಂದ ಆಲಯ ಶಿಲ್ಪದಲ್ಲಿ ಎಲ್ಲಿ ಯಾರೇ ತಪ್ಪು ಮಾಡಿದ್ದರೂ ನಾನೇ ಅದಕ್ಕೆ ಸಂಪೂರ್ಣ ಹೊಣೆಗಾರ. ಆದ್ದರಿಂದ ನನ್ನ ಪ್ರತಿಜ್ಞೆ ನೆರವೇರಲೇ ಬೇಕು" ಎಂದ ಜಕ್ಕಣಾಚಾರ್ಯ.

"ಪೂಜ್ಯರೇ, ಕ್ಷಮಿಸಿ. ನಾನೇ ಅದೃಷ್ಟ ಹೀನ. ಈ ಎಲ್ಲಾ ಅನಾಹುತಗಳಿಗೂ ನಾನೇ ಕಾರಣನಾಗಿದ್ದೇನೆ. ದಾಸೋಜ, ದೇವೋಜ ಶಿಲ್ಪಿಗಳು ವಿವರಿಸಿರುವಂತೆ ತಪ್ಪು ತಮ್ಮಿಂದ ನಡೆದಿಲ್ಲ. ಆದ್ದರಿಂದ ತಾವು ಹಸ್ತವನ್ನು ಕತ್ತರಿಸಿಕೊಳ್ಳಬಾರದು..." ಎಂದ ಡಂಕಣಾಚಾರ್ಯ.

"ನೀವೆಲ್ಲರೂ ನನಗೆ ನಷ್ಟವಾಗುತ್ತದೆ, ತೊಂದರೆಯುಂಟಾಗುತ್ತದೆ ಎಂದು ಮಾತ್ರವೇ ಯೋಚಿಸುತ್ತಿದ್ದೀರಿ. ನೀವ್ಯಾರೂ ನನ್ನನ್ನು ನುಡಿದಂತೆ ನಡೆಯುವ ಸತ್ಯ ನಿಷ್ಠನನ್ನಾಗಿ ಮಾಡಲು ಪ್ರಯತ್ನಿಸುತ್ತಿಲ್ಲ. ನಿಮ್ಮೆಲ್ಲರ ವಾದಗಳಲ್ಲೂ ನನ್ನ ಮೇಲಣ ಅಭಿಮಾನವೇ ಇದೆ ; ಸತ್ಯದ ಮೇಲಣ ಪ್ರೀತಿ ಇಲ್ಲ. ಆದ್ದರಿಂದ ನಾನು ನಿಮ್ಮ ಮಾತುಗಳನ್ನು ಕೇಳುವುದಿಲ್ಲ. ನಾನು ಆಡಿರುವಂತೆ ನಡೆದುಕೊಳ್ಳುವುದು, ಸತ್ಯವನ್ನು ಆರಾಧಿಸುವವನು ಮಾಡಬೇಕಾಗಿರುವ ಮೊದಲ ಕರ್ತವ್ಯ" ಎಂದ ಜಕ್ಕಣಾಚಾರ್ಯ.

"ಪೂಜ್ಯರೇ, ಹದಿನೈದು ವರ್ಷಗಳಿಂದಲೂ ತಮ್ಮ ಬೇರ್ಪಡೆಯ ದುಃಖವನ್ನು ಅನುಭವಿಸುತ್ತಿರುವ ನನ್ನ ತಾಯಿಗೆ ನಿಮ್ಮನ್ನು ಕರೆತರುತ್ತೇನೆ ಎಂದು ಹೇಳಿ ಬಂದಿದ್ದೇನೆ. ಅದೃಷ್ಟವಶದಿಂದ ನಿಮ್ಮನ್ನು ಕಂಡು ನಾನು ಧನ್ಯನಾದೆ ಎಂದ ಸಂತೋಷಿಸುತ್ತಿರುವ ಸಂದರ್ಭದಲ್ಲಿ ನಿಮ್ಮ ಕೈ ಕತ್ತರಿಸಿಕೊಂಡು ನಮ್ಮನ್ನು ಮತ್ತಷ್ಟು ದುಃಖಕ್ಕೆ ಈಡುಮಾಡುತ್ತೀರಾ? ನನ್ನ ಕಾರಣದಿಂದ ನಿಮ್ಮ ಕೈ ಕಳೆದುಕೊಂಡ ನಂತರ ನಾನು ಹೇಗೆ ತಾನೇ ನನ್ನ ತಾಯಿಗೆ ಮುಖ ತೋರಿಸಲಿ ? ಆದ್ದರಿಂದ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಈ ಪ್ರತಿಜ್ಞೆಯಿಂದ ವಿರಮಿಸಬೇಕಾಗಿ ಕೋರುತ್ತೇನೆ." ಎಂದು ಮತ್ತೆ ಬೇಡಿದ ಡಂಕಣಾಚಾರ್ಯ.

"ಮಗೂ, ಸೌಪರ್ಣಿದೇವಿ ಮಹಾಸಾಧ್ವೀ. ಅಂತಹ ಶೀಲವತಿಯನ್ನು ಹಿಂದು ಮುಂದು ಯೋಚಿಸದೆ ಅರೆಕ್ಷಣದಲ್ಲಿ ಶಾಸ್ತ್ರದಲ್ಲಿ ನಂಬಿಕೆ ಇರಿಸಿ ನಾನು ಅನುಮಾನಿಸಿದೆ. ಈ ದಿನವೂ ನಾನು ಶಾಸ್ತ್ರದಲ್ಲಿಯೇ ಅಚಲ ವಿಶ್ವಾಸವಿರಿಸಿದ್ದೇನೆ. ಅದೇ ಶಾಸ್ತ್ರದಿಂದಲೇ ನಾನು ಎಂತಹ ಘೋರ ತಪ್ಪನ್ನು ಮಾಡಿದ್ದೇನೆ ಎಂಬುದನ್ನು ನೀನು ತೋರಿಸಿದೆ. ಹೆಸರು ಬದಲಿಸಿಕೊಂಡು ಹದಿನೈದು ವರ್ಷಗಳ ಕಾಲ ಹೆಂಡತಿ-ಮಕ್ಕಳನ್ನು ವಂಚಿಸಿದ ಪಾಪವೂ ಬೇರೆ ನನಗೆ

ಸೇರಿದೆಯಲ್ಲವೇ ? ಈ ಎಲ್ಲಾ ಪಾಪಗಳ ಫಲವೇ ಈ ದಿನ ನಾನು ಮಾಡಿರುವ ಈ ತಪ್ಪು. ಯಾರೂ ಇದರಿಂದ ನನ್ನನ್ನು ಉಳಿಸುವ ಪ್ರಯತ್ನ ಮಾಡಬಾರದು. ವಿಧಿವಿಲಾಸವು ಸದಾ ನಿರಾತಂಕವಾಗಿ ನಡೆಯುತ್ತಲೇ ಇರಬೇಕು" ಎಂದ ಜಕ್ಕಣಾಚಾರ್ಯ.

"ಪೂಜ್ಯರೇ, ನನ್ನ ತಾಯಿಯನ್ನು ಅನುಮಾನಿಸಲು ಕಾರಣ ನೀವಲ್ಲ. ಅದು ಇನ್ನೊಬ್ಬರ ಅವಜ್ಞತೆಯಿಂದ ನಡೆದದ್ದು. ಬೇರೆಯವರ ತಪ್ಪಿಗೆ ನೀವೇಕೆ ಶಿಕ್ಷೆ ಅನುಭವಿಸಬೇಕು ? ನಿಮ್ಮ ಕೆಲಸ ಸಕಾರಣವಾದುದಲ್ಲ. ಮಹಾಪ್ರಭುಗಳು ಏನು ಅಪ್ಪಣೆಕೊಡಿಸುತ್ತಾರೆಯೋ ಆ ರೀತಿ ಅನುಸರಿಸೋಣ" ಎಂದ ಡಂಕಣ.

"ಆಚಾರ್ಯ ಸ್ವಾಮೀ, ಕುಮಾರನ ಮಾತು ಸೂಕ್ತವಾಗಿದೆ. ದಾಸೋಜ, ದೇವೋಜರ ಮಾತುಗಳು ಸರಿಯಾಗಿವೆ. ನಡೆದಿರುವ ಎರಡೂ ತಪ್ಪುಗಳಿಗೆ ನೀವು ಹೊಣೆಗಾರರಲ್ಲ. ತಾವು ಹಸ್ತವನ್ನು ಕಡಿದುಕೊಳ್ಳಬೇಕಾಗಿಲ್ಲ. ನನ್ನ ಪ್ರಾರ್ಥನೆಯನ್ನು ಮನ್ನಿಸಿ ಮೊದಲು ನಡೆಸಬೇಕಾಗಿರುವ ಪ್ರತಿಷ್ಠಾ ಕಾರ್ಯವು ವಿಧಿವತ್ತಾಗಿ ನಡೆಸುವ ಪ್ರಯತ್ನ ಮಾಡಿ. ಇದುವರೆವಿಗೂ ನಡೆದುದಕ್ಕೆ ನಾವೇನು ತಾನೇ ಮಾಡಲು ಸಾಧ್ಯವಿದೆ ? ಬಹುಕಾಲ ದಿಂದಲೂ ತಮ್ಮನ್ನು ಕಾಣದೆ ದುಃಖಿತರಾಗಿರುವ ನಮಗೆಲ್ಲಾ ಮತ್ತೆ ಈ ವಿಷಾದದ ಕಾರ್ಮೋಡದ ಮುಸುಕು ಹಾಕುತ್ತೀರಾ?" ಎಂದು ಮಹಾರಾಜರು ಹೇಳಿದರು.

"ಮಹಾಪ್ರಭು, ಪ್ರಜೆಗಳಿಗೆ ಧರ್ಮದ ದಾರಿಯನ್ನು ತೋರಿಸುವ ತಾವೇ ಹೀಗೆ ಹೇಳಿದರೆ ಹೇಗೇ ? ಎಲ್ಲಾ ತಪ್ಪುಗಳಿಗೂ ಪ್ರಧಾನ ಸ್ಥಪತಿಯಾದ ನನ್ನದೇ ಹೊಣೆಗಾರಿಕೆ. ನಾನೇ ಕರ್ತ. ಈ ದೇವಸ್ಥಾನದ ನಿರ್ಮಾಣದ ಪುಣ್ಯ ಹೇಗೆ ನನ್ನದೋ, ಅದರಿಂದ ಪಾಪ ಸಂಚಯವಾಗುವಂತಿದ್ದರೆ ಅದೂ ಕೂಡ ನನ್ನದೇ. ವಿಗ್ರಹದಲ್ಲಿ ದೋಷ ತೋರಿಸಿಕೊಟ್ಟರೆ ಹಸ್ತಕತ್ತರಿಸಿಕೊಳ್ಳುತ್ತೇನೆ ಎಂದು ಪ್ರತಿಜ್ಞೆ ಮಾಡಿದವನು ನಾನು. ಆ ದೋಷ ಯಾವುದಾದರೂ ಆಗಿರಲಿ, ಯಾರಿಂದ ಆಗಿರುವ ದೋಷವೇ ಆಗಿರಲಿ ಹೊಣೆ ಹೊತ್ತು ಪ್ರತಿಜ್ಞೆ ಕೈಗೊಂಡವನು ನಾನು ತಾನೇ ? ಇನ್ನು ನಾನು ಮಾಡಿದ ಪ್ರತಿಜ್ಞೆಯನ್ನು ನಾನೇ ನಿರ್ವಹಿಸದೆ ಹೋದರೆ ಹೇಗೇ ? ಉತ್ತಮ ಶಿಲ್ಪಾಚಾರ್ಯನಿಗೆ ಎಷ್ಟು ಯೋಗ್ಯಲಕ್ಷಣಗಳು ಇರಬೇಕೆಂದು ಶಿಲ್ಪಶಾಸ್ತ್ರ ವಿಧಿಸುತ್ತದೆ. ಅಂತಹುದರಲ್ಲಿ ಆಡಿದಂತೆ ನಡೆದುಕೊಳ್ಳದ ನಾನು ಶಿಲ್ಪಿ ಕುಲಕ್ಕೇ ಕಳಂಕ ಅಲ್ಲವೇ ? ನಾನು ಶಿಲ್ಪಿ ಕುಲಕ್ಕೆ ಆದರ್ಶಪ್ರಾಯನಾಗಿರುವುದು ಬೇಡವೆಂದು ತಾವು ಬಯಸುತ್ತೀರಾ ? ಇಂತಹ ಮಹಾ ಅಪರಾಧವನ್ನು ಮಾಡಿದ ನಂತರ ವಿಶ್ವಕರ್ಮೇಶ್ವರನನ್ನು, ಶಿಲ್ಪಿ ಲೋಕವನ್ನು ಮೋಸಗೊಳಿಸಿದವನಾಗಿ ನಾನು ಬಾಳಲಾರೆ. ಆದ್ದರಿಂದ ನನ್ನ ಪ್ರತಿಜ್ಞೆಯು ನಡೆಯಲೇ ಬೇಕು" ಎಂದ ಜಕ್ಕಣಾಚಾರ್ಯ ನಿಷ್ಕರ್ಷ ಧ್ವನಿಯಲ್ಲಿ.

ಈ ಮಾತು ಕೇಳಿದ ಮಹಾರಾಜರು "ಆಚಾರ್ಯಸ್ವಾಮಿ, ನಿಮ್ಮ ಧರ್ಮದೀಕ್ಷೆ ಬಹು ಸೂಕ್ಷ್ಮವಾದದ್ದು. ತಾವು ಅವತಾರ ಪುರುಷರೇ. ತಮ್ಮ ಪ್ರತಿಜ್ಞೆ, ಸತ್ಯವ್ರತ, ಸದಾಚಾರ ಪರಾಯಣತೆ ಅದ್ಭುತವಾಗಿವೆ. ಯುವರಾಜನಾಗಬೇಕಾಗಿರುವ ನರಸಿಂಹದೇವನಿಗೆ ತಮ್ಮ ಪವಿತ್ರ ದಕ್ಷಿಣಹಸ್ತದಿಂದ ಅಕ್ಷತೆಗಳನ್ನು ಚೆಲ್ಲಿ ಆಶೀರ್ವದಿಸುವುದಿಲ್ಲವೇ ? ವಿಜಯ ನಾರಾಯಣ ಮೂರ್ತಿಯ ಪ್ರತಿಷ್ಠೆಯು ತಮ್ಮಿಂದ ನೆರವೇರಬೇಕಾಗಿದೆ. ಈ ಎಲ್ಲಾ ಆಸೆಗಳು ಭಗ್ನವಾಗಬೇಕಾಗಿದೆಯಾ ? ಕೃಪೆಮಾಡಿ

ಅನುಗ್ರಹಿಸಿ. ಐದು ದಿನಗಳ ಉತ್ಸವದ ನಂತರ ತಮ್ಮ ಪ್ರತಿಜ್ಞೆಯನ್ನು ತಾವು ನೆರವೇರಿಸಬಹುದು. ನಮಗೆ ಇಷ್ಟಾದರೂ ಅವಕಾಶವನ್ನು ಕಲ್ಪಿಸಿಕೊಡಿ" ಎಂದು ಕೋರಿದರು.

"ನಿಮಗೆ ಗೊತ್ತಿಲ್ಲದಂತೆಯೇ ನೀವು ಸ್ವಾರ್ಥಿಗಳಾಗುತ್ತಿದ್ದೀರಿ ಮಹಾಪ್ರಭು. ನಾನು ಪ್ರತಿಜ್ಞೆ ಮಾಡಿದ ಕ್ಷಣದಲ್ಲಿಯೇ ನನ್ನ ಬಲಗೈ ಕತ್ತರಿಸಿಕೊಂಡಿದ್ದಾಗಿದೆ. ಈಗ ಭೌತವಾಗಿ ಕಾಣಿಸುವ ಹೊರ ಹಸ್ತವನ್ನು ಮಾತ್ರವೇ ಕತ್ತರಿಸಿಕೊಳ್ಳಬೇಕಾಗಿದೆ ಅಷ್ಟೆ. ಇನ್ನು ಬಲಗೈಯನ್ನು ಆಶೀರ್ವಾದಕ್ಕಾಗಲಿ, ಕಲಾ ಸೃಷ್ಟಿಗಾಗಲಿ ಬಳಸುವುದಿಲ್ಲ" ಎಂದ ಜಕ್ಕಣಾಚಾರ್ಯ.

"ನನ್ನ ಜೀವನವನ್ನೆಲ್ಲಾ ಕಲಾ ಪೋಷಣೆಗೇ ಮುಡುಪಾಗಿರಿಸಿದ್ದೇನೆ. ಅಂತಹ ನಾನು ಕೊನೆಗೂ ಮಹಾ ಶಿಲ್ಪಿಯು ಬಲಹಸ್ತವನ್ನು ಕತ್ತರಿಸಿಕೊಳ್ಳಲು ಅಂಗೀಕರಿಸಬೇಕೇ ? ಒಂದು ಕಡೆ ಶಿಲ್ಪ ಸೃಷ್ಟಿಗೆ ಪೋಷಕನಾಗಿ ಇನ್ನೊಂದು ಕಡೆ ಶಿಲ್ಪ ಸ್ರಷ್ಟನನ್ನು ಶಿಲ್ಪ ಸೃಜನೆಗೆ ಅನರ್ಹಗೊಳಿಸುವ ಕೆಲಸ ನನ್ನದಾಗಬೇಕೇ ? ಇದು ಸಾಧ್ಯವಿಲ್ಲ. ಆಚಾರ್ಯ ಸ್ವಾಮೀ, ತಾವಾದರೂ ಪ್ರಧಾನ ಸ್ಥಪತಿಗಳ ಹಸ್ತಚ್ಛೇದನದ ಪ್ರಯತ್ನವನ್ನು ತಡೆಯಬೇಕು." ಎಂದು ಮಹಾರಾಜ ರಾಮಾನುಜಾಚಾರ್ಯರ ಕಡೆ ನೋಡಿ ಪ್ರಾರ್ಥಿಸಿದ.

ರಾಮಾನುಜಾಚಾರ್ಯರು ಮಹಾರಾಜರತ್ತ ನೋಡಿ, "ಮಹಾಪ್ರಭುಗಳು ಜಕ್ಕಣಾಚಾರ್ಯರನ್ನು ಸಾಧಾರಣರೆಂದು ಭಾವಿಸಿರುವಂತೆ ತೋರುತ್ತದೆ. ಅವರು ಶಿಲ್ಪಕಲಾ ದರ್ಶನವನ್ನು ನಿರೂಪಿಸುವುದರೊಂದಿಗೆ ಮಾನವನ ಜೀವನದ ಆದರ್ಶವನ್ನು ತೋರಲು ಕೂಡ ಕೃತ ಸಂಕಲ್ಪರಾಗಿ ಅವತರಿಸಿದ್ದಾರೆ. ಚೋಳ ಮಹಾರಾಜರು ನಮಗೆ ವಿಧಿಸಲಿದ್ದ ಮರಣದಂಡನೆಯಿಂದ ನಮ್ಮನ್ನು ತಪ್ಪಿಸಿದವರು ಈ ಮಹಾನುಭಾವರೇ ಎಂಬುದು ಇತ್ತೀಚೆಗೆ ಕೂರಕನಾಥನಿಂದ ಗೊತ್ತಾಯಿತು. ನಾವು ಇದುವರೆವಿಗೂ ನಡೆಸಿರುವ ವೈಷ್ಣವ ಮತದ ಪ್ರಚಾರಕ್ಕೆ ಪ್ರಧಾನ ಕಾರಣವೂ ಆಚಾರ್ಯರೇ. ಇವರು ಯಾವುದೇ ಕೆಲಸವನ್ನು ಪ್ರಖ್ಯಾತಿ, ಪ್ರತಿಷ್ಠೆಗಳನ್ನು ಬಯಸಿ ಮಾಡುವವರಲ್ಲ. ಭಗವಂತನ ಆದೇಶವನ್ನು ಅನುಸರಿಸುವುದೇ ಅವರ ಜೀವನ. ತಿರುಪತಿ, ಸಿಂಹಾಚಲಗಳಲ್ಲಿ ಇವರನ್ನು ಬಹು ಹತ್ತಿರದಿಂದ ಕಾಣುವ ಅವಕಾಶ ದೊರೆತಿತ್ತು. ಆ ಅನುಭವದಿಂದ ಹೇಳುತ್ತೇವೆ. ಇಂತಹ ಪರಮ ಗಂಭೀರ ಸ್ವಭಾವಿಗಳನ್ನು ನಾನು ಇದುವರೆಗೆ ನೋಡಿಲ್ಲ. ಇಂತಹವರ ಪ್ರತಿಜ್ಞೆಗೆ ಅಡ್ಡಿಯನ್ನು ಹೇಳುವ ಸಾಹಸವನ್ನು ನಾವು ಮಾಡುವುದಿಲ್ಲ. ಅವರ ಪರಮ ಪವಿತ್ರ ವರ್ತನೆಗಳು ಎಲ್ಲಾ ಮಾನವರಿಗೂ ಆದರ್ಶಪ್ರಾಯವಾದುವು. ಧರ್ಮಸೂತ್ರಗಳನ್ನು ಇಷ್ಟೊಂದು ಖಚಿತವಾಗಿ, ಸೂಕ್ಷ್ಮವಾಗಿ ಆಚರಿಸುವವರು ಬಹು ವಿರಳ. ಇಂತಹವರು ಯಾವ ದೇಶದಲ್ಲಾದರೂ, ಯಾವ ಕಾಲದಲ್ಲಾದರೂ ವಿರಳವೇ" ಎಂದರು.

ಅಲ್ಲಿಯೇ ಇದ್ದ ಮಹಾಮಂತ್ರಿ ಅಕ್ಕಣ್ಣ "ಮಹಾಪ್ರಭು, ಆಚಾರ್ಯರು ಸತ್ಯವಚನಿಗಳು. ದೃಢವ್ರತಧಾರಿಗಳು. ಧರ್ಮನಿರತರು. ಆಡಿದಂತೆಯೇ ಅಕ್ಷರಶಃ ನಡೆಯುವವರು. ಈ ಸಂಗತಿ ನಮಗೆ ನಮ್ಮ ಬಾಲ್ಯದಿಂದಲೇ ತಿಳಿದಿದೆ. ಆದ್ದರಿಂದ ಅವರನ್ನು ಈಗ ತಡೆಯುವುದು ನಮ್ಮಿಂದಲ್ಲ, ಅವರನ್ನು ಸೃಷ್ಟಿಸಿದ ಆ ಪರಮಾತ್ಮನಿಂದಲೂ ಸಾಧ್ಯವಾಗುವುದಿಲ್ಲ. ಯುಗಕ್ಕೆ ಒಬ್ಬರೋ ಇಬ್ಬರೋ ಇಂತಹ ಆದರ್ಶ ಪುರುಷರು ಹುಟ್ಟುತ್ತಾರೆ. ಹುಟ್ಟಿ ಲೋಕಕ್ಕೆ ಧರ್ಮದ ದಾರಿಯನ್ನು ತೋರುತ್ತಾರೆ. ಅಂತಹವರನ್ನು ಅನುಸರಿಸಿ ಧನ್ಯರಾಗುವುದೇ ಲೋಕದ ಕರ್ತವ್ಯ.

ಆಚಾರ್ಯರು ತಮ್ಮ ಹಸ್ತವನ್ನು ಕಡಿದುಕೊಂಡರೂ ಅವರ ಅಮೋಘವಾದ ಆಶೀರ್ವಾದ ನಮ್ಮೆಲ್ಲರ ಮೇಲೆ ಇದ್ದೇ ಇರುತ್ತದೆ. ಹೊಯ್ಸಳ ಸಾಮ್ರಾಜ್ಯಕ್ಕೆ ಅವರ ಆಶೀರ್ವಾದವೇ ರಕ್ಷಾ ಕವಚ. ಇನ್ನು ಅವರ ಪ್ರತಿಜ್ಞಾ ನಿರ್ಣಯಕ್ಕೆ ನಾವು ಅಡ್ಡಿ ಹೇಳುವುದು ಬೇಡ. ಆಚಾರ್ಯರು ನಡೆಸಬೇಕಾಗಿರುವ ಪ್ರತಿಷ್ಠೆಯನ್ನು ಅವರ ಸಮಾನ ಪಾಂಡಿತ್ಯ ಉಳ್ಳ ಅನಂತಕೀರ್ತಿ ಸ್ಥಪತಿಗಳಿಂದ ಮಾಡಿಸಬಹುದು. ಈ ಮುಹೂರ್ತದಲ್ಲಿ ವಿಜಯನಾರಾಯಣ ಮೂರ್ತಿ ಪ್ರತಿಷ್ಠಾಪನೆಯನ್ನು ನಡೆಸೋಣ. ಚೆಲುವ ಚೆನ್ನಿಗರಾಯ ಸ್ವಾಮಿಯ ಪ್ರತಿಷ್ಠೆಯನ್ನು ನಿಲ್ಲಿಸೋಣ. ಇದಕ್ಕೆ ಮಹಾಪ್ರಭುಗಳು ಅಂಗೀಕರಿಸುತ್ತಾರೆ ಎಂದು ಭಾವಿಸಬಹುದೇ ?" ಎಂದು ಕೇಳಿದ.

"ಅನಂತಕೀರ್ತಿ ಸ್ಥಪತಿ ಈ ಪ್ರತಿಷ್ಠಾಕಾರ್ಯವನ್ನು ನಡೆಸುವುದು ಉಚಿತವಾದದ್ದು. ದೇವಮೂರ್ತಿಯನ್ನು ಸ್ಥಾಪನೆ ಮಾಡುವುದರಿಂದಲೇ ಶಿಲ್ಪಿಗೆ ಸ್ಥಪತಿ ಎಂಬ ಹೆಸರು ಬಂದಿದೆ. ಈ ವಿಷಯವನ್ನು ಮನಸಾರ ಮುನೀಂದ್ರನೂ ಹೇಳಿದ್ದಾನೆ. ಅದರಲ್ಲಿಯೂ ವೇದ ಶಾಸ್ತ್ರ ವಿದ್ವಾಂಸನೂ, ಸದಾಚಾರ ಸಂಪನ್ನನೂ, ಜಕ್ಕಣಾಚಾರ್ಯರ ಪ್ರಿಯಶಿಷ್ಯನೂ ಆದ ಅನಂತಕೀರ್ತಿ ಸ್ಥಪತಿಯು ಈ ಕಾರ್ಯವನ್ನು ನಿರ್ವಹಿಸಲು ಸಕಲ ವಿಧಗಳಲ್ಲೂ ಅರ್ಹನೇ ಆಗಿದ್ದಾನೆ. ಮಹಾಮಂತ್ರಿಗಳು ಸೂಚಿಸಿದಂತೆ ಚೆನ್ನಿಗರಾಯ ಸ್ವಾಮಿಯ ಪ್ರತಿಷ್ಠೆಯನ್ನು ನಿಲ್ಲಿಸಿ ವೀರ ನಾರಾಯಣ ಸ್ವಾಮಿಯ ಪ್ರತಿಷ್ಠೆಯನ್ನು ಮುಗಿಸುವುದು ಸೂಕ್ತ" ಎಂದರು ರಾಮಾನುಜಾಚಾರ್ಯ ಸ್ವಾಮಿಗಳು.

"ಚೆಲುವ ಚೆನ್ನಿಗರಾಯ ಮೂರ್ತಿಯ ಪ್ರತಿಷ್ಠೆಯನ್ನು ನಿಲ್ಲಿಸಬೇಕಾಗಿಲ್ಲ. ಲೋಪವಿಲ್ಲದ ಮೂರ್ತಿಯನ್ನು ಅವಧಿಯ ಒಳಗಾಗಿ ನಾನೇ ನಿರ್ಮಿಸಿಕೊಡುತ್ತೇನೆ. ಮಹಾ ಪ್ರಭುಗಳು ಆಜ್ಞಾಪಿಸಿದರೆ ಸಾಕು" ಎಂದ ಡಂಕಣಾಚಾರ್ಯ.

ಈ ಮಾತು ಕೇಳಿದ ಎಲ್ಲರೂ ಚಕಿತರಾದರು. "ಜಕ್ಕಣಾಚಾರ್ಯರೇ ಶಿಲ್ಪಸಾರ್ವ ಭೌಮರು ಎಂದು ಎಲ್ಲರೂ ಹೇಳುತ್ತಿದ್ದರೆ ಅವರ ಮಗ ಅವರನ್ನೂ ಮೀರಿಸಿದವನಾಗಿದ್ದಾನೆ! ತಂದೆ-ಮಗ ಎಂಥಾ ಜೋಡಿ!" ಎಂದುಕೊಂಡರು.

ಮಹಾರಾಜರು ಮಹಾಮಂತ್ರಿಯ ಸಲಹೆಯನ್ನು ಅಂಗೀಕರಿಸಿದರು.

ಜಕ್ಕಣಾಚಾರ್ಯ ಎಲ್ಲರ ಮುಂದೆಯೇ ತನ್ನ ಬಲಹಸ್ತವನ್ನು ಕತ್ತರಿಸಿಕೊಂಡು ತನ್ನ ಪ್ರತಿಜ್ಞೆಯನ್ನು ಪಾಲಿಸಿದ. ಈ ಭಯಂಕರ ದೃಶ್ಯವನ್ನು ಕಂಡವರೆಲ್ಲರೂ ತಲ್ಲಣಿಸಿ ಹೋದರು. ಇಹದ ಸುಖಗಳನ್ನು ತೃಣೀಕರಿಸಿ ಧರ್ಮ, ಸತ್ಯಗಳನ್ನು ಆರಾಧಿಸಲು ಇಷ್ಟಪಟ್ಟ ಶಿಲ್ಪಿ ಸಾಧಾರಣನಾಗಿರಲು ಸಾಧ್ಯವೇ?

ಈ ದೃಶ್ಯವನ್ನು ಕಂಡ ಕೀರ್ತಿಮತಿ ಪರಿವರ್ತನೆಗೆ ತುತ್ತಾದಳು. ಆಕೆಯಲ್ಲಿದ್ದ ಸ್ವಾರ್ಥದಿಂದ ಆಕೆ ಶಾಂತಲಾದೇವಿ, ನರಸಿಂಹದೇವನಿಗೆ ಉಂಟುಮಾಡಿದ್ದ ವಿಪತ್ತಿನ ಸಂದರ್ಭ ಬಾರಿಬಾರಿಗೆ ಆಕೆಯ ಮನಸ್ಸನ್ನು ಚುಚ್ಚುತ್ತಿತ್ತು. ಮನಸ್ಸು, ಮಾತು, ದೇಹಗಳಿಂದ ಯಾವ ತಪ್ಪೇ ಮಾಡಿದ್ದರೂ ಅದಕ್ಕೆ ಶಿಕ್ಷೆ ಅನುಭವಿಸಲೇ ಬೇಕೆಂದು ಶಿಲ್ಪಾಚಾರ್ಯ ಹೇಳಿದ ಮಾತು ಆಕೆಯ ಕಿವಿಯಲ್ಲಿ ಗುಂಯ್‌ಗುಟ್ಟುತ್ತಿತ್ತು. ಪಶ್ಚಾತ್ತಾಪವೇ ಪಾಪವನ್ನು ಸವೆಸುವ ಮಾರ್ಗ ಎಂಬುದು ತಿಳಿದಿದ್ದಳು. ಈಗ ಆ ಮಾರ್ಗದ ವಿನಾ ಬೇರೆ ಮಾರ್ಗ ಕಾಣಿಸಲಿಲ್ಲ. ಮನಸ್ಸಿನಲ್ಲಿಯೇ ತನ್ನ ತಪ್ಪನ್ನು ಕ್ಷಮಿಸಬೇಕೆಂದು ಭಗವಂತನನ್ನು ಪ್ರಾರ್ಥಿಸಿದಳು. ಜಕ್ಕಣಾಚಾರ್ಯನಂತಹ ಲೋಕೋತ್ತರ ವ್ಯಕ್ತಿಯು

ಇತರರ ತಪ್ಪುಗಳನ್ನೂ ತನ್ನ ಮೇಲೆಯೇ ಹಾಕಿಕೊಂಡು ವರ್ತಿಸಿದ ರೀತಿ ಆಕೆಯಲ್ಲಿ ಬಹುವಾದ ಪರಿವರ್ತನೆಗೆ ಕಾರಣವಾಗಿತ್ತು. ಈ ಮಹಾಚಾರ್ಯ ಸ್ವಾಮಿಯನ್ನು ಗುರುದೇವನಾಗಿ ತನ್ನ ಮನಸ್ಸಲ್ಲಿ ಪ್ರತಿಷ್ಠಿಸಿಕೊಂಡು ಇನ್ನು ಮುಂದೆ ಅವರು ತೋರುವ ಧರ್ಮಮಾರ್ಗದಲ್ಲಿ ನಡೆಯಬೇಕೆಂದು ತೀರ್ಮಾನಿಸಿದಳು.

ಜಕ್ಕಣಾಚಾರ್ಯನ ಧರ್ಮನಿಷ್ಠೆ, ಪ್ರತಿಜ್ಞಾಪಾಲನೆ, ಮಹಾರಾಣಿ ಶಾಂತಲಾದೇವಿಗೆ ಆಶ್ಚರ್ಯವನ್ನುಂಟುಮಾಡಿತ್ತು. ಹೆಂಗಸರಲ್ಲಿ ಆತನಿಗೆ ಇದ್ದ ಗೌರವಕ್ಕೆ ಆಕೆ ಚಕಿತಳಾಗಿದ್ದಳು. 'ಒಬ್ಬ ಪತಿವ್ರತೆಯನ್ನು ನಿರಾಧಾರವಾಗಿ ಶಂಕಿಸಿದ್ದಕ್ಕೇ ಈ ರೀತಿಯ ಶಿಕ್ಷೆ ಅನುಭವಿಸಬೇಕಾಯಿತು' ಎಂಬ ಕರ್ಮ ಸಿದ್ಧಾಂತವನ್ನು ಕೇಳಿ ಆಚಾರ್ಯ ಮಹಾಜ್ಞಾನಿ ಎಂದುಕೊಂಡಳು. 'ಭಗವದ್ಗೀತೆಯಲ್ಲಿ ಇದೇ ಕಾರಣಕ್ಕಾಗಿಯೇ ಜ್ಞಾನಿಗೆ ಭಗವಂತನು ಸರ್ವೋತ್ಕೃಷ್ಟವಾದ ಸ್ಥಾನವನ್ನು ಕೊಟ್ಟಿದ್ದಾನೆ. ಜ್ಞಾನಿಗೂ ಭಗವಂತನಿಗೂ ಭೇದವಿಲ್ಲ ಎಂದು ಹೇಳುತ್ತಾನೆ. ಇಂತಹ ಮಹನೀಯರೇ ಭಗವಂತನ ಸಮಾನರಾದವರು ಎನ್ನುವುದರಲ್ಲಿ ತಪ್ಪೇನಿದೆ ? ಇಂತಹ ಕರ್ಮಸಿದ್ಧಾಂತದ ತಿಳಿವು, ಸತ್ಕರ್ಮ ಪರಾಯಣತೆ, ಆತ್ಮ ದೋಷದ ಪರಿಜ್ಞಾನ ಯಾರಿಗೆ ತಾನೇ ಇರಲು ಸಾಧ್ಯ ? ಭಕ್ತಿ-ಜ್ಞಾನ-ವೈರಾಗ್ಯಗಳು ಜಕ್ಕಣಾಚಾರ್ಯನ ಬದುಕಿನಲ್ಲಿ ಮುಪ್ಪುರಿಗೊಂಡಿದೆ. ತನಗೆ ಗೊತ್ತಿರುವಂತೆ ಆಚಾರ್ಯನ ಬದುಕೆಲ್ಲವೂ ಬಹು ಅರ್ಥಗರ್ಭಿತವಾದ ಘಟನೆಗಳಿಂದಲೇ ತುಂಬಿದೆ. ಇಂತಹ ದೊಡ್ಡ ಜೀವವನ್ನು ಎಷ್ಟುಮಂದಿ ಅರ್ಥ ಮಾಡಿಕೊಳ್ಳಬಲ್ಲರು ? ತನಗೆ ಗೊತ್ತಿರುವಂತೆ ಆಚಾರ್ಯರ ಬದುಕಿನ ಘಟನೆಗಳೆಲ್ಲಾ ಬಹು ಅರ್ಥ ಪೂರ್ಣವಾಗಿಯೇ ಘಟಿಸಿವೆ. ಮತಗಳ ಬಗ್ಗೆ ಕೂಡ ಅವರಲ್ಲಿ ಎಂತಹ ಗಂಭೀರವಾದ ಭಾವನೆಗಳಿವೆ ! ಜೈನ-ಬೌದ್ಧಗಳ ಬಗ್ಗೆಯಾಗಲಿ, ಶೈವ-ವೈಷ್ಣವಗಳ ಬಗ್ಗೆಯಾಗಲಿ ಆತನೆಂದೂ ಗುಲಗಂಜಿಯ ತೂಕವೂ ಅಂತರ ತೋರಿದವಲ್ಲ. ತಾನೇ ಶೈವನಾಗಿದ್ದರೂ ರಾಮಾನುಜಾಚಾರ್ಯರು ವೈಷ್ಣವ ಮತ ವಿಸ್ತರಣೆಗೆ ನೆರವು ಕೇಳಿದರೆ ಪೂರ್ಣಹೃದಯದಿಂದ ಸಹಕರಿಸಿದ್ದಾರೆ. ಈ ಮತಗಳಿಗೆಲ್ಲಾ ಅತೀತವಾದ ಒಂದು ಸಿದ್ಧಿಯನ್ನು ಅವರು ಪಡೆದಿರುವಂತೆ ಭಾಸವಾಗುತ್ತದೆ. ಇದೇ ಅಂಶವೇ ಬದುಕಿನ ಅಂಶಗಳನ್ನು ಸಾರುತ್ತವೆ.' ಎಂದು ಮನದಲ್ಲಿ ಹೇಳಿಕೊಂಡಳು ಪಟ್ಟಮಹಿಷಿ ಶಾಂತಲಾದೇವಿ. ಇಂತಹ ಮಹಾಮಹಿಮರು ತಮಗೆ ಆಚಾರ್ಯರಾಗಿ ದೊರೆತಿರುವುದೇ ತಮ್ಮ ಬದುಕಿನ ಪರಮ ಸೌಭಾಗ್ಯವೆಂದು ಆಕೆ ಭಾವಿಸಿ ಆನಂದ ಪರವಶಳಾದಳು.

ಏನೇ ನಡೆದರೂ ಸ್ವಲ್ಪವೂ ವಿಚಲಿತಳಾಗದ ಸಹಜಾದೇವಿ ಕೂಡ ಈ ಲೋಕೋತ್ತರ ಘಟನೆಗೆ ಬಹುವಾಗಿ ಚಲಿಸಿದಳು. ಇಂತಹ ಮನುಷ್ಯರೂ ಇರುತ್ತಾರೆ ಎಂಬುದನ್ನು ಆಕೆ ಆಗ ಗ್ರಹಿಸಿದಳು. ಬದುಕಿನಲ್ಲಿ ನಿರ್ದಿಷ್ಟವಾದ ಗುರಿಯೊಂದನ್ನು ಏರ್ಪಡಿಸಿಸಕೊಂಡು ಮುಂದೆ ಸಾಗಬೇಕೆಂದು ಅದಕ್ಕೆ ಮಹಾಪುರುಷರ ಜೀವನ ಮಾರ್ಗವನ್ನು ಅನುಸರಿಸಬೇಕೆಂದು ಆಕೆ ಅರ್ಥಮಾಡಿಕೊಂಡಳು. ಐಹಿಕವಾದ ಅಲ್ಪ ಪ್ರಯೋಜನಗಳನ್ನು ಆಶಿಸಿ ಸ್ವಾರ್ಥಾಂಧರಾಗಿ ಸಕಲ ದುಷ್ಕೃತ್ಯಗಳನ್ನೂ ಮಾಡುತ್ತಾ ಬದುಕುವವರ ಜೀವನಗಳು ಹಂದಿಗಳ ಜೀವನದಂತೆ. ಮೇಲ್ನೋಟಕ್ಕೆ ಯಾವುದೇ ಬದಲಾವಣೆಗೆ ಒಳಪಡದವಳಂತೆ ಕಾಣಿಸಿದರೂ ಅಂತರಂಗದಲ್ಲಿ ಹಲವು ದೃಢನಿರ್ಣಯಗಳನ್ನು ಕೈಗೊಂಡಳು.

ಹುಟ್ಟುವಾಗ ಜಗವನ್ನೆಲ್ಲಾ ತನ್ನ ದಿವ್ಯ ರಕ್ತಕಾಂತಿಯಿಂದ ಕೆಂಪು ಗೊಳಿಸುವಂತೆ,

ಚಂದ್ರೋದಯಕ್ಕೆ ಅವಕಾಶ ನೀಡಲು ಪಡುವಣ ದಿಕ್ಕಿನಲ್ಲಿ ಸೂರ್ಯನು ಮುಳುಗುವಾಗ ಆಕಾಶಕ್ಕೆ ಕೆಂಪು ಬಣ್ಣವನ್ನು ಮೆತ್ತಿದ ಸೂರ್ಯನಂತೆ, ಜಕ್ಕಣಾಚಾರ್ಯನು ರಕ್ತಮಯನಾಗಿದ್ದ. **ಪುತ್ರಾದಿಚ್ಛೇತ್ ಪರಾಜಯಮ್** ಎನ್ನುವಂತೆ ಜಗತ್ತನ್ನು ತಂದೆ ಗೆದ್ದರೆ, ಆ ತಂದೆಯನ್ನು ಮಗ ಗೆದ್ದಿದ್ದ. ಮಗನ ಮುಂದೆ ತಂದೆ ಸೋಲನ್ನು ಅಂಗೀಕರಿಸಬೇಕಾಯಿತು. ಬದುಕಿನಲ್ಲಿ ಒಂದು ಗುರಿ ತನಗಿಂತಲೂ ಹೆಚ್ಚು ಶ್ರೇಷ್ಠನಾದ ಮಗನನ್ನು ರೂಪಿಸುವುದು ಅಲ್ಲವೇ ? ಹಾಗಿದ್ದರೆ ಜಕ್ಕಣಾಚಾರ್ಯರಿಗೆ ಇದು ಸೋಲೋ ಗೆಲುವೋ ಯಾರು ಹೇಳಲು ಸಾಧ್ಯವಿದೆ?

ಬಾಲಶಿಲ್ಪಿಯಾದ ಡಂಕಣಾಚಾರ್ಯ ಮುಹೂರ್ತಕ್ಕೂ ಮೊದಲೇ ಚೆಲುವ ಚೆನ್ನಿಗರಾಯ ಮೂರ್ತಿಯನ್ನು ಶಾಸ್ತ್ರೋಕ್ತವಾಗಿ, ಮಾನಾನುಗುಣವಾಗಿ, ಸರ್ವಾಂಗ ಸುಂದರವಾಗಿ ರೂಪಿಸಿ ಕಂಡರಿಸಿದ್ದ. ಈ ಮೂರ್ತಿ ವಿಷ್ಣುವಾದುದರಿಂದ, ವಿಷ್ಣುವು ಸತ್ವಗುಣೋಪೇತನಾಗಿರು ವುದರಿಂದ ಸಾತ್ವಿಕ ಶಿಲೆಯನ್ನು ಕುಮಾರ ಶಿಲ್ಪಿಯೇ ಆರಿಸಿದ್ದ. ವೇಲಾಪುರಿ ದೇವಾಲಯದಲ್ಲಿ ಚೆನ್ನಿಗರಾಯ, ವಿಜಯನಾರಾಯಣ ಮೂರ್ತಿಗಳ ಪ್ರತಿಷ್ಠೆಯು ರಾಮಾನುಜಾಚಾರ್ಯರ ದಿವ್ಯ ಸನ್ನಿಧಿಯಲ್ಲಿ ಅನಂತಕೀರ್ತಿ ಸ್ಥಪತಿಯು ಪ್ರತಿಷ್ಠಾ ಕ್ರಿಯೆಗಳಲ್ಲಿ ಪಾಲ್ಗೊಂಡು ಯಾವ ತೃಟಿಗೂ ಅವಕಾಶವಿಲ್ಲದಂತೆ ಮಾಡಿದ್ದ. ಈ ಮಹೋತ್ಸವಕ್ಕೆ ಸೌಪರ್ಣೀದೇವಿ, ಬಂದಿದ್ದನು. ತನ್ನ ಪತಿಯನ್ನು ನೋಡಿ ಬಹು ಸಂತೋಷಿಸಿದ್ದಳು. ತನ್ನ ಮಗನ ಪರಿಣಿತಿಗೆ ಹೆಮ್ಮೆಪಟ್ಟಿದ್ದಳು. ಆದರೆ ಗಂಡನ ಅಂಗ ವೈಕಲ್ಯಕ್ಕೆ ಕಣ್ಣೀರು ಸುರಿಸಿದ್ದಳು. ಭಗವಂತನ ಇಚ್ಛೆಯ ಮುಂದೆ ತಾನೇನು ತಾನೇ ಮಾಡಲು ಸಾಧ್ಯವಿದೆ?

ದೇವ ಪ್ರತಿಷ್ಠಾ ಕಾರ್ಯಕ್ಕೆ ನಡೆಸಬೇಕಾಗಿರುವ ಕಾರ್ಯಗಳು ಅನೇಕವಾಗಿವೆ. ಕ್ಷೀರಾಧಿವಾಸ, ಜಲಾಧಿವಾಸ, ಧಾನ್ಯಾಧಿವಾಸ, ಪೀಠ ಸ್ಥಾಪನೆ, ರತ್ನನ್ಯಾಸ, ಅಷ್ಟಬಂಧನೆ, ಪ್ರಾಣ ಪ್ರತಿಷ್ಠೆ, ದೃಕ್ ಸಂಸ್ಥಾಪನೆ, ಧ್ವಜ ಕಲಶಾದಿಗಳ ಪ್ರತಿಷ್ಠೆ ಮುಂತಾದುವೆಲ್ಲಾ ನಡೆಯಬೇಕು. ಇವುಗಳಲ್ಲಿ ದೃಕ್ ಸಂಸ್ಥಾಪನೆಯು ಬಹು ಸೂಕ್ಷ್ಮವಾದ ಕೆಲಸ. ಕಣ್ಣಿನಲ್ಲಿ ಶ್ವೇತ-ಕೃಷ್ಣ-ರಕ್ತ ಮಂಡಲಗಳೆಂದು ತ್ರಿಮೂರ್ತಿಗಳ ಸಂಕೇತವಾಗಿದೆ. ಇವನ್ನು ಸೂರ್ಯ- ಚಂದ್ರ-ಅಗ್ನಿಗಳೆಂದೂ ಭಾವಿಸುತ್ತಾರೆ. ಇವು ಸಲಕ್ಷಣವಾಗಿ ಇಲ್ಲದಿದ್ದರೆ ವಿಪರೀತ ಫಲಗಳಿಗೆ ಹಾದಿ ತೆರೆಯುತ್ತದೆ. ಅದೇ ರೀತಿಯಾಗಿ ದೃಷ್ಟಿಗಳಲ್ಲೂ ಹಲವು ಬಗೆಗಳಿವೆ. ಅದು ತಪ್ಪಿದರೂ ವಿಪರೀತ ಫಲಗಳೇ. ವಿದೃಷ್ಟಿಯು ಅರ್ಚಕನು, ಯಜಮಾನರು ನಶಿಸುವಂತೆ ಮಾಡುತ್ತದೆ. ಉರ್ಧ್ವದೃಷ್ಟಿಯು ರಾಜನನ್ನು ರಾಷ್ಟ್ರವನ್ನು ಹಾಳುಗೆಡುವುತ್ತದೆ. ಅಧೋ ದೃಷ್ಟಿಯು ಕ್ಷಾಮ ಡಾಮರಗಳು, ಯುದ್ಧಕ್ರಾಂತಿಗಳನ್ನು ತರುತ್ತದೆ. ಪಾರ್ಶ್ವ ದೃಷ್ಟಿಯು ಯಜಮಾನನ ಬಂಧುಗಳಿಗೆ ಕೇಡನ್ನುಂಟು ಮಾಡುತ್ತದೆ. ನಾಸಾಗ್ರದೃಷ್ಟಿಯು ಸ್ಥಾನ ನಾಶ, ನಷ್ಟ, ಕ್ಷಯವನ್ನುಂಟು ಮಾಡುತ್ತದೆ ಇಂತಹ ದೋಷಗಳು ಬರದಂತೆ ಸಮದೃಷ್ಟಿಯನ್ನು ಮೂರ್ತಿಯಲ್ಲಿ ಶಿಲ್ಪಾಚಾರ್ಯನು ಕಲ್ಪಿಸಬೇಕು. ದೇವತೆಗಳಾಗಲಿ, ಮಾನವರಾಗಲಿ, ಮತ್ಯಾರೇ ಆಗಲಿ ಸಮದೃಷ್ಟಿಯುಳ್ಳವರೇ ಆಗಿರಬೇಕು. ಯಾರೇ ಆಗಿದ್ದರೂ ದೇಶ ಕಲ್ಯಾಣವನ್ನು ಸಾಧಿಸುವವರೇ ಆಗಿರಬೇಕಲ್ಲವೇ ?

ದೇವತಾಮೂರ್ತಿಗಳಲ್ಲೂ ಉಗ್ರ, ವೀರ, ಶಾಂತ, ಪ್ರಸನ್ನ ಮುಂತಾದ ಭೇದಗಳಿವೆ. ಯಾವ ಜಾತಿಯ ಮೂರ್ತಿಗೆ ಯಾವ ರೀತಿಯ ದೃಷ್ಟಿಯನ್ನು ಕಲ್ಪಿಸಬೇಕೆಂಬುದು ಶಾಸ್ತ್ರಗಳಲ್ಲಿವೆ ಆದರೂ ಶಾಸ್ತ್ರಾನುಭವಿಗಳಾದ ಶಿಲ್ಪಿಗಳಲ್ಲಿ ಅಭ್ಯಾಸದಿಂದಲೇ ಕಲಿಯಬೇಕು. ಈ ವಿಜಯ

ನಾರಾಯಣಸ್ವಾಮಿ ದೇಶದ ವಿಜಯ, ಆಯುರಾರೋಗ್ಯ ಐಶ್ವರ್ಯ ಸುಖ ಸಂಮೃದ್ಧಿಗಳಿಗಾಗಿ ಪ್ರತಿಷ್ಠಿಸಲ್ಪಡುತ್ತಿದ್ದುದರಿಂದ ಶಾಂತ ಪ್ರಸನ್ನ ಮುದ್ರೆಯನ್ನು ಹೊಂದಿದ್ದು ಅಭಯ ಪ್ರದಾಯನಾಗಿರಬೇಕು.

ಅನಂತಕೀರ್ತಿ ಸ್ಥಪತಿಯು ಮಂತ್ರಪೂತಚಿತ್ತನಾಗಿ ತಾಮ್ರ ಶಲಾಕೆಯನ್ನು ತೆಗೆದು ಕೊಂಡು **ಸೂರ್ಯಶ್ಚ** ಎಂಬ ಮಂತ್ರವನ್ನು ಪಠಿಸುತ್ತಾ ಬಿಂಬ ನೇತ್ರದಲ್ಲಿ ಜ್ಯೋತಿರ್ಮಂಡಲವನ್ನು ಬರೆದ. ಬೆಳ್ಳಿ ಶಲಾಕೆಯಿಂದ **ಅಗ್ನಿಶ್ಚ** ಎಂಬ ಮಂತ್ರವನ್ನು ಪಠಿಸುತ್ತಾ ಕೃಷ್ಣ ಮಂಡಲವನ್ನು ಲಿಖಿಸಿದ. ಬಂಗಾರದ ಶಲಾಕೆಯಿಂದ **ಅಸತ್ಯೇನ** ಎಂಬ ಮಂತ್ರವನ್ನು ಪಠಿಸುತ್ತಾ ಶ್ವೇತಮಂಡಲವನ್ನು ಲಿಖಿಸಿದ. **ಚಕ್ಷುರ್ನಿರ್ಮಿತಂ** ಎಂಬ ಮಂತ್ರವನ್ನು, ಇನ್ನೂ ಹಲವಾರು ಮಂತ್ರಗಳನ್ನೂ, ಬೀಜಾಕ್ಷರಗಳನ್ನೂ ಜಪಿಸುತ್ತಾ ಊರ್ಧ್ವ, ಅಧೋ, ಮಧ್ಯ ರೇಖೆಗಳನ್ನು, ವಾಮ, ದಕ್ಷಿಣ ನೇತ್ರ ಭಾಗಗಳನ್ನು ಪೂರ್ತಿ ಮಾಡಿದ. ಈ ವಿಧವಾಗಿ ತ್ರಿಮೂರ್ತ್ಯಾತ್ಮಕವಾದ ರಕ್ತ-ಕೃಷ್ಣ-ಶ್ವೇತ ಮಂಡಲಗಳನ್ನು ಜ್ಯೋತಿರ್ಮಂಡಲವನ್ನು ನಿರ್ಮಿಸಿ ಈ ದಿವ್ಯ ಮೂರ್ತಿಗಳ ಕಣ್ತೆರೆಸಿದ. ಉಳಿದೆಲ್ಲಾ ಕಾರ್ಯಗಳು ಯಶಸ್ವಿಯಾಗಿ ನಡೆದು ದೈವ ಪ್ರತಿಷ್ಠಾ ಕಾರ್ಯವು ಮಹಾ ವೈಭವದಿಂದ ನಡೆಯಿತು.

ಇನ್ನು ನಡೆಯಬೇಕಾದ್ದದ್ದು ಕುಮಾರ ನರಸಿಂಹ ದೇವನ ಯುವರಾಜ ಪಟ್ಟಾಭಿಷೇಕ. ಕೀರ್ತಿಮತಿಯು ಈ ಪಟ್ಟಾಭಿಷೇಕ ಕಾರ್ಯಭಾರವನ್ನು ಪೂರ್ತಿಯಾಗಿ ವಹಿಸಿಕೊಂಡಳು. ಇದುವರೆವಿಗೂ ನನ್ನ ಕುಮಾರ ವರ್ಧಮಾನನೇ ಯುವರಾಜನಾಗಬೇಕು, ತಾನು ರಾಜಮಾತೆ ಯಾಗಬೇಕು ಎಂದು ಆಶಿಸುತ್ತಿದ್ದವಳು ಈಗ ಪೂರ್ಣವಾಗಿ ಬದಲಾಗಿದ್ದಳು. 'ಶಾಂತಲಾದೇವಿ ಪಟ್ಟದ ರಾಣಿ. ಆಕೆಯ ಮಗ ನರಸಿಂಹದೇವನು ನನ್ನ ಮಗನಿಗಿಂತಲೂ ಹಿರಿಯ. ಅವನೇ ಯುವರಾಜನಾಗುವುದು ನ್ಯಾಯ. ಇಷ್ಟರಿಂದ ತನ್ನ ಮಗನಿಗೆ ಗೌರವಕ್ಕೆ ಚ್ಯುತಿಯುಂಟಾಗುವುದೇ? ಪಟ್ಟದರಾಣಿ, ನರಸಿಂಹದೇವ ಇಬ್ಬರೂ ಬಹಳ ಒಳ್ಳೆಯವರು. ನಮ್ಮನ್ನು ಅವರು ಖಂಡಿತವಾಗಿಯೂ ಕ್ಷುಲ್ಲಕವಾಗಿ ಕಾಣುವುದಿಲ್ಲ. ವರ್ಧಮಾನನಿಗೂ ಅಣ್ಣನ ಮೇಲೆ ಹೆಚ್ಚು ಪ್ರೀತಿ ಇದೆ. ಅವನನ್ನು ಭರತ ಎಂದರೂ ತಪ್ಪಿಲ್ಲ. ಸೋದರರ ಈ ಮೈತ್ರಿಯನ್ನು ಅಧಿಕಾರದ ಕಾರಣಕ್ಕಾಗಿ ಹಾಳು ಮಾಡುವುದು ಸರಿಯಲ್ಲ. ಧರ್ಮ, ನ್ಯಾಯ, ಸತ್ಯಗಳನ್ನು ದೇವರೆಂದೇ ಪೂಜಿಸಬೇಕು. ಇಲ್ಲದಿದ್ದರೆ ಬದುಕಿನಲ್ಲಿ ಸಫಲತೆ ಸಾಧಿಸುವ ಬಗೆಯಾದರೂ ಯಾವುದು ? ಪ್ರತಿ ಪ್ರಾಣಿಯೂ ತಾನು ಮಾಡಿದ ಶುಭ-ಅಶುಭ ಕರ್ಮಗಳ ಫಲವನ್ನು ಅನುಭವಿಸದೆ ಇರಲು ಸಾಧ್ಯವೇ ಇಲ್ಲ. ಇದು ನಮ್ಮ ಗುರುಗಳಾದ ಜಕ್ಕಣಾಚಾರ್ಯ ತೋರಿರುವ ಮಾರ್ಗ. ಆ ಮಾರ್ಗದಲ್ಲಿ ನಡೆಯುವುದೇ ನಮ್ಮ ಪಾಲಿಗೆ ಶ್ರೇಯಸ್ಕರ.' ಎಂದು ಭಾವಿಸಿಕೊಂಡು ಕೀರ್ತಿಮತಿಯು ಹೃತ್ಪೂರ್ವಕವಾಗಿ ನರಸಿಂಹದೇವನ ಪಟ್ಟಾಭಿಷೇಕಕ್ಕೆ ಅಕ್ಕರೆಯಿಂದ ಕೆಲಸಗಳನ್ನು ನಿರ್ವಹಿಸುತ್ತಿದ್ದಳು. ಈ ಬದಲಾವಣೆಯನ್ನು ಕಂಡು ಎಲ್ಲರೂ ಚಕಿತರಾದರು. ಈ ರೀತಿ ಅಂತರಂಗದ ಪರಿವರ್ತನೆ ಎಷ್ಟು ಮಂದಿಯಲ್ಲಿ ಉಂಟಾಗಿತ್ತೋ ಯಾರು ಹೇಳಬಲ್ಲರು ? ಯಾರೂ ಯಾರಿಗೂ ತೊಂದರೆ ಉಂಟುಮಾಡಬಾರದೆಂದು ತೀರ್ಮಾನಿಸಿಕೊಂಡು ಬದುಕಿದರೆ ಸಾಕು ಮತ ಕಲಹಗಳು, ಕುಲ ದ್ವೇಷಗಳು, ರಾಜಕೀಯ ವಿವಾದಗಳು, ವ್ಯಕ್ತಿ ದ್ವೇಷಗಳು ಮನುಷ್ಯರ ಮನಸ್ಸಿನಿಂದಲೇ ಮಾಯವಾಗುತ್ತವೆ.

ವೇಲಾಪುರಿಯ ಕಲಾ ಭವನದಲ್ಲಿಯೇ ನರಸಿಂಹದೇವನ ಯುವರಾಜ ಪಟ್ಟಾಭಿಷೇಕವನ್ನು ಏರ್ಪಡಿಸಲಾಗಿತ್ತು. ಅನಂತಕೀರ್ತಿ ಸ್ಥಪತಿಯು ಯಜುರ್ವೇದದಲ್ಲಿಯ **ಯೇಭಿಶ್ಶಿಲ್ಪೈಃ** ಎಂಬ ಪಟ್ಟಾಭಿಷೇಕ ಸೂಕ್ತವನ್ನು ಪಠಿಸಿ, ಯುವರಾಜನು ವರ್ಚಸ್ವಿಯಾಗಬೇಕೆಂದು ಆಶೀರ್ವದಿಸಿದ. ರಾಮಾನುಜಾಚಾರ್ಯರ ಅಮೋಘ ಆಶೀರ್ವಾದವನ್ನು ಯುವರಾಜ ಪಡೆದುಕೊಂಡ. ಜಕ್ಕಣಾಚಾರ್ಯನು ಯುವರಾಜನಿಗೂ, ಕುಮಾರ ಡಂಕಣಾಚಾರ್ಯನಿಗೂ ಸಕಲ ಯಶಸ್ಸು ಪ್ರಗತಿಗಳನ್ನು ಕೋರಿದ. ದೇಶದಲ್ಲಿ ಕಲಾಧರ್ಮವೇ ವ್ಯಾಪಕವಾಗಿ ಸಕಲರಿಗೂ ಶಾಂತಿಯನ್ನು, ತೃಪ್ತಿಯನ್ನು, ಸುಖವನ್ನು, ಪುಷ್ಟಿಯನ್ನು ಉಂಟುಮಾಡಲಿ ಎಂದು ಪ್ರಾರ್ಥಿಸಿದ.

ಜಕ್ಕಣಾಚಾರ್ಯನ ಸೇವೆಗಳನ್ನು ಸ್ಮರಿಸಿ ಆತನ ವ್ಯಕ್ತಿತ್ವ ಮತ್ತು ಮಾರ್ದವತೆಗೆ ನಮಿಸಿ ಅಂದಿನಿಂದಲೇ ಕುಮಾರ ಶಿಲ್ಪಿ ಡಂಕಣಾಚಾರ್ಯ ಆಸ್ಥಾನ ಶಿಲ್ಪಿಯಾಗಿ ನೇಮಿಸಲ್ಪಟ್ಟಿರುವುದಾಗಿ ಮಹಾಮಂತ್ರಿ ಅಕ್ಕಣ್ಣ ಪ್ರಕಟಿಸಿದ.

ಸಭೆಯು ಜಯಘೋಷಣೆ ಮಾಡಿತು.



# ಕಲಾರಾಧನೆ

ತೆಲುಗು :
**ಡಾ|| ಕೊಂಡೂರು ವೀರರಾಘವಾಚಾರ್ಯುಲು**

ಕನ್ನಡಕ್ಕೆ :
**ಸರಿತಾ ಜ್ಞಾನಾನಂದ**

ತೆಲುಗು ಸಾಹಿತ್ಯದಲ್ಲಿ ತಮ್ಮದೇ ಆದ ವಿಶಿಷ್ಟಸ್ಥಾನವನ್ನು ಗಳಿಸಿರುವ ಡಾ|| ಕೊಂಡೂರು ವೀರರಾಘವಾಚಾರ್ಯುಲು ಅವರ ಬಹು ಜನಪ್ರಿಯ ಕಾದಂಬರಿ 'ಕಲಾರಾಧನೆ'. ಹಲವು ವರ್ಷಗಳ ಕಾಲ ದಕ್ಷಿಣ ಭಾರತದ ಹನ್ನೆರಡು ವಿಶ್ವವಿದ್ಯಾನಿಲಯಗಳಲ್ಲಿ (ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳೂ ಸೇರಿದಂತೆ) ಈ ಕೃತಿಯು ಪಠ್ಯಗ್ರಂಥವಾಗಿತ್ತು ಎಂಬುದು ಈ ಕಾದಂಬರಿ ತೆಲುಗು ಸಾಹಿತ್ಯದಲ್ಲಿ ಗಳಿಸಿರುವ ಸ್ಥಾನವನ್ನು ಅರಿಯುವ ದಿಶೆಯಲ್ಲಿ ನೆರವಾಗಬಹುದು.

ಭಾರತದಲ್ಲಿ ಸ್ಥಾಪತ್ಯವೇದವೆಂದು ಪ್ರಖ್ಯಾತವಾಗಿದ್ದು, ಭಾರತೀಯ ವೈದಿಕ ಜೀವನದ ಎಲ್ಲಾ ಮುಖಗಳನ್ನೂ ಆವರಿಸಿರುವ ಶಿಲ್ಪಪರಂಪರೆಯನ್ನು ಶಾಸ್ತ್ರನಿಷ್ಠೆಯಿಂದಲೇ ಪ್ರಾಚೀನ ಶಿಲ್ಪಿಗಳ, ಸ್ಥಪತಿಗಳ ಜೀವನ ಕ್ರಮವನ್ನು ಅತ್ಯಂತ ಅಧಿಕಾರಯುತವಾಗಿ ನಿರೂಪಿಸಿರುವ ಕಾದಂಬರಿ ಇದು. ಅನೇಕ ಶಾಸ್ತ್ರ ರಹಸ್ಯಗಳು ಈ ಕಾದಂಬರಿಯಲ್ಲಿ ಮಿಳಿತವಾಗಿದ್ದು ಕೇವಲ ಡಾ|| ಕೊಂಡೂರು ಅವರೇ ಬರೆಯಬಹುದಾದ ಕಾದಂಬರಿ ಎಂದು ತೆಲುಗಿನ ವಿಮರ್ಶಕರು ಪ್ರಶಂಸಿಸಿದ್ದಾರೆ.

ಈ ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿರುವವರು ಕನ್ನಡದ ಜನಪ್ರಿಯ ಲೇಖಕಿ ಶ್ರೀಮತಿ ಸರಿತಾ ಜ್ಞಾನಾನಂದ ಅವರು. ಪ್ರಾರಂಭದಿಂದ ಅಂತ್ಯದವರೆವಿಗೂ ಅನುವಾದ ಎಂಬ ಅನುಮಾನಕ್ಕೆ ಅವಕಾಶವೇ ನೀಡದಂತೆ ಲಲಿತವಾದ ಶೈಲಿಯಲ್ಲಿ ಸಾಗಿರುವ ಈ ಕಾದಂಬರಿಯು ಓದುಗರಿಗೆ ಮುದ ನೀಡುತ್ತದೆ. ಅದರೊಂದಿಗೆ ನಮ್ಮ ಪ್ರಾಚೀನ ಸಂಸ್ಕೃತಿಯ ಪರಿಚಯವನ್ನೂ ಮಾಡಿಕೊಡುತ್ತದೆ.

**—ಸಂಪಾದಕರು**